ಸಮಗ್ರ ದಾಸ ಸಾಹಿತ್ಯ
ಸಂಪುಟ : ೧೮ ಭಾಗ-೧

# ಹೆಳವನಕಟ್ಟೆ ಗಿರಿಯಮ್ಮನ ಕೀರ್ತನೆಗಳು

*ಸಂಪಾದಕರು*
ಲೀಲಾವತಿ ಎಸ್.ರಾವ್

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA SAMPUTA - 18 Part -1 :**
*Helavanakatte Giriyammana Keerthanegalu,* Edited by Smt. Leelavathi. S. Rao and published by Sri. Y.K.Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 58 + ೩೨೨



ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

**ಮುದ್ರಣ ನಿರ್ವಹಣೆ :**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

**ಮುದ್ರಕರು :**

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩.

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

### ಕಾರ್ಯನಿರ್ವಾಹಕ ಸಂಪಾದಕರು

ಡಾ. ಶ್ರೀನಿವಾಸ ಹಾವನೂರ
ಡಾ. ಟಿ. ಎನ್. ನಾಗರತ್ನ
ಪ್ರೊ. ವಸಂತ ಕುಷ್ಟಗಿ

### ಸದಸ್ಯರು

ಡಾ. ಎಂ. ಎಂ. ಕಲಬುರ್ಗಿ
ಪ್ರೊ. ಎಂ. ರಾಜಗೋಪಾಲಾಚಾರ್ಯ (ಫೆಬ್ರವರಿ '೯೮ ರವರೆಗೆ)
ಡಾ. ಕೃಷ್ಣ ಕೊಲ್ಹಾರಕುಲಕರ್ಣಿ
ಡಾ. ಮಂದಾಕಿನಿ
ಪ್ರೊ. ಸುಧಾಕರ
ಡಾ. ಬಸವರಾಜ ಸಬರದ

### ಸದಸ್ಯ ಕಾರ್ಯದರ್ಶಿ

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮಾವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ-ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ–ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು– ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಗಿರಿಯಮ್ಮನ ಜೀವನ ವಿಚಾರ

ಹರಿದಾಸ ಪರಂಪರೆಯಲ್ಲಿ ಕೃತಿ ರಚನೆ ಮಾಡಿದ ಮಹಿಳೆಯರಲ್ಲಿ ಹೆಳವನಕಟ್ಟೆ ಗಿರಿಯಮ್ಮನ ಸ್ಥಾನ ಬಹು ಎತ್ತರದ್ದು. ಈಕೆಯ ಜನ್ಮಸ್ಥಳ ಧಾರವಾಡ ಜಿಲ್ಲೆಯ ರಾಣಿ ಬೆನ್ನೂರು. ತಂದೆಯ ಹೆಸರು ಭೀಷ್ಮಪ್ಪ ಜೋಯಿಸರು. ಹುಟ್ಟಿದ ದಿನಾಂಕವಾಗಲಿ, ಎಷ್ಟು ವರ್ಷ ಬದುಕಿದ್ದಳೆಂಬ ಬಗ್ಗೆಯಾಗಲಿ, ಖಚಿತ ಮಾಹಿತಿ ದೊರೆಯುವುದಿಲ್ಲ. ಆದರೆ ಈವರೆಗೆ ಬಂದಿರುವ ಆಕೆಗೆ ಸಂಬಂಧ ಪಟ್ಟ ಕೃತಿಗಳು ಹಾಗೂ ಲೇಖನಗಳ ಆಧಾರದಿಂದ ಆಕೆ ಬದುಕಿದ್ದ ಕಾಲವನ್ನು ಊಹಿಸಬಹುದಾಗಿದೆ. ಶ್ರೀ ರಾಘವೇಂದ್ರ ಮಠಾಧೀಶರಾಗಿದ್ದ ಶ್ರೀ ಸುಮತೀಂದ್ರ ತೀರ್ಥರನ್ನು ಮತ್ತು ಉತ್ತರಾದಿ ಮಠಾಧೀಶರಾಗಿದ್ದ ಶ್ರೀ ಸತ್ಯಬೋಧ ತೀರ್ಥರನ್ನು ತನ್ನ ಕೃತಿಗಳಲ್ಲಿ ಉಲ್ಲೇಖಿಸಿರುವುದರಿಂದಲೂ ಹಾಗೂ ಶ್ರೀ ಗೋಪಾಲದಾಸರಿಂದ ಬಾಲಗೋಪಾಲನ ಮೂರ್ತಿಯನ್ನು, ಮುದ್ರಿಕೆಯನ್ನು ಪಡೆದು ಅನುಗ್ರಹಿತಳಾಗಿದ್ದಳೆಂದು ತಿಳಿದು ಬರುವುದರಿಂದಲೂ 'ಚಂದ್ರಹಾಸನ ಕಥೆ'ಯಲ್ಲಿ ಲಕ್ಷ್ಮೀಶ ಕವಿ ತನ್ನ ಜೈಮಿನಿ ಭಾರತದಲ್ಲಿ ಹೇಳಿದ ಚಂದ್ರಹಾಸನ ಕಥೆಯನ್ನೇ 'ಚರಿತೆಯ ಮಾಡಿ ವರ್ಣಿಸುವೆ' ಎಂದು ಹೇಳಿಕೊಂಡಿರುವುದರಿಂದಲೂ ಈಕೆ ಲಕ್ಷ್ಮೀಶನ ಕಾಲವಾದ ಸುಮಾರು ಕ್ರಿ.ಶ.೧೭೦೦ ಅನಂತರದಲ್ಲಿ ಇದ್ದಳೆಂಬುದು ಖಚಿತ. ಸುಮತೀಂದ್ರ ತೀರ್ಥರ ಕಾಲ ಕ್ರಿ.ಶ.೧೬೯೧ ರಿಂದ ೧೭೨೫. ಸತ್ಯಬೋಧರ ಕಾಲ ಕ್ರಿ.ಶ.೧೭೪೪ ರಿಂದ ೧೭೮೩. ಗೋಪಾಲದಾಸರ ಕಾಲ ಕ್ರಿ.ಶ. ೧೭೨೧ ರಿಂದ ೧೭೬೩. ಇವೆಲ್ಲವನ್ನು ಗಮನಿಸಿದಾಗ ಒಟ್ಟಿನಲ್ಲಿ ಈಕೆ ೧೮ನೆಯ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ್ದಳೆಂದು ಹೇಳಬಹುದು.

ಗಿರಿಯಮ್ಮನ ಜೀವನ ಚರಿತ್ರೆ ಬಹಳಷ್ಟು ಪವಾಡಗಳಿಂದ ವರ್ಣರಂಜಿತ-ವಾಗಿದೆ. ಸತ್ಯಾಂಶಗಳನ್ನು ಅವುಗಳಿಂದ ಹುಡುಕಿ ತೆಗೆಯಬೇಕಾಗಿದೆ. ಅಲ್ಲೊಮ್ಮೆ ಇಲ್ಲೊಮ್ಮೆ ಕ್ವಚಿತ್ತಾಗಿ ದೊರೆಯುವ ಕೆಲವು ಎಳೆಗಳನ್ನು ಬಿಟ್ಟರೆ ಗಿರಿಯಮ್ಮ ತನ್ನ ಕೃತಿಗಳಲ್ಲಿ ಸ್ವಂತ ಬದುಕಿನ ವಿವರಗಳನ್ನು ನೀಡಿಲ್ಲ. ಆಕೆ ನೀಡಿರುವ ಸೂಚನೆಯ ಎಳೆಗಳ ಆಧಾರದಿಂದ ಆಕೆಯ ಬದುಕಿನ ಚಿತ್ರವನ್ನು ನೇಯಬೇಕಾಗಿದೆ.

*ತಂದೆ ತಾಯೆಂಬುದನು ನಾನೊಂದು*
*ಗುರುತವನರಿಯೆ ನಿಮ್ಮ ಕಂದಳೆನಿಸಿ*
*ಕಡೆಹಾಯಿಸೊ ಹೆಳವನಕಟ್ಟೆ ರಂಗ*

ಎಂದು ಹೇಳಿರುವುದನ್ನು ನೋಡಿದರೆ ಆಕೆಗೆ ಚಿಕ್ಕಂದಿನಲ್ಲೇ ಹೆತ್ತವರನ್ನು ಕಳೆದುಕೊಂಡ ತಬ್ಬಲಿತನದ ಯಾತನೆ ತೀವ್ರವಾಗಿ ತಟ್ಟಿರಬೇಕು ಎನಿಸುತ್ತದೆ. ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆದ ಹುಡುಗಿ, ಹರಿಯೇ . ತನ್ನ ಬದುಕಿನ ಆಧಾರ ಎಂಬ ದೃಢ ವಿಶ್ವಾಸದಿಂದ ಹಾಗೂ ಮನೆಯ ಪರಿಸರದ ಪ್ರಭಾವದಿಂದ ದೈವಭಕ್ತಳಾಗಿ ರೂಪುಗೊಂಡಿರಬೇಕು. ಆಗಿನ ಕಾಲದ ರೂಢಿಯಂತೆ, ೧೦-೧೨ ವರ್ಷಕ್ಕೇ ಹರಿಹರ ತಾಲ್ಲೂಕಿನ ಮಲೆಬೆನ್ನೂರಿನ ಶಾನುಭೋಗ ಕೃಷ್ಣಪ್ಪನವರ ಮಗ ತಿಪ್ಪರಸನೊಂದಿಗೆ ಗಿರಿಯಮ್ಮನ ಮದುವೆ ನಡೆಯಿತು. ಸಂಸಾರದಲ್ಲಿ ಆಸಕ್ತಿ ಇಲ್ಲದ ಗಿರಿಯಮ್ಮ ವಿರಕ್ತಳಾಗಿ ಸ್ವಲ್ಪ ಕಾಲದಲ್ಲೇ ತನ್ನ ನಿಲುವನ್ನು ಅತ್ತೆ ಮಾವಂದಿರಿಗೂ ಪತಿಗೂ ತಿಳಿಸಿ ಗಂಡನಿಗೆ ಮತ್ತೊಂದು ಮದುವೆ ಮಾಡಿಸಿ ಮನೆಯಲ್ಲಿ ತನ್ನ ಕರ್ತವ್ಯಗಳನ್ನು ನಿರ್ವಹಿಸುತ್ತಾ, ಉಳಿದ ಸಮಯವನ್ನು ಭಗವಂತನ ಸ್ಮರಣೆಯಲ್ಲೂ ಸಾಹಿತ್ಯ ರಚನೆಯಲ್ಲೂ ಕಳೆಯುತ್ತಿದ್ದಳು.

ಹೆಳವನಕಟ್ಟೆ ಎಂಬುದು ಮಲೆಬೆನ್ನೂರಿನ ಹತ್ತಿರ ಇರುವ ಒಂದು ರಂಗನಾಥ ಕ್ಷೇತ್ರ. ಹಿಂದೆ ಅಲ್ಲಿನ ದಿಬ್ಬವೊಂದರಲ್ಲಿ ಹೆಳವನೊಬ್ಬ ವಾಸಿಸುತ್ತಿದ್ದನಂತೆ. ದಿಬ್ಬದ ಪಕ್ಕದಲ್ಲಿ ಹಳ್ಳವೊಂದಿತ್ತು. ಸುತ್ತಲಿನ ಜನ ಅದರ ನೀರನ್ನೆ ಉಪಯೋಗಿಸುತ್ತಿದ್ದರು.

ದನಕರುಗಳನ್ನು ಮೇಯಿಸಲು ಗೊಲ್ಲರು ಅಲ್ಲಿಗೆ ಬರುತ್ತಿದ್ದರು. ಹೆಳವ ಅವರಿಗೆಲ್ಲ ದೇವರಕತೆ ಹೇಳುತ್ತಾ ಅವರ ವಿಶ್ವಾಸಗಳಿಸಿದ್ದ. ಬೇಸಿಗೆಯಲ್ಲೂ ಹಳ್ಳದ ನೀರು ಸಮೃದ್ಧವಾಗಿ ದೊರೆಯಬೇಕೆಂಬ ಉದ್ದೇಶದಿಂದ ಹೆಳವ ಎಲ್ಲರ ನೆರವಿನಿಂದ ಕೆರೆಯೊಂದನ್ನು ನಿರ್ಮಿಸಿದ. ಅದೇ ಹೆಳವನಕಟ್ಟೆ ಆಯಿತು. ಒಮ್ಮೆ ಹಸುವೊಂದು ಹುತ್ತಕ್ಕೆ ಹಾಲು ಸುರಿಸುವುದನ್ನು ಕಂಡು ಕುತೂಹಲದಿಂದ ಅಗೆದು ನೋಡಲು ರಂಗನಾಥಸ್ವಾಮಿಯ ವಿಗ್ರಹವೊಂದು ದೊರೆಯಿತು. ಅದನ್ನು ಅಲ್ಲಿ ಪ್ರತಿಷ್ಠಾಪಿಸಿ ಅದೊಂದು ರಂಗನಾಥನ ಕ್ಷೇತ್ರವಾಗುವಂತೆ ಮಾಡಿದರು.

ಗಿರಿಯಮ್ಮ ಈ ರಂಗನಾಥ ಕ್ಷೇತ್ರದಿಂದ ತುಂಬಾ ಪ್ರಭಾವಿತಳಾದಳು. 'ಹೆಳವನಕಟ್ಟೆ ರಂಗ' ಅವಳ ಅಂಕಿತವಾಯಿತು. ಕೆಲವೊಮ್ಮ 'ಹೆಳವನಕಟ್ಟೆ ವೆಂಕಟ' ಎಂಬ ಅಂಕಿತವನ್ನು ಆಕೆ ಬಳಸಿದ್ದಾಳೆ. ಮುಂದೆ ಆಕೆ ಹೆಳವನಕಟ್ಟೆ ಗಿರಿಯಮ್ಮ ಎಂದೇ ಖ್ಯಾತಳಾದಳು.

ಗಿರಿಯಮ್ಮನ ಬಗೆಗೆ ಅನೇಕ ಪವಾಡದ ಕತೆಗಳು ಪ್ರಚಾರದಲ್ಲಿವೆ. ವಿವಾಹವಾದ ಮೇಲೆ ತಿಪ್ಪರಸ ಮಲಗುವ ಕೋಣೆಗೆ ಹೋದಾಗ ಗಿರಿಯಮ್ಮನನ್ನು ಘಟಸರ್ಪವೊಂದು ಸುತ್ತಿಕೊಂಡಿರುವಂತೆ ಕಂಡು ಆತ ಗೌರವಭಕ್ತಿಗಳಿಂದ ಆಕೆಗೆ ತಲೆಬಾಗಿದ್ದು, ಪುಂಗನೂರಿನ ರಾಜಕುಮಾರನಿಗೆ ಕಣ್ಣು ಬರಿಸಿದ್ದು, ಕ್ಷಾಮ ಬಂದಾಗ ಮಳೆ ತರಿಸಿದ್ದು, ಸತ್ತಮಗುವನ್ನು ಬದಿಕಿಸಿದ್ದು, ಕಳೆದು ಹೋದ ಉಂಗುರವನ್ನು ಗುಬ್ಬಿಯಿಂದ ಮರಳಿ ಪಡೆದದ್ದು, ಕೃಷ್ಣವೇಣಿ ನದಿ ದಾರಿ ಬಿಟ್ಟಿದ್ದು, ಸಮತೀಂದ್ರ ಸ್ವಾಮಿಗಳು ಆಕೆಯ ಹಿರಿಮೆಯನ್ನು ಅರಿತು ಮೊದಲು ತೀರ್ಥಕೊಟ್ಟಿದ್ದು ಹೀಗೆ ಆಕೆಯ ಸುತ್ತ ಹಬ್ಬಿರುವ ಕಥೆಗಳು ಅವಳನ್ನ ಮಹಾತ್ಮಳನ್ನಾಗಿಸಿದೆ. ಆಕೆ ರಾಧಿಕೆಯ ಅವತಾರವೆಂದು ಭಾವಿಸಿದ್ದ ಜನ ಅವಳನ್ನು ಭಕ್ತಿ ಗೌರವಗಳಿಂದ 'ಅಮ್ಮನವರು' ಎಂದೇ ಕರೆಯುತ್ತಿದ್ದರಂತೆ. ಆಕೆಯ ಮಹಿಮೆಯನ್ನು ಕೇಳಿ ಆಂಗ್ಲ ಸರದಾರನೊಬ್ಬ ಆಕೆಯ ದರ್ಶನಕ್ಕೆ ಬಂದು ಶಾನುಭೋಗರ ಮನೆತನಕ್ಕೆ 'ದೇಶಪಾಂಡೆ' ಎಂಬ ಬಿರುದನ್ನಿತ್ತು, ಆ ಗ್ರಾಮದ ಸ್ವತ್ತು ವೃತ್ತಿಗಳನ್ನು ಅನುಭವಿಸುವ ಸನ್ನದನ್ನು ಕೊಟ್ಟುದಾಗಿ ತಿಳಿಯುತ್ತದೆ.

ಗಿರಿಯಮ್ಮ ತನ್ನ ಕೊನೆಯ ದಿನಗಳಲ್ಲಿ ಮೈಲಾರ, ಕೊಕ್ಕನೂರು, ಗೋಕರ್ಣ, ಪಿಳ್ಳಂಗಿರಿ ಮುಂತಾದ ಸ್ಥಳಗಳಿಗೆ ಯಾತ್ರೆ ಮಾಡಿ, ಹೊನ್ನಾಳಿಗೆ ಸಮೀಪದಲ್ಲಿರುವ ಕಮ್ಮಾರಕಟ್ಟೆಯಲ್ಲಿ ಮಾರುತಿಯ ದರ್ಶನ ಮಾಡಿ ಶ್ರಾವಣ ಶುದ್ಧ ಪಂಚಮಿಯಂದು ತುಂಗಭದ್ರೆಯ ಪೂರ್ಣ ಪ್ರವಾಹದಲ್ಲಿ ಅದೃಶ್ಯಳಾದಳೆಂದು ಹೇಳುತ್ತಾರೆ. ಹಲವು ವರ್ಷಗಳ ಹಿಂದೆ ರಾಣಿಬೆನ್ನೂರು ಸುತ್ತಮುತ್ತ ಗಿರಿಯಮ್ಮನ ಚರಿತ್ರೆಯನ್ನು ಹಾಡಿನ ರೂಪದಲ್ಲಿ ಹೇಳುತ್ತಿದ್ದರೆಂದೂ 'ಹೆಳವನಕಟ್ಟೆ ಗಿರಿಯಮ್ಮ' ಎಂಬ ದೊಡ್ಡಾಟವನ್ನು ಆಡುತ್ತಿದ್ದರೆಂದೂ ಕೆಲವರು ನೆನಪಿಸಿಕೊಳ್ಳುತ್ತಾರೆ. ತಮ್ಮ ಪಾಲಿಗೆ ದೇವಿಯಂತಿದ್ದ ಗಿರಿಯಮ್ಮನಿಗಾಗಿ ಭಕ್ತರು ರಂಗನಾಥಸ್ವಾಮಿಯ ದೇವಾಲಯದ ಆವರಣದಲ್ಲೇ ಆಕೆಗೂ ಒಂದು ಗುಡಿಯನ್ನು ಕಟ್ಟಿ ಪೂಜಿಸುತ್ತ ಬಂದಿರುವುದು ಆಕೆಯ ಹಿರಿಮೆಯನ್ನು, ಆಕೆ ಏರಿದ ಎತ್ತರವನ್ನು ತೋರಿಸುತ್ತದೆ.

**ಹಾಡುಗಳು** : ಗಿರಿಯಮ್ಮನ ಹಾಡುಗಳಲ್ಲಿ ಭಕ್ತಿಪೂರ್ಣವಾದ ದೇವ-ದೇವತಾ ಸ್ತುತಿಗಳು, ಆತ್ಮನಿವೇದನೆ, ಲೋಕನೀತಿ ಇತ್ಯಾದಿಗಳು ಇವೆ. ಒಂದೇ ಒಂದು ಉಗಾಭೋಗವನ್ನು ಬಿಟ್ಟರೆ ಉಳಿದವುಗಳೆಲ್ಲಾ ಪಲ್ಲವಿ, ಅನುಪಲ್ಲವಿ ನುಡಿಗಳನ್ನುಳ್ಳ ಕೀರ್ತನೆಗಳು. ಒಂದೆರಡರಲ್ಲಿ ಪಲ್ಲವಿ ಇಲ್ಲದಿರುವುದು, ನುಡಿಗಳ ಸಂಖ್ಯೆ ಸಮನಾಗಿ ಇರುವುದು ಕಂಡು ಬರುತ್ತದೆ.

ಭಗವಂತನ ಸಂಕೀರ್ತನೆಯಲ್ಲಿ ಮಧುರಭಾವ ಮತ್ತು ವಾತ್ಸಲ್ಯಭಾವವನ್ನು, ಆತನ ಅಪಾರ ಶಕ್ತಿಯಲ್ಲಿ ನಂಬಿಕೆಯನ್ನು, ನಂಬಿದವರನ್ನು ಕಾವ ಅವನ ಕಾರುಣ್ಯವನ್ನು ಗಿರಿಯಮ್ಮ ಬಗೆ ಬಗೆಯಾಗಿ ಬಣ್ಣಿಸಿದ್ದಾಳೆ.

'ಇಂದು ನೀ ಕರದು ತಾರೆ ಬೇಗನೆ ಪೋಗಿ' ಎಂಬ ಹಾಡಿನಲ್ಲಿ ಚೆನ್ನ ವೆಂಕಟರಾಯನ ಕರೆತಂದರೆ ಹರಳುಂಗುರ, ಕಂಠಮಾಲೆ ಇತ್ಯಾದಿ ಕೊಡುವುದಾಗಿ ತನ್ನ ಸಖಿಯಲ್ಲಿ ಬೇಡಿಕೊಳ್ಳುತ್ತಾಳೆ. 'ತಾರಮ್ಮ ಶ್ರೀ ರಂಗಧಾಮನ ತಂದು ತೋರಮ್ಮ' ಎಂದು ರಂಗನಾಥನಿಗಾಗಿ ಹಂಬಲಿಸಿದರೆ 'ಯಾಕೆ ಬಾರನಕ್ಕಯ್ಯ' ಎಂಬ ಹಾಡಿನಲ್ಲಿ ದಶಾವತಾರಗಳನ್ನು ಬಣ್ಣಿಸುತ್ತಾ ಪ್ರಿಯತಮನ ಬರುವಿಕೆಗಾಗಿ

ಕಳವಳಿಸುವ ಪರಿ ಮತ್ತಷ್ಟು ಮನಮುಟ್ಟುತ್ತದೆ. 'ಏನ ಹೇಳಲಿ ಕೃಷ್ಣನ ಗುಣವಾ' ಎಂಬುದರಲ್ಲಿ ಕೃಷ್ಣನ ಪುಂಡುತನದ ಪರಿ ಚಿತ್ರಿಸಿದ್ದಾಳೆ. 'ಹ್ಯಾಂಗಿರಲಿನು ರಂಗನ ಬಿಟ್ಟಿನ್ನು, ಎಂಬ ಹಾಡಿನಲ್ಲಿ ಹೆಳವನಕಟ್ಟೆ ರಂಗನನ್ನು ಬಿಟ್ಟಿರಲಾರದ ತನ್ನ ಅಳಲನ್ನು ಗಿರಿಯಮ್ಮ ತೋಡಿಕೊಂಡಿದ್ದಾಳೆ.

ಗಿರಿಯಮ್ಮನದ್ದು ಮಾತೃವಾತ್ಸಲ್ಯದ ಮಮತೆ ತುಂಬಿದ ಮನಸ್ಸು. ಆ ಪರಮಾತ್ಮನನ್ನೇ ಮಗುವೆಂದು ಭಾವಿಸಿ ಲಾಲಿಸಿದವಳು ಆಕೆ. ಯಶೋದೆಯಾಗಿ, ಕೌಸಲ್ಯೆಯಾಗಿ ತನ್ನನ್ನು ಪರಿಭಾವಿಸಿಕೊಂಡವಳು. 'ಕರೆದಳು ತನ್ನ ಮಗನ ಯಶೋದೆ' 'ನೆರೆದು ಗೋಪಿಯರೆಲ್ಲರು ಕೃಷ್ಣಯ್ಯನ' 'ಮಕ್ಕಳ ಮಾಣಿಕವೆ ಮೋಹಂವಾ' 'ಯಾಕೆ ದೂರುವಿರೆಂಮ ಬಾಲನಾ' ಮುಂತಾದ ಹಾಡುಗಳು ಕೃಷ್ಣನ ಬಾಲಲೀಲೆಗಳನ್ನು ಹೇಳುವುದರೊಂದಿಗೆ ಗಿರಿಯಮ್ಮ ವಾತ್ಸಲ್ಯಭಾವದಿಂದ ಪರಮಾತ್ಮನನ್ನು ಆರಾಧಿಸಿದ ಬಗೆಯನ್ನು ಹೇಳುತ್ತವೆ.

ಗಿರಿಯಮ್ಮನ ಹಾಡುಗಳಲ್ಲಿ ದಶಾವತಾರದ ವಿವರಗಳು ಬಹು ಸುಂದರವಾಗಿ ಮೂಡಿ ಬಂದಿವೆ. 'ಏನ ಹೇಳಲಿ ಈತನಿರವ' 'ಇಂಥಾವಗ್ಯಾಂಗೆ ಮನಸೋತೆ' 'ಹೊನ್ನ ತಾ ಗುಬ್ಬಿ' 'ಹೊನ್ನ ತಾ' 'ಮೂರು ಜಗವ ಕುಣಿಸುವಂಥ ಗಾರುಡಿಗ ಇವದಾರಕ್ಕ' ಮುಂತಾದ ಹಾಡುಗಳಲ್ಲಿ ಹರಿಯ ದಶಾವತಾರದ ಸ್ಮರಣೆ ಸೊಗಸಾಗಿ ಹೊರಹೊಮ್ಮಿದೆ.

'ಹೊಳೆವ ಮೈಯ್ಯವ ಕಲ್ಲಹೊರುವಕಡಲೊಳಾಡುವ ತಿಳಿಯ ಎರಡಂಗನೆ ತಿರಿವ ಪರಶುವಿಡಿವ ಕೋಡಗ ಕುಲವನಾಳುವ ಗೋವಕಾಯ್ವ ಕಾಂತೆಯರ ವ್ರತವ ನಳಿವ ಅಶ್ವವನೇರಿ ಮೆರೆವ .....'

ಹೀಗೆ ಚಿಕ್ಕ ಚಿಕ್ಕ ಮಾತುಗಳಲ್ಲೇ ದಶಾವತಾರವನ್ನು ಕವಯತ್ರಿ ಸೂಚಿಸಿದ್ದಾಳೆ. ಈ ದೀರ್ಘ ಕೃತಿಗಳಲ್ಲೂ ಪರಮಾತ್ಮನ ಸ್ತುತಿ ಮಾಡಬೇಕಾದ ಸಂದರ್ಭಗಳಲ್ಲೆಲ್ಲಾ ಪದೇ ಪದೇ ಗಿರಿಯಮ್ಮ ದಶಾವತಾರ ಸ್ತುತಿ ಮಾಡಿದ್ದಾಳೆ.

ದಶಾವತಾರದಂತೆಯೇ ರಾಮಾಯಣ, ಮಹಾಭಾರತ, ಭಾಗವತಗಳಲ್ಲಿನ ಘಟನೆಗಳನ್ನು ಸಂದರ್ಭೋಚಿತವಾಗಿ ಗಿರಿಯಮ್ಮ ಬಳಸಿದ್ದಾಳೆ. 'ರಾಮ ಶ್ರೀ ರಘುನಂದನ ಶರಣು' ಎಂಬ ಹಾಡಿನಲ್ಲಿ ರಾಮಾವತಾರದ ಸ್ತುತಿ ಇದ್ದರೆ 'ಶ್ರೀ ನರಸಿಂಹ ದೇವ ಶರಣರಕ್ಷಕನೆ' ಎಂಬುದರಲ್ಲಿ ನರಸಿಂಹಾವತಾರದ ವರ್ಣನೆ ಇದೆ. ಗಜೇಂದ್ರ, ಧೃವ, ಪ್ರಹ್ಲಾದ, ಅಜಮಿಳ ಮುಂತಾದ ಭಕ್ತರ ಕತೆಗಳು ಅಲ್ಲಲ್ಲಿ ಪ್ರಸ್ತಾಪಗೊಂಡಿವೆ.

ಹರಿದಾಸರೆಲ್ಲರೂ ಸಾಮಾನ್ಯವಾಗಿ ಪ್ರಾಣದೇವರ ಅವತಾರತ್ರಯರೆಂದು ಹೇಳುವ ಹನುಮ, ಭೀಮ, ಮಧ್ವರ ಸ್ತುತಿ ಮಾಡಿರುವುದು ಕಂಡು ಬರುತ್ತದೆ. ಆದರೆ ಗಿರಿಯಮ್ಮ ಹನುಮನನ್ನು ಕುರಿತು ಮಾತ್ರ ಹಾಡಿದ್ದಾಳೆ. 'ಈತ ಅಂಜನೆ ಸುತನು ಭೀಮರಾಯ' ಮತ್ತು 'ಭೀಮ ಹೋ ಭಲಾರೆ ನಿಸ್ಸೀಮ' ಎಂಬ ಎರಡು ಹಾಡುಗಳ ಪ್ರಾರಂಭದಲ್ಲೇ ಭೀಮನ ಹೆಸರಿದ್ದರೂ ಇಡೀ ಹಾಡಿನಲ್ಲಿ ಭೀಮನ ಪರಾಕ್ರಮವನ್ನು ಹೇಳುವ ಯಾವ ಘಟನೆಯೂ ಇಲ್ಲದೆ ಕೇವಲ ರಾಮಾಯಣದಲ್ಲಿ ಬರುವ ಹನುಮನ ಸಾಹಸಗಳನ್ನು ಮಾತ್ರ ಪ್ರಸ್ತಾಪಿಸಲಾಗಿದೆ. ಉಳಿದ ಹಾಡಿನಲ್ಲಿ ಎಲ್ಲಿಯೂ ಮಧ್ವರ ಪ್ರಸ್ತಾಪ ಇಲ್ಲ.

ಗಿರಿಯಮ್ಮನ ತವರೂರಿನ ಆರಾಧ್ಯ ದೈವ ಮೈಲಾರ ಲಿಂಗ. ಹಾಗಾಗಿ ಗಿರಿಯಮ್ಮ ರಂಗ ಮತ್ತು ಲಿಂಗರಿಬ್ಬರನ್ನು ಸ್ತುತಿಸಿದ್ದಾಳೆ. 'ಈತ ರಂಗನಾದ ಹರಿಯು ಆತ ಲಿಂಗನಾದ ಹರನು' ಮತ್ತು 'ಈತ ಲಿಂಗದೇವ ಶಿವನು ಆತ ರಂಗಧಾಮ ವಿಷ್ಣು' ಎಂಬ ಹಾಡುಗಳು ಹರಿಹರರ ಸಮನ್ವಯವನ್ನು ಸಾರುವ ಗಿರಿಯಮ್ಮನ ವಿಶಿಷ್ಟ ಮನೋಭಾವವನ್ನು ಪ್ರಕಟಿಸುತ್ತವೆ. ನೀಲಗಿರಿಲಿಂಗನನ್ನು ಮಧುರಭಾವದಿಂದ ಸ್ತುತಿಸುವ 'ಬಾರನ್ಯಾತಕೆ ನೀರೆ ನೀ ಕರೆತಾರೆ'. ಶಿವಸ್ತುತಿಯಾದ 'ವಿಶ್ವಪತಿ ಇಂದುಶೇಖರ ಸುರಮಸ್ತಕಮಣಿ' ಎಂಬ ಹಾಡುಗಳು ಹಾಗೂ ಏಕನಾಥೆಯ ಸ್ತುತಿಗಳು ಗಿರಿಯಮ್ಮನ ಸಮಭಾವದ ನಿಲುವನ್ನು ದೃಢೀಕರಿಸುತ್ತದೆ.

ದೇವದೇವತೆಗಳ ಸ್ತುತಿಗಳನ್ನು ಬಿಟ್ಟರೆ ಆತ್ಮನಿವೇದನೆಯ ಹಾಡುಗಳು ಗಿರಿಯಮ್ಮನಲ್ಲಿ ಮುಖ್ಯವಾಗುತ್ತವೆ. 'ಎಂದು ಕಾಹುವೆ ಎನ್ನ ಮನೋಹರ' 'ಏನಿದು ಬಯಲಪಾಶ' 'ಕಡೆಗಣ್ಣಲಿ ನೋಡದಿರೆನ್ನಯ್ಯ' 'ಪಾಪಿಯೊಲು ನಾ ಬಂದೆ ಪರದೇಶಿನಾನಾದೆ' ಮುಂತಾದ ಹಾಡುಗಳು ಜೀವಿ ಬದುಕಿನ ಮೂಸೆಯಲ್ಲಿ ಬೆಂದು ನೊಂದು, ಬಳಲಿ ಮೊರೆ ಇಡುವ ಪರಿಯನ್ನು ಬಿಂಬಿಸಿದರೆ, 'ಕಾಯೊ ಕರುಣಾಕರನೆ ನೀಯೆನ್ನಾ' 'ನಂಬಿದೆ ನಂಬಿದೆ ಅಂಬುಜಾಕ್ಷನೆ' 'ನಿನ್ನ ನಂಬಿದವರ ಕಾಯೊ' ಇತ್ಯಾದಿ ಕೀರ್ತನೆಗಳು ಭಗವಂತ ನಂಬಿದವರನ್ನು ರಕ್ಷಿಸುತ್ತಾನೆ ಎಂಬ ವಿಶ್ವಾಸವನ್ನು ಪ್ರಕಟಿಸುತ್ತವೆ. 'ಆರಿಗಾದರು ಪೂರ್ವದ ಕಟ್ಟಳೆಯು' 'ಯಾಕೆ ಮರುಳಾದೆ ಹೀಗೆ ಎಲೆಮನವೆ' ಎಂಬಂತಹ ಹಾಡುಗಳು ಲೋಕ ನೀತಿಯನ್ನು ಹೇಳುತ್ತವೆ.

ಕಥನಾತ್ಮಕವಾದ ಎರಡು ವಿಶಿಷ್ಟ ಹಾಡುಗಳನ್ನು ಗಿರಿಯಮ್ಮ ರಚಿಸಿದ್ದಾಳೆ. 'ಪಾರಿಜಾತ' ಮತ್ತು 'ಅಜಾಮಿಳನ ಮೋಕ್ಷ' ಭಾಗವತದಲ್ಲಿ ಬರುವ ವಸ್ತು ಇವುಗಳಗೆ ಆಧಾರ. ೯ ಶ್ಲೋಕ ಹಾಗೂ ೯ ಪದಗಳಲ್ಲಿ ರಚಿತವಾಗಿರುವ 'ಪಾರಿಜಾತ' ಸತ್ಯಭಾಮೆಯ ಸವತಿ ಮಾತ್ಸರ್ಯವನ್ನು, ಕೃಷ್ಣನ ಪತ್ನೀ ಪ್ರೇಮವನ್ನು ವ್ಯಕ್ತಗೊಳಿಸುತ್ತದೆ. ಕೃಷ್ಣನ ಓಲಗಕ್ಕೆ ನಾರದ ಪಾರಿಜಾತದ ಪುಷ್ಪ ತರುತ್ತಾನೆ. ಪುಷ್ಪ ಯಾರಿಗೆ ? ಎಂದು ಕೃಷ್ಣ ಕೇಳಲು ರುಕ್ಮಿಣಿಗೆ ಎಂದು ನಾರದ ಹೇಳುತ್ತಾನೆ. ವಿಷಯ ತಿಳಿದ ಭಾಮೆ 'ಎದೆ ದಿಗಿಲೆಂದು ಭುಗಿ ಭುಗಿಲೆಂದು ಮನದಲ್ಲಿ' ನೋಯುತ್ತಾಳೆ. 'ನೆಚ್ಚಿ ಇದ್ದೆನೆ ಎನ್ನೊಳು ವಂಚಿಸಿದನೆ' ಎಂದು ಕೊರಗುತ್ತಾಳೆ. 'ಬಾರದಿದ್ದರೆ ಪ್ರಾಣ ಉಳಿಯದು' ಎಂದು ವಿರಹದಿಂದ ಪರಿತಪಿಸುತ್ತಾಳೆ. 'ಹೆಣ್ಣು ಜನ್ಮದ ಬಾಳು ಯಾತಕೆ ಹೇಳು' ಎಂದು ನಿಟ್ಟುಸಿರು ಬಿಡುತ್ತಾಳೆ. ಆಕೆಯ ದುಃಖ ನಿರಾಶೆಗಳು ನಿಧಾನವಾಗಿ ಕೋಪವಾಗಿ ಮಾರ್ಪಡುತ್ತವೆ. 'ಎಲ್ಲರೊಡನೆ ಕೋಪಿಸುತ ತೊಟ್ಟತೊಡಿಗೆ ಈಡಾಡುತ' ಮಂಚದಲ್ಲಿ ಒರಗುತ್ತಾಳೆ. ಕೃಷ್ಣನಿಗೂ ಸತ್ಯಭಾಮೆಯು ಬಗ್ಗೆ ಅಳುಕು ಇದ್ದೇ ಇದೆ. ಆತ ಆತಂಕದಿಂದಲೇ ಸತ್ಯಭಾಮೆಯಲ್ಲಿಗೆ ಬರುತ್ತಾನೆ. ಪಾರಿಜಾತದ ಮರವನ್ನೆ ತಂದು ನಿಲ್ಲಿಸುವ

ಭರವಸೆ ನೀಡಿ ಸಮಾಧಾನ ಮಾಡುತ್ತಾನೆ. ಸತ್ಯಭಾಮೆಯ ದುಃಖ, ಕೋಪತಾಪಗಳು ಬಹು ಚೆನ್ನಾಗಿ, ಸಹಜವಾಗಿ ಮೂಡಿ ಬಂದಿದೆ.

ಅಜಾಮಿಳನಂಥ ಪಾಪಿ ಕೂಡ ಒಂದೇ ಒಂದು ಬಾರಿ, ಆಕಸ್ಮಿಕವಾಗಿ ತನ್ನ ಮಗನನ್ನು 'ನಾರಗ' ಎಂದು ಕರೆದ ಮಾತ್ರಕ್ಕೆ ಸದ್ಗತಿಯನ್ನು ಪಡೆದನೆಂದರೆ ಆ ನಾಮದ ಮಹಿಮೆ ಎಷ್ಟು ಎಂಬುದನ್ನು ಗಿರಿಯಮ್ಮ 'ನಾರಾಯಣಯೆಂಬೊ' ನಾಮವ ನೆನೆದರೆ ಹಾರಿ ಹೋಹುದು ಜನ್ಮಜನ್ಮದ ಪಾಪಗಳು' ಎಂಬ ೧೫೫ ನುಡಿಗಳ ಹಾಡಿನಲ್ಲಿ ವಿವರಿಸಿದ್ದಾಳೆ. ಸಮಿದೆ ತರಲು ಹೋದ ಅಜಾಮಿಳ ಅಂತ್ಯಜಳನ್ನು ಕಂಡು ಕಾಮುಕನಾಗಿ ಅವಳ ಸೆರಗು ಹಿಡಿದು 'ನಿಲ್ಲು ನಿಲ್ಲೆಲೆ ಕಾಂತೆ ನಿನಗೊಲಿದೆ' ಎನ್ನುತ್ತಾನೆ. 'ಎಲೊ ವಿಪ್ರ ಕೇಳು ನಾವು ಕುಲಹೀನರು' ಎಂದು ಆಕೆ ತಮ್ಮ ಮನೆಯ ಪರಿಸರವನ್ನು ವರ್ಣಿಸಿ ಹೇಳುತ್ತಾಳೆ. ಆದರೂ ಕೇಳದೆ ಅಜಾಮಿಳ 'ನಿನ್ನೊಡನೆ ---- ಸುಖದಲ್ಲಿ ಇಹೆನೆಂಬ ಛಲವೊಂದೆ ಎನಗೆ' ಎನ್ನುತ್ತಾನೆ. ಆಗ ಆಕೆ 'ಚಿತ್ತವೆನ್ನಲ್ಲಿ ಇದ್ದರೆ ಹೋಗಿ ನೀ ಎನ್ನ ಹೆತ್ತ ತಂದೆಯ ಕೇಳು' ಎನ್ನುತ್ತಾಳೆ. ಅಜಾಮಿಳ ಆಕೆಯ ತಂದೆಯಲ್ಲಿಗೆ ಹೋಗಿ ಕೇಳಿದಾಗ ಆತ 'ಉತ್ತಮದ ಕುಲವನೀಡಾಡಿ ನೀ ಪಾತಕದ ಮೊತ್ತ ಕೊಳಗಾಗದಿರೊ' ಎನ್ನುತ್ತಾನೆ. ಯಾರ ಮಾತನ್ನು ಕೇಳದೆ ಅಜಾಮಿಳ ತಾನು ಬಯಸಿದ ಹೆಣ್ಣ ಮದುವೆಯಾಗಿ ಹತ್ತು ಮಕ್ಕಳನ್ನು ಪಡೆಯುತ್ತಾನೆ. ಅಂತ್ಯಕಾಲದಲ್ಲಿ ಯಮನ ಆಳುಗಳು ಬಂದಾಗ 'ಗಡಗಡನೆ ನಡುಗಿ ಕಂಗೆಟ್ಟು ಅಜಾಮಿಳ ತಾನು ಪಡೆದ ಮಗನ ನಾರಗನೆಂದು' ಕರೆಯುತ್ತಾನೆ. ಹರಿಭಟರು ಬರುತ್ತಾರೆ. ಅವರಿಗೂ ಯಮಭಟರಿಗೂ ವಾದವಿವಾದ ನಡೆದು ಕೊನೆಗೆ ಅಜಾಮಿಳ ಹರಿಭಟರೊಂದಿಗೆ ವೈಕುಂಠಕ್ಕೆ ಹೋಗುತ್ತಾನೆ. ಹೀಗೆ 'ಜಲಜನಾಭನ ದಿವ್ಯನಾಮವನು ನೆನೆದರೆ ಕುಲಕೋಟಿ ದೋಷಗಳಿಲ್ಲ' ಎಂಬುದನ್ನು ಗಿರಿಯಮ್ಮ ಈ ಹಾಡಿನಲ್ಲಿ ಸಾರಿ ಹೇಳಿದ್ದಾಳೆ. ಉದ್ದಕ್ಕೂ ಬರುವ ಸಂಭಾಷಣೆಗಳು ಹಾಡಿಗೆ ನಾಟಕೀಯತೆಯನ್ನು ತಂದು ಕೊಟ್ಟಿವೆ.

ಗಿರಿಯಮ್ಮನ ಹಿರಿಮೆ, ಮಹಿಮೆಗಳಿಂದ ನಡೆದುವೆಂದು ಹೇಳುವ ಅನೇಕ ಪವಾಡಗಳ ಸಂದರ್ಭಗಳನ್ನು ಹಿನ್ನೆಲೆಯಾಗಿ ಉಳ್ಳ ಹಲವು ಹಾಡುಗಳು ದೊರೆತಿವೆ. ಉದಾಹರಣೆಗೆ 'ತೋರಬಾರದೆ ನಿಮ್ಮ ಚರಿತೆಯನು' 'ಹೊನ್ನುತಾ ಗುಬ್ಬಿ ಹೊನ್ನು ತಾ' 'ಬಟ್ಟೆಯ ನೆವದಿಂದ ಬಂದು' 'ಮಳೆಯ ದಯಮಾಡೊ ರಂಗಯ್ಯ' ಇತ್ಯಾದಿ.

ಒಟ್ಟಿನಲ್ಲಿ ಈಕೆಯ ಕೀರ್ತನೆಗಳನ್ನು ನೋಡುವಾಗ ಅಲ್ಲಿ ತಾತ್ತ್ವಿಕ ವಿಚಾರಗಳಾಗಲಿ, ಮತೀಯ ಜಿಜ್ಞಾಸೆಗಳಾಗಲಿ, ಶುಷ್ಕ ತರ್ಕಗಳಾಗಲಿ ಕಂಡು ಬರದೆ, ಭಕ್ತೆಯೊಬ್ಬಳ ನಿರ್ಮಲಹೃದಯದಿಂದ ಸಹಜವಾಗಿ ಹೊರ ಹೊಮ್ಮಿದ ಕಾವ್ಯಾತ್ಮಕವಾದ, ಭಾವಪೂರ್ಣವಾದ, ಅಂತರಂಗದ ಕರೆ ಕೇಳಿ ಬರುತ್ತದೆ.

## ದೀರ್ಘಕೃತಿಗಳು

೧. ***ಉದ್ದಾಳಿಕನ ಕಥೆ*** : ಸಾಂಗತ್ಯದ ಮಟ್ಟಿನಲ್ಲಿರುವ ದೀರ್ಘ ಕೃತಿ ಇದು. ವಿಧಿ ಮನುಷ್ಯನನ್ನು ಹೇಗೆ ಆಡಿಸುತ್ತದೆ ಎಂಬುದನ್ನು ನಿರೂಪಿಸುವ ಕಥಾನಕ. ಬಾಲ್ಯದಲ್ಲಿಯೇ ತಂದೆ ತಾಯಿಯನ್ನು ಕಳೆದುಕೊಂಡ ಉದ್ದಾಳಿಕ ವಿರಾಗಿಯಾಗಿ ತಪಸ್ಸಿಗೆ ತೊಡಗುತ್ತಾನೆ. ಅರವತ್ತು ಸಾವಿರ ವರ್ಷ ಅಜಹರಿಹರರನ್ನು ಮೆಚ್ಚಿಸಲು ತಪಸ್ಸು ಮಾಡುತ್ತಾನೆ. ಇತ್ತ ಕೌಸಲ್ಯ ದೇಶದಲ್ಲಿ ರಘುರಾಯನಿಗೆ ಅಜಭೂಪನೆಂಬ ಮಗನೂ ಚಂದ್ರಾವತಿಯೆಂಬ ಮಗಳು ಹುಟ್ಟುತ್ತಾರೆ. ಕೌಶಿಕ ಮುನಿ ಸಂಚಾರ ಮಾಡುತ್ತಾ ಯಮಲೋಕಕ್ಕೆ ಬಂದಾಗ ನರಕದಲ್ಲಿ 'ಓತಿನ ಬಾಯ ಮೂಷಕದಂತೆ' ಮಿಡುಕುತ್ತಿದ್ದ ಉದ್ದಾಳಿಕನ ಪಿತೃಗಳು ಕಾಣಿಸುತ್ತಾರೆ. ಸಂತತಿ ಇಲ್ಲದೆ ಸದ್ಗತಿಯಿಲ್ಲ. ಹಾಗಾಗಿ ನಮಗೆ ಈ ಸ್ಥಿತಿ ಬಂದಿದೆ. ನೀವು ಉದ್ದಾಳಿಕನಿಗೆ ಇದನ್ನು ತಿಳಿಸಿ ಎಂದು ಹೇಳುತ್ತಾರೆ. ಉದ್ದಾಳಿಕ ಪ್ರಾರಬ್ಧವನ್ನು ಬರೆದ ವಿಧಿಯನ್ನೇ ಕೇಳುತ್ತೇನೆ ಎಂದು ಬ್ರಹ್ಮನನ್ನು ಕೇಳುತ್ತಾನೆ. ನಿನಗೆ ಮದುವೆಯಾಗಿ ಮಗ ಜನಿಸುತ್ತಾನೆ ಎಂದು ಬ್ರಹ್ಮ ಹೇಳಿದಾಗ ಉದ್ದಾಳಿಕ ಸಂದೇಹದಿಂದ 'ಜರೆ ಅಡರಿ ನೆರೆಪರಿಗಳು ಬಂದವು ಸಡಲಿದವು ದಂತಪಂಕ್ತಿ

ಕೊಡುವರಾರು ಕರ್ನಿಕೆ-----' ಎಂದು ಪ್ರಶ್ನಿಸುತ್ತಾನೆ. ಆಗ ಬ್ರಹ್ಮ 'ಪುತ್ರ ಹುಟ್ಟಿದ ಏಳು ವರುಷಕ್ಕೆ ಪತ್ನಿಯು ದೃಷ್ಟಿಗೋಚರಕೆ ಬೀಳುವಳು' ಎಂದು ನುಡಿದು ಕನ್ಯೆ ಯಾರು ಎಲ್ಲಿರುವಳು ಇತ್ಯಾದಿ ವಿವರ ತಿಳಿಸುತ್ತಾನೆ.

ಇದೊಂದನ್ನೂ ತಿಳಿಯದೆ ಸಖಿಯರೊಂದಿಗೆ ಜಲಕ್ರೀಡೆಯಾಡಲು ಬಂದ ಚಂದ್ರಾವತಿ ಏಳು ಗಾವುದ ದೂರದ ಮೇಲಿಂದ ಉದ್ದಾಳಿಕನು ತೇಲಿಬಿಟ್ಟ ಕಮಲವನ್ನು ಆಘ್ರಾಣಿಸಿ ಗರ್ಭಿಣಿಯಾಗುತ್ತಾಳೆ. ಮಾನಕ್ಕೆ ಹೆದರಿ ತಂದೆ-ತಾಯಿಗಳು ಅವಳನ್ನು ಕಾಡುಪಾಲು ಮಾಡುತ್ತಾರೆ. ಮುನಿಯೊಬ್ಬನ ಪೋಷಣೆಯಲ್ಲಿ ಆಕೆಗೆ ಗಂಡು ಮಗು ಜನಿಸುತ್ತದೆ. ಮೂಗಿನಿಂದ ಜನಿಸಿದ ಮಗುವಿಗೆ ನಾಶಿಕೇತು ಎಂದು ನಾಮಕರಣವಾಗುತ್ತದೆ. ತಂದೆ ಇಲ್ಲದ ಮಗುವನ್ನು ಸಾಕಲಾರದೆ ಚಂದ್ರಾವತಿ ಮಗುವನ್ನು ನೀರಿನಲ್ಲಿ ತೇಲಿಬಿಡುತ್ತಾಳೆ. ಆ ಮಗು ಉದ್ದಾಳಿಕನಿಗೆ ದೊರೆಯುತ್ತದೆ. ವಿಧಿಯ ಕೃಪೆಯಿಂದ ಏಳು ವರ್ಷಗಳ ಬಳಿಕ ಪತಿ, ಪತ್ನಿ, ಪುತ್ರರ ಸಮಾಗಮವಾಗುತ್ತದೆ.

ಚಂದ್ರಾವತಿ ಗೆಳತಿಯರೊಂದಿಗೆ ನೀರಾಟಕ್ಕೆ ಹೊರಟ ಸಂಭ್ರಮ, ಜಲಕ್ರೀಡೆಯ ಪರಿ ಇವುಗಳನ್ನು ಗಿರಿಯಮ್ಮ ಬಹು ಉತ್ಸಾಹದಿಂದ ವರ್ಣಿಸಿದ್ದಾಳೆ. ಜಲಕ್ರೀಡೆ ಮುಗಿಸಿ ಬಂದ ಕೆಲದಿನದ ಮೇಲೆ ಚಂದ್ರಾವತಿ

'ಮಂಚದಿಂದಿಳಿಯಳು ಮಂಡೆಯ ಕಟ್ಟಳು
ದುಂಡು ಮಲ್ಲಿಗೆಯ ಮುಡಿಯಳು ಖಂಡಸಕ್ಕರೆ
ನೊರೆಹಾಲು ಪರಮಾನ್ನವ ಕಂಡರೆ
ಮುಖ ದಿರುಹುವಳು'

ವಿಷಯ ತಿಳಿದ ಚಂದ್ರಾವತಿಯ ತಾಯಿ ಓಡಿಬಂದು ಮಗಳನ್ನು ಬಿಗಿದಪ್ಪಿ ದುಗುಡವೇನು ಎಂದು ವಿಚಾರಿಸುತ್ತಾಳೆ.

'ಬೆಚ್ಚಿದಳೊ ಜಲಧೀಲಿ ಕುಮಾರಿಯು ದೃಷ್ಟಿತಾಕಿತೊ ಬಹುಜನರ' ಎಂದೆಲ್ಲಾ ಚಿಂತಿಸಿ ಹರಕೆ ಹೊರುತ್ತಾಳೆ. ತಾಯ ಹೃದಯದ ಮಮತೆ ಆತಂಕಗಳು ಬಹು ಸಹಜವಾಗಿ ಇಲ್ಲಿ ವ್ಯಕ್ತವಾಗಿದೆ. ಕಡೆಗೂ ಮಗಳು ಗರ್ಭಿಣಿ ಎಂದು ತಿಳಿಯುತ್ತದೆ. ಗಂಡುನೊಣವೂ ಸುಳಿಯದಿರುವಾಗ ಇದು ಆದದ್ದು ಹೇಗೆ ಎಂದು ಯಾರಿಗೂ ತಿಳಿಯುವುದಿಲ್ಲ. ರಾಜನಂತೂ 'ನೀಗುವೆ ಹರಣವ ಎನುತ ಕೈಯಲಗನು ನೀಡಿದ ತನ್ನ ಮಸ್ತಕಕೆ' ಕಡೆಗೆ ಅಪವಾದಕ್ಕೆ ಹೆದರಿ ಊಳಿಗದವರನು ಕರೆದು 'ಅರಣ್ಯದಿ ಶಿರವರಿದು ಬನ್ನಿ' ಎಂದು ಆಜ್ಞೆ ಮಾಡುತ್ತಾನೆ. ಅವಿವಾಹಿತಳಾದ ಮಗಳು ಗರ್ಭಿಣಿ ಎಂದು ತಿಳಿದಾಗ ತಂದೆತಾಯಿಯರಿಗಾಗುವ ಆಘಾತ, ಭಯ, ಚಿಂತೆಗಳನ್ನು ಗಿರಿಯಮ್ಮ ಹೃದಯ ದ್ರವಿಸುವಂತೆ ವರ್ಣಿಸಿದ್ದಾಳೆ.

ಅರಣ್ಯದಲ್ಲಿ ಚಂದ್ರಾವತಿಯನ್ನು ಕಂಡ ಗೌತಮಮುನಿ ಆಕೆಯನ್ನು ತನ್ನ ಆಶ್ರಮಕ್ಕೆ ಕರೆತರುತ್ತಾನೆ. ಚಂದ್ರಾವತಿಯನ್ನು ನೋಡಿದ ಮುನಿಪತ್ನಿ

'ಚರ್ಮದ್ಹಾಸಿಗೆ ತರಗೆಲೆ ಮಂದಿರ ಉಡುವುದು ನಾರಿನೊಸ್ತ್ರವನು
ಇಡುವಾಭರಣ ವಿಭೂತಿ ರುದ್ರಾಕ್ಷಿಗೆ ಮಡದಿರಿಬ್ಬರು ಯಾತಕೆಂದು'

ಕೇಳುತ್ತಾಳೆ. ಅವಳಲ್ಲಿ ಮತ್ಸರ ಮೂಡುತ್ತದೆ. ಮುನಿ 'ಮಗಳ ತಂದೆನು ನಿನಗೊಬ್ಬಳ' ಎಂದು ಹೇಳಿದ ಮೇಲೆ ಸಂತೋಷದಿಂದ ಅವಳನ್ನು ಸ್ವಾಗತಿಸುತ್ತಾಳೆ. ದಿನತುಂಬಿ ಮಗು ಜನಿಸುತ್ತದೆ.

'ಕಟ್ಟಿದರು ಮಂಡೆಯ ಪಾವುಡೆಯಲಿ ಕೊಟ್ಟರೆ ಖಾರ ಚರ್ವಗೆಯ
ಇಟ್ಟರೆ ಅಷ್ಟದಿಕ್ಕಿಗೆ ಎಂಟುರಕ್ಷೆಯ ಹರಸಿ ಆರತಿಯನೆತ್ತಿದರು'

ಗಿರಿಯಮ್ಮ ವಿವರವಾಗಿ ಸಾಂಪ್ರದಾಯಿಕ ಆಚರಣೆಗಳನ್ನು ಹೇಳುತ್ತಾಳೆ. ಮಗು ಬೆಳೆದು 'ತಾತನ ತೋರೆಂದರೆ' ಎಂಬ ಭಯದಿಂದ ಚಂದ್ರಾವತಿ ಮಗುವನ್ನು ಹರಿವ ನೀರಿನೊಳಗೆ ಬಿಡುತ್ತಾಳೆ. ಇತ್ತ ಉದ್ದಾಳಿಕ ನದಿಗೆ ಬಂದವನು,

'ಸಣ್ಣ ಬೆರಳು ತನ್ನ ಬಾಯೊಳಗಿರಿಸಿದೆ ಕಣ್ಣಮುಚ್ಚುತ ತೆರವುತಲೆ
ಪೊನ್ನಪುತ್ಥಳಿಯಂತೆ ಥಳಥಳಿಸುವ ಪುಟ್ಟಚಿಣ್ಣನ ತೊಟ್ಟಿಲ ಕಂಡ'

ತನ್ನ ಮಗನೇ ಇವನು ಎಂದು ಗುರುತಿಸಿ ಮನೆಗೆ ತಂದು ಸಾಕುತ್ತಾನೆ. ಮಗುವಿನ ಬಾಲಲೀಲೆಯನ್ನು, ಉದ್ದಾಳಿಕನ ಪಿತೃ ವಾತ್ಸಲ್ಯವನ್ನು ಗಿರಿಯಮ್ಮ ಬಹು ಸೊಗಸಾಗಿ ಚಿತ್ರಿಸಿದ್ದಾಳೆ. ಕಾವ್ಯದ ಉದ್ದಕ್ಕೂ ಹೀಗೆ ಗಿರಿಯಮ್ಮ ಮನುಷ್ಯ ಲೋಕದ ಕಷ್ಟ ಸುಖ, ಆನಂದಗಳನ್ನು ಸಹಜವಾಗಿ ನಿರೂಪಿಸಿದ್ದಾಳೆ. ಇಡೀ ಕಾವ್ಯದಲ್ಲಿ ಚಂದ್ರಾವತಿಯ ಪಾತ್ರ ಮನಸೆಳೆಯುತ್ತದೆ. ಯಾವ ತಪ್ಪು ಮಾಡದಿದ್ದರೂ ಹಲವು, ಅಪವಾದ ನಿಂದೆಗಳಿಗೊಳಗಾಗಿ ಆಕೆ ಅನುಭವಿಸುವ ಯಾತನೆ ಮನಸ್ಸನ್ನು ಕರಗಿಸುತ್ತದೆ. ಸ್ತ್ರೀಹೃದಯದ ಕೋಮಲಾಂತಃಕರಣವನ್ನು ಗಿರಿಯಮ್ಮ ಅರಿತು ನಿರೂಪಿಸಿದ್ದಾಳೆ.

*೨. ಶಂಕರಗಂಡನ ಹಾಡು* : ಗಿರಿಯಮ್ಮನ ನಿರೂಪಣಾ ಚಾತುರ್ಯ ಈ ಹಾಡಿನಲ್ಲಿ ಬಹು ಚೆನ್ನಾಗಿ ವ್ಯಕ್ತವಾಗಿದೆ. ತ್ರೈಲೋಕ್ಯವಂದ್ಯ ಕೈಲಾಸಾಧಿಪತಿ ಶಂಕರನೆಂದರೆ ಶಿವ. ಅವನ ಪ್ರೀತಿಯ ತಂಗಿ ರತಿ ಕೋಗಿಲೆಯಂತೆ ಹಾಡುತ್ತಾ ಗಿಳಿಯಾಡಿಸುತ್ತಾ ಚಿನ್ನದ ಮಣೆಯ ಮೇಲೆ ಕುಳಿತು ಪಗಡೆಯಾಡುತ್ತಾ ಕಾಲಕಳೆಯುತ್ತಿದ್ದಾಳೆ. ನವಲಾವಣ್ಯವತಿಯಾದ ತಂಗಿಗೆ ಮನ್ಮಥನೇ ಸರಿಯಾದ ವರನೆಂದು ಆಲೋಚಿಸಿ ಬುದ್ಧಿವಂತರನ್ನು ಅವನಲ್ಲಿಗೆ ಕಳಿಸುತ್ತಾನೆ. ರತಿಯ ಚೆಲುವನ್ನು ಕೇಳಿದ್ದ ಮನ್ಮಥನಿಗೂ ಮನದಲ್ಲಿ ಆಸೆ ಉಂಟಾಗಿ ಕೈಲಾಸಪುರಕ್ಕೆ ಬರುತ್ತಾನೆ. 'ಹೊಂಬಣ್ಣದ್ವಾರಿವಾಣದೊಳಗೆ ತಾಂಬೂಲವ ತಂದಿಟ್ಟು' ಸ್ವಾಗತಿಸಿ ಉಪಚರಿಸುತ್ತಾರೆ. ಮನ್ಮಥನೇ ಮುಂದಾಗಿ ವಿವಾಹದ ಪ್ರಸ್ತಾಪ ಮಾಡುತ್ತಾನೆ. ಆಗ ಶಿವ ಮತ್ತು ಕಾಮರ ನಡುವೆ ನಡೆಯುವ ಮಾತುಕತೆ ಬಹು ಸ್ವಾರಸ್ಯವಾಗಿದ್ದು ಹೃದ್ಯವಾಗಿ ಬಂದಿದೆ. ಪ್ರೀತಿಯ ತಂಗಿ ವಿವಾಹವಾದ ಮೇಲೂ ಆಗಾಗ ತನ್ನ ಮನೆಗೆ ಬರುತ್ತಿರಬೇಕೆಂಬ ಇಚ್ಛೆ ಅಣ್ಣ ಶಂಕರಗಂಡನಿಗೆ.

ಸರ್ವಲಕ್ಷಣವುಳ್ಳ ಸರಸಿಜನೇತ್ರೆಯು ಒಬ್ಬಳೆ ರತಿ ನಮ್ಮ ತಂಗಿ
ಹಬ್ಬಹುಣ್ಣಿಮೆಗೆ ಕಳಿಸದೆ ನಮ್ಮನೆಗೆ ನಿರ್ಬಂಧ ಮಾಡುವಿರೆಂದ
ಕೂಡಲೆ ಮನ್ಮಥ 'ಅನುಮಾನ ಮಾಡುವುದೇಕೋ ನೀ ಇಷ್ಟೊಂದು ಅವಳಿಗೆ
ಸ್ವತಂತ್ರವಿಲ್ಲೇನು ನೆನೆದಾಗ ಕಳುಹುವೆ ನಿಮ್ಮ ಮನೆಗೆಂದು ಮನಸಿಜ ನುಡಿದ
ದೈನ್ಯದಲಿ'

ಬೇಕಾದಾಗ ತವರು ಮನೆಗೆ ಹೋಗುವ ಸ್ವಾತಂತ್ರ್ಯ ಹೆಣ್ಣಿಗಿರಬೇಕೆಂಬ ಆಧುನಿಕ ವಿಚಾರ ಗಿರಿಯಮ್ಮನಿಗೂ ಇತ್ತೆಂದು ತೋರುತ್ತದೆ ! ಕೊನೆಗೆ ಶಂಕರಗಂಡ ರಾಶಿಕೂಟ ನೋಡಿ ಶುಭ ಲಗ್ನದಲ್ಲಿ ರತಿ ಮನ್ಮಥರ ವಿವಾಹ ಮಾಡಿ ಅನೇಕ ಬಳುವಳಿಗಳನ್ನು ಕೊಟ್ಟು ವಿಲಾಸಪಟ್ಟಣಕ್ಕೆ ಕಳಿಸಿಕೊಡುತ್ತಾನೆ. ಕೆಲವು ದಿನಗಳಾದ ಮೇಲೆ ಶಂಕರಗಂಡ ತಂಗಿಯನ್ನು ನೋಡಬೇಕೆಂದು ಹೋಗುತ್ತಾನೆ.

ಬಿಗಿದು ಸುತ್ತಿದ ದೊಡ್ಡ ಚೆಂಡಿಯ ಬೆನ್ನಿಗೆ ಬಿಗಿದ ನಾಡಗಂಬಳಿಯ
ಹೆಗಲ ಮೇಲಿನ ಬಾರಿ ಕೋಲು ಮನ್ಮಥರಾಯ ನಗುವಂತೆ----

ಮಾಡುತ್ತದೆ. ಶಿವನ ವೇಷವನ್ನು ರತಿಯಲ್ಲಿ ಅಪಹಾಸ್ಯ ಮಾಡಿ ನುಡಿಯುತ್ತಾನೆ ಮದನ. ಕೂಡಲೆ ರತಿ

ಬಡವನಲ್ಲವೊ ಆತ ಬಹುಪರಾಕ್ರಮಿ ಒಡಹುಟ್ಟಿದಣ್ಣ ತಾ ಮುನಿಯೆ
ಕೆಡುವೋದು ನಮ್ಮ ಐಶ್ವರ್ಯ ಆತನಗೊಡವೆ ನಮಗೆ ಬೇಡವೆಂದ್ಲು

ರತಿ ಇಷ್ಟು ಹೇಳಿದರು ಮದನ ಶಿವನನ್ನು 'ತಲೆಎತ್ತಿ ನೋಡಲಿಲ್ಲವು ಆತನ ಕೂಡೆ ಗೆಲುವಿಂದ ಮಾತಾಡಲಿಲ್ಲ' ಕೊನೆಗೆ ಶಿವನೇ ತಂಗಿಯನ್ನು ಕಳುಹಿಸಿ ಕೊಡುವಂತೆ ಕೇಳುತ್ತಾನೆ.

ಹೂವಿನ ಮಂಚ ಪಂಚಭಕ್ಷ್ಯ ಪರಮಾನ್ನವುದಾವಾಗ ನಮ್ಮನೆಯಲ್ಲಿ
ಉಣ್ಣಲಾರಳು ಜೋಳದನ್ನವ ನಮ್ಮಾಕೆ ನಾವೀಗ ಕಳಿಸುವೋರಲ್ಲ

ಎಂದು ಅಹಂಕಾರದಿಂದ ನುಡಿಯುತ್ತಾನೆ. ಶಿವ ಅವನಿಗೆ ಬುದ್ಧಿ ಕಲಿಸಲು ನಿರ್ಗತಿಕನನ್ನಾಗಿ ಮಾಡುತ್ತಾನೆ. ಮುಂದೆ ಶಿವನಲ್ಲಿಯೇ ಆಳಾಗಿದ್ದುಕೊಂಡು, ದನಕಾಯುವ ಕೆಲಸ ಮಾಡಿ, ಮೂರು ಬೊಗಸೆ ಅಂಬಲಿ ಕುಡಿಯುವ ದುಸ್ಥಿತಿ ಮನ್ಮಥನಿಗೆ ಒದಗುತ್ತದೆ. ಅವನ ಕಷ್ಟವನ್ನು ನೋಡಲಾರದೆ ರತಿದೇವಿ 'ಕಣ್ಣಲ್ಲಿ ಉದಕವ ತುಂಬಿ ಇನ್ನಾದರು ಬಿಡಿಸೆನುತ ಅಣ್ಣಗೆ ಬೇಡಿಕೊಂಡು' ಬಿನ್ನೈಸುತ್ತಾಳೆ. ಮನಕರಗಿದ ಶಂಕರ ಮತ್ತೆ ಅವನಿಗೆ ಸಕಲವನ್ನು ಕರುಣಿಸುತ್ತಾನೆ.

ಮನ್ಮಥನ ಗರ್ವಭಂಗವೇ ಈ ಕಾವ್ಯದ ಮುಖ್ಯ ತಿರುಳು. ಅಹಂಕಾರ ಸಲ್ಲದು, ಐಶ್ವರ್ಯ ನಶ್ವರ, ದೈವಕೃಪೆ ಮುಖ್ಯ ಎಂಬ ಅಂಶಗಳನ್ನು ಗಿರಿಯಮ್ಮ ಬಹು ಸೊಗಸಾಗಿ, ಆಕರ್ಷಕ ಶೈಲಿಯಲ್ಲಿ ನಿರೂಪಿಸಿದ್ದಾಳೆ.

***೭. ಸೀತಾಕಲ್ಯಾಣ*** : ಇದು ಸರಳವಾದ ದೇಸೀ ನುಡಿಯಲ್ಲಿ ರಚಿತವಾಗಿರುವ ೮೭ ನುಡಿಗಳ ಹಾಡು. ರಾಮಜಾನಕಿಯರ ಉರುಟಣೆಯ ವರ್ಣನೆ ಇದರ ವಸ್ತು. ಆಕೆಯೆ ಹೇಳಿರುವಂತೆ

ಮದುವೆಯ ನಾಲ್ಕು ದಿವಸದಲ್ಲಿ
ಮದುವಣಿಗನಾ ರಾಮ ಜಾನಕಿಗೆ
ಮುದದಿಂದ ಅರಸಿನೆಣ್ಣೆಯ ಮಾಡೋ ಸಂಭ್ರಮ
ಪದವ ಹೇಳುವೆ ಕೇಳೀ ಜಯಜಯಾ

ಕೃತಿಯ ಹೆಸರು ಸೀತಾ ಕಲ್ಯಾಣವಾದರೂ ಕಲ್ಯಾಣದ ವರ್ಣನೆಯಾಗಲಿ ಅದರ ಹಿಂದಿನ ಬಿಲ್ಲು ಮುರಿದ ವಿಷಯವಾಗಲಿ ಇಲ್ಲ. ವಿವಾಹವಾದ ನಾಲ್ಕನೇದಿನ ಮಾಡುವ 'ಅರಸಿನೆಣ್ಣೆ ಶಾಸ್ತ್ರದ ವರ್ಣನೆಯೇ ಮುಖ್ಯವಾಗಿ ಬಂದಿದೆ.

ಪ್ರತಿಯೊಂದು ಪದ್ಯದ ಕೊನೆಗೂ ಸೊಲ್ಲಿನಂತೆ 'ಜಯ ಜಯಾ' ಎಂದು ಬಂದಿದೆ. ಶ್ರೀ ರಾಮನಿಗೆ ಅರಸಿನೆಣ್ಣೆಯ ಮಾಡಲು 'ಕೌಸಲ್ಯ ದೇವಿ ಕೇರಿ ಕೇರಿಯ ಗುಂಟೆ ಮುತ್ತೈದೇರನು ಕರೆಸಿದಳು' ರಾಮನ ತಾಯಿಯರು ಪೀತಾಂಬರವನುಟ್ಟು ಸಿದ್ಧರಾದರು.

ಅರಸಿನೆಣ್ಣೆಯ ಶಾಸ್ತ್ರ ಹೆಣ್ಣಿನ ತಂದೆ ಜನಕನಮನೆಯಲ್ಲಿ ನಡೆಯುತ್ತದೆ. ಅಲ್ಲಿಗೆ ಹೊರಟ ದಶರಥ ಮಹಾರಾಜ 'ಸೊಲ್ಲು ಸೊಲ್ಲಿಗೆ ಹಿಡಿ ಹೊನ್ನನು ಬೇಗನೆ ಚೆಲ್ಲುತ' ಬರುತ್ತಾನೆ. ಅವನು ಬರುತ್ತಿರುವುದನ್ನು ದೂರದಿಂದ ಕಂಡು ಜನಕರಾಯ ಗೌರವದಿಂದ ಎದುರುಗೊಂಡು ಬಂದು ಗದ್ದುಗೆಯನ್ನು ಹಾಸಿ ಬೀಗರಿಗೆ ಉಪಚಾರ ಮಾಡಿದನಂತೆ. ಇತ್ತ ಸಂಭ್ರಮದ ನಡುವೆ ಹೆಂಗಳೆಯರು ರಾಮನನ್ನು ವಿಧವಿಧವಾಗಿ ಸ್ತುತಿಸಿ ಹಸೆಗೆ ಕರೆಯುತ್ತಾರೆ. ಮತ್ತೊಂದು ಕಡೆ

ಅರಳುಗಂಗಳಿಗೆ ಅಂಜನ ಹಚ್ಚಿ
ಬೆರಳಿಗೆ ಮುದ್ರೆ ಉಂಗುರವಿಟ್ಟು
ಕೊರಳಿಗೆ ಯೇಕಾವಳಿಯನೆ ಹಾಕೋರು
ತರಳಾಕ್ಷಿಯರಾ ಜಾನಕೀಗೆ

ಹೀಗೆ ಅಲಂಕೃತಳಾಗಿ ಸೀತೆ ಕುಳಿತಿದ್ದ ಹಸೆಯೆಡೆಗೆ ರಾಮ ಬಂದ ಎನ್ನುವುದನ್ನು ಗಿರಿಯಮ್ಮ ಭಕ್ತಿಭಾವದಿಂದ ಮನತುಂಬಿ ತನ್ಮಯಳಾಗಿ ಹಾಡಿದ್ದಾಳೆ. ಹಾಗೆ ಹಾಡುವಾಗ ರಾಮಾಯಣದ ಎಷ್ಟೋ ವಿಷಯಗಳನ್ನು ಹೇಳುತ್ತಾ ಸೀತಾಕಲ್ಯಾಣದ ಅನಂತರದ ಘಟನೆಗಳಾದ ಮಾರೀಚ ವಧೆ, ಸೇತು ಬಂಧನ, ಸುಗ್ರೀವ ರಕ್ಷಣೆ ಇತ್ಯಾದಿ ಘಟನೆಗಳನ್ನು ಹೇಳಿದ್ದಾಳೆ.

ಮುಂದೆ ಶ್ರೀ ರಾಮ ಸೀತೆಯ ಕರಗಳ ಪಿಡಿದೆತ್ತಿದ ಎಂದು ಒಂದು ಸಂಪ್ರಾದಾಯವನ್ನು ಗಿರಿಯಮ್ಮ ಹೇಳಿದ್ದಾಳೆ. ಆ ಸಂದರ್ಭದಲ್ಲಿ ಆಕೆಯ ಹಾಸ್ಯಪ್ರವೃತ್ತಿ ಮಿನುಗುವುದನ್ನು ಕಾಣುಬಹುದು.

ಇಳೆಯ ಜಗಂಗಳನುದರದಲಿ
ಅಳವಡಿಸಿದ ಮಹಾತ್ಮಕನೂ
ಇಳೆಯ ಮಗಳನು ಯೆತ್ತಲಾರದೆ ರಾಮ
ಬಳಲಿದನೆಂದು ನಕ್ಕರು ಜನರೂ

ಅನಂತರ ಕೌಸಲ್ಯಾದೇವಿ ಶ್ರೀ ರಾಮನಿಗೆ ತೊಡೆಯೆಂದು ಅರಶಿನವನ್ನು ಸೀತೆಯ ಕೈಗೆ ಕೊಡುತ್ತಾಳೆ. ಸೀತೆ ನಾಚುತ್ತಾನಿಂದು ಶ್ರೀ ರಾಮನ ಸಿರಿಮುಖವನ್ನು ತೋರೆಂದು ಬೇಡುತ್ತಾ ದಶಾವತಾರಗಳನ್ನು ನೆನೆಯುತ್ತಾಳೆ. ಹಾಗೆಯೇ ಪಾದಮಹಿಮೆಯನ್ನು ಹಾಡಿ ಶ್ರೀ ಚರಣಕ್ಕೆ ಹುವ್ವಿನಪೂಜೆಯನ್ನು ಮಾಡಿ 'ಅಗಲದೆನ್ನುರದೊಳು ಸ್ವಾಮಿಯಾಗಿರುಯೆಂದು' ಸತಿಗೆ ತಕ್ಕದ್ದನ್ನು ಪ್ರಾರ್ಥಿಸುತ್ತಾಳೆ.

ಜಾನಕಿ ರಾಮನಿಗೆ ಅರಿಶಿನ ಹಚ್ಚಿಯಾದ ಮೇಲೆ ರಾಮ ಆಕೆಗೆ ಅರಿಶಿನ ಹಚ್ಚುತ್ತಾನೆ. ಈ ಕಾರ್ಯವನ್ನು ಪಾರ್ವತಿ ಹಿರಿಯ ಮುತ್ತೈದೆಯಾಗಿ ನಿಂತು ನಡೆಸುತ್ತಾಳೆ. ರಾಮ ಹಸೆಯಲ್ಲಿ ಕುಳಿತೇ ಅರಶಿನ ಹಚ್ಚೋಣವೆಂದು ಇದ್ದಾಗ ಪಾರ್ವತಿ ಅವನನ್ನು ಛೇಡಿಸುತ್ತಾಳೆ.

ಬಲ್ಲೆವೊದೇವೋತ್ತಮ ನಿನ್ನ
ಮಲ್ಲಲೋಚನೆ ಜಾನಕಿಯೊಡನೆ
ಸಲ್ಲದು ಸಲಿಗೆಯು ರಾಘವ ನೀ
ನಿಲ್ಲಬೇಕೆನುತ ಪಾರ್ವತಿ ನುಡಿದೋರೆ

ರಾಮ ನಿಂತು ತಲೆಬಾಗಿಸಿದ್ದ ಸೀತೆಯ ಮುಖ ತೋರೆಂದು ಕೇಳುತ್ತಾನೆ.

ಲೋಕದೊಳಗೆಣೆಗಾಣೆ ನಿನಗೆಂದು
ಏಕಪತಿವ್ರತೆ ಕೈಗೊಂಡೆ

ಈ ಮಾತುಗಳು ಸೀತೆಯ ವ್ಯಕ್ತಿತ್ವವನ್ನು ಎತ್ತಿ ಹೇಳುತ್ತವೆ.

ಅರಶಿನ ಹಚ್ಚಿಯಾದ ಮೇಲೆ, ಪರಸ್ಪರರು ಮುತ್ತು ರತ್ನ ಹಿಡಿದು ನಿವಾಳಿ ತೆಗೆಯುತ್ತಾರೆ. ಅನಂತರ ಕುಂಕುಮದೋಕುಳಿಯಾಡುತ್ತಾರೆ. ಇದರೊಂದಿಗೆ ಉರಟಣೆ ಮುಗಿಯುತ್ತದೆ.

ಸೀತಾಕಲ್ಯಾಣ ಮೇಲ್ಮಟ್ಟದ ಕಾವ್ಯವಲ್ಲ. ಮದುವೆಯ ಮನೆಗಳಲ್ಲಿ ಹಾಡಬಹುದಾದ ಒಂದು ಹಾಡು ಅಷ್ಟೆ. ಮದುವೆ ಮನೆಯ ವೈಭವ, ಉರಟಣೆಯ ಸಂಭ್ರಮ, ದಶಾವತಾರ ವರ್ಣನೆ ಇವುಗಳನ್ನು ಗಿರಿಯಮ್ಮ ಉತ್ಸಾಹದಿಂದ ವರ್ಣಿಸಿದ್ದಾಳೆ. ಕೆಲವೊಮ್ಮೆ ಔಚಿತ್ಯವಿಲ್ಲದ ವರ್ಣನೆಗಳು ಬಂದಿವೆ. ಉದಾಹರಣೆಗೆ ದಶರಥ ಮುಂತಾದವರು ಜನಕನ ಮನೆಗೆ ಹೊರಟಾಗ ವಾದ್ಯಗಳು ಹೀಗೆ ಮೊಳಗುತ್ತಿದ್ದುವಂತೆ.

ಹೊಡೆವ ತಂಬಟ ಭೇರಿ ನಿಸ್ಸಾಳ
ಬಿಡದೆ ಚೀರುವ ಹೆಗ್ಗಾಳೆಗಳು
ಸಿಡಿಲು ಗರ್ಜಿಸುವಂತೆ ಪಂಚಮ ವಾದ್ಯದಿ
ನಡೆದರು ಜನಕರಾಯನ ಮನೆಗೆ

ಇದನ್ನು ಓದಿದರೆ ಮಂಗಳ ವಾದ್ಯಗಳ ಮದುವೆಯ ನೆನಪು ಮನದಲ್ಲಿ ಮೂಡದೆ ರಣರಂಗದ ರಣಭೇರಿ ರಣಕಹಳೆಗಳ ಮೊಳಗು ಕೇಳಿಬರುತ್ತದೆ. ಆದರೆ ರಾಮನನ್ನು ಕುರಿತು ಹಾಡುವಾಗ, ರಾಮಾಯಣದ ಘಟನೆಗಳನ್ನು ಹೇಳುವಾಗ, ಹರಿಯ ದಶಾವತಾರಗಳನ್ನು ಸ್ತುತಿಸುವಾಗ ಗಿರಿಯಮ್ಮನ ಹೃದಯ ಭಕ್ತಿರಸದಿಂದ ಉಕ್ಕೇರಿ ಹರಿಯುತ್ತದೆ. ರಾಮನ ಶ್ರೀ ಚರಣದ ವರ್ಣನೆ

ಓದುವಾಗ ತಟ್ಟನೆ 'ಚರಣಸುಳಾದಿ' ನೆನಪಾಗುತ್ತದೆ. ಅವಳ ಭಾಷೆ ಅತ್ಯಂತ ಸರಳವಾಗಿದ್ದು ಅಲ್ಲಲ್ಲಿ ದೇಸಿನುಡಿಗಳ ಸೊಬಗಿನಿಂದ ಸೊಗಸುತ್ತದೆ.

ಈಗೀಗ ಒಂದೇ ದಿನದಲ್ಲಿ ಮದುವೆ ಮುಗಿಯುವುದರಿಂದ ಉರುಟಣೆಯ ಸಂಪ್ರದಾಯ ಮದುವೆಯಲ್ಲಿ ತನ್ನ ಸ್ಥಾನವನ್ನು ಕಳೆದುಕೊಂಡಿದೆ. ಅಂದ ಮೇಲೆ ಉರುಟಣೆಪದ ಹಾಡುವವರು ಎಲ್ಲಿ ದೊರೆತಾರು? ಅದರ ವಿವರಗಳನ್ನು ತಿಳಿಯ ಬಯಸುವ ಕುತೂಹಲವುಳ್ಳವರು ಸೀತಾಕಲ್ಯಾಣವನ್ನು ಓದಿ ನೋಡಬಹುದು.

*೪. ಚಂದ್ರಹಾಸನ ಕಥೆ* : ಮಹಾಭಾರತದಲ್ಲಿ ಬರುವ ಹಲವು ಕಥೆಗಳಲ್ಲಿ ಇದೂ ಒಂದು. ಪಾಂಡವರು ಅಶ್ವಮೇಧ ಯಾಗವನ್ನು ಮಾಡಿದಾಗ ಕುದುರೆಯ ಬೆಂಗಾವಲಿಗೆ ಅರ್ಜುನನು ಹೊರಡುತ್ತಾನೆ. ಕುದುರೆಯನ್ನು ಚಂದ್ರಹಾಸನ ಮಗ ಮಕರಧ್ವಜ ಕಟ್ಟಿಹಾಕುತ್ತಾನೆ. ಆಗ ನಾರದರು ಅರ್ಜುನನಿಗೆ ಚಂದ್ರಹಾಸನ ಕಥೆಯನ್ನು ಹೇಳುತ್ತಾರೆ. ಲಕ್ಷೀಶನ ಜೈಮಿನಿ ಭಾರತದಲ್ಲಿ ಬರುವ ಈ ಪ್ರಸಿದ್ಧ ಕತೆಯನ್ನು ಮೂಲವಾಗಿಟ್ಟುಕೊಂಡು ತಾನು ಕೃತಿ ರಚಿಸಿರುವುದಾಗಿ ಗಿರಿಯಮ್ಮ ಪ್ರಾರಂಭದಲ್ಲೇ ಹೇಳಿಕೊಂಡಿದ್ದಾಳೆ. ನಾಲ್ಕು ಸಂಧಿಗಳ ದೀರ್ಘ ಕೃತಿ. ಸಾಂಗತ್ಯದಲ್ಲಿದೆ. ಗಿರಿಯಮ್ಮನ ನಿರೂಪಣಾ ಸಾಮರ್ಥ್ಯ ಹಾಗೂ ಕಾವ್ಯ ಸೌಂದರ್ಯ ಇದರಲ್ಲಿ ನಿಚ್ಚಳವಾಗಿದೆ.

ವ್ಯಾಸಾಂಬರೀಷ ವಿಭೀಷಣಕ್ರೂರ ಪ
ರಾಶರ ಧೃವ ಪ್ರಹ್ಲಾದ
ಈಸು ಮಂದಿ ಭಕ್ತರಿಗಧಿಕನು ಚಂದ್ರ
ಹಾಸನೆಂಬಾ ಹರಿಭಕ್ತ

ಎಂದು ಮಹಾಭಗವದ್ಭಕ್ತನಾದ ಚಂದ್ರಹಾಸನ ಕಥೆ ಹೇಳಲು ಗಿರಿಯಮ್ಮ ತೊಡಗುತ್ತಾಳೆ. ಭಗವಂತನ ಕೃಪೆ ಇದ್ದರೆ ಎಂಥ ಕಷ್ಟ ಬಂದರೂ ಪಾರಾಗಬಹುದು ಎಂಬುದಕ್ಕೆ ಚಂದ್ರಹಾಸನ ಕಥೆಯೊಂದು ನಿದರ್ಶನ.

ಜನಿಸಿದಾಗಲೇ ಹೆತ್ತವರನ್ನು ಕಳೆದುಕೊಂಡು ಕುಂತಳಪುರದ ದಾಸಿಯೊಬ್ಬಳ ಆಶ್ರಯದಲ್ಲಿ ಬೆಳೆದು ತನ್ನ ಸದ್ಗುಣಗಳಿಂದ ಎಲ್ಲರ ಮೆಚ್ಚಿಗೆಗಳಿಸಿದ್ದ ಇಂದುಹಾಸನಿಗೆ ಒಮ್ಮೆ ಗೋಲಿಯಾಕಾರದ ಸಾಲಿಗ್ರಾಮ ಶಿಲೆಯೊಂದು ದೊರಕುತ್ತದೆ. ಅದನ್ನು ದಿನವೂ ಪೂಜಿಸುತ್ತಾ, ಇಡಲು ಸರಿಯಾದ ಸ್ಥಳವಿಲ್ಲದೆ ಬಾಯೊಳಗಿಟ್ಟುಕೊಂಡು ಕಾಪಾಡಿಕೊಳ್ಳುತ್ತಾನೆ. ಪರದೇಶಿಯಾದ ಚಂದ್ರಹಾಸನ ಮುಖದಲ್ಲಿದ್ದ ರಾಜಲಕ್ಷಣಗಳನ್ನು ಮಂತ್ರಿ ದುಷ್ಟ ಬುದ್ಧಿಯ ಮನೆಗೆ ಬಂದಿದ್ದ ವಿಪ್ರರು ಕಂಡು 'ಅತಿಲಕ್ಷಣ ಸಂಪನ್ನ ಸುಶೀಲನು ಮತಿವಂತ ಧೀರ ರಾಜ್ಯಕಿವನೆ ಅಧಿಪತಿ' ಎನ್ನುತ್ತಾರೆ. ಮಂತ್ರಿ ದುಷ್ಟಬುದ್ಧಿಗೆ ಸಹಿಸಲಾಗುವುದಿಲ್ಲ. ಚಂದ್ರಹಾಸನನ್ನು ಕೊಲ್ಲಲು ಕಟುಕರನ್ನು ಕಳುಹಿಸುತ್ತಾನೆ. ಬಾಲಕ ಚಂದ್ರಹಾಸ 'ಗಾಳಿಗೊಡ್ಡಿದ ಸೊಡರಂತೆ ತಲ್ಲಣಿಸುತ ಗೋಳಿಟ್ಟು ಹರಿಗೆ ದೂರಿದನು. ಕಟುಕರು ಕರುಣೆಯಿಂದ ಅವನನ್ನು ಬಿಟ್ಟು ಹೋಗುತ್ತಾರೆ. ಬೇಟೆಗೆ ಬಂದಿದ್ದ ಚಂದನಾವತಿಯ ಪುಳಿಂದರಾಯ ಮಗುವನ್ನು ಕಂಡು ಊರಿಗೆ ಕರೆತರುತ್ತಾನೆ. ಚಂದ್ರಹಾಸ ಎಂದು ಹೆಸರಿಟ್ಟು ಊರಿಗೆಲ್ಲಾ ಸಕ್ಕರೆ ಹಂಚುತ್ತಾನೆ. ದುಷ್ಟಬುದ್ಧಿ ಮತ್ತೆ ಮತ್ತೆ ಅವನನ್ನು ಕೊಲ್ಲುವ ಸಂಚು ಮಾಡುತ್ತಾನೆ. ವಿಷಕೊಟ್ಟು ಕೊಲ್ಲಿಸುವಂತೆ ಮಗನಿಗೆ ಪತ್ರ ಬರದರೆ ಅದು ವಿಷಯೆಯ ಕೊಡುವುದು ಎಂದಾಗಿ ಚಂದ್ರಹಾಸ ಅಳಿಯನಾಗುತ್ತಾನೆ. ಮೂರನೇ ಸಂಚಿನಲ್ಲಿ ದುಷ್ಟಬುದ್ಧಿಯ ಮಗನೇ ಕಾಳಿಗೆ ಬಲಿಯಾಗುತ್ತಾನೆ. ಕೊನೆಗೆ ಚಂದ್ರಹಾಸ ಮಂತ್ರಿಯನ್ನು, ಮಂತ್ರಿಯ ಮಗನನ್ನು ಕಾಳಿಯ ಕೃಪೆಯಿಂದ ಬದುಕಿಸಿ ಮುನ್ನೂರು ವರ್ಷಕಾಲ ಸುಖದಿಂದ ಬಾಳುತ್ತಾನೆ. ಬಾಲಕ ಚಂದ್ರಹಾಸನ ವರ್ಣನೆ, ಬೇಟೆಯ ವರ್ಣನೆ, ವಿಷಯೆಯ ಪ್ರಸಂಗ ಮುಂತಾದುವು ಕಾವ್ಯಾತ್ಮಕವಾಗಿದ್ದು ಮನಸ್ಸನ್ನು ಆಕರ್ಷಿಸುತ್ತವೆ. ಕಥೆಯ ಓದು ಸರಳವಾಗಿದೆ. ಸಾಂಗತ್ಯದಲ್ಲಿ ಒಳ್ಳೆಯ ಲಾಲಿತ್ಯವಿದೆ. ಸಾಲಿಗ್ರಾಮಶಿಲೆಯ ಶ್ರೇಷ್ಠತೆ, ಏಕಾದಶಿ ವ್ರತದ ಮಹಾತ್ಮೆ, ಹರಿಭಕ್ತಿಯ ಹಿರಿಮೆ ಇವುಗಳನ್ನು ಗಿರಿಯಮ್ಮ ಭಕ್ತಿ ಭಾವದಿಂದ ವರ್ಣಿಸಿದ್ದಾಳೆ.

*೫. ಬ್ರಹ್ಮ ಕೊರವಂಜಿ* : ಕಂಸ ತನ್ನ ತಂಗಿಯಾದ ದೇವಕಿಯನ್ನು ವಸುದೇವನಿಗೆ ಕೊಟ್ಟು ಮದುವೆ ಮಾಡುತ್ತಾನೆ. ಮೆರವಣಿಗೆಯ ಸಂದರ್ಭದಲ್ಲಿ ಆಕಾಶವಾಣಿಯ ಮೂಲಕವಾಗಿ ದೇವಕಿಯ ಗರ್ಭದಿಂದ ಜನಿಸುವ ಮಗುವೇ ತನಗೆ ಮೃತ್ಯುವಾಗುತ್ತದೆ ಎಂಬ ವಿಷಯ ತಿಳಿದ ಕಂಸ ದಂಪತಿಗಳನ್ನು ಸೆರೆಯಲ್ಲಿಡುತ್ತಾನೆ. ಸ್ವತಃ ಬ್ರಹ್ಮನೇ ಕೊರವಿಯ ವೇಷದಲ್ಲಿ ಬಂದು ದೇವಕಿಗೆ ಭವಿಷ್ಯದ ಶಕುನ ಹೇಳಿ, ಅವಳಲ್ಲಿ ಭರವಸೆ ಮೂಡಿಸಿದ್ದು ಈ ಕೃತಿಯ ಕಥಾವಸ್ತು.

ಗುಂಜಿಯ ದಂಡೆಯು ತೋಳಭಾಪುರೆ ಗಲ್ಲಕೊತ್ತಿದ ವೀಳ್ಯವು ಮಂಜಾಡಿಯ ಸರ ಹವಳಸರ ಹತ್ತೆ ಸರವಾ ಕೊರಳಲಿ ಹೊಳೆಯಲು ಅಂಜನವನಿಟ್ಟು ಅಲರಗಣ್ಣಿಗೆ-----

ಜೀವಂತ ಕೊರವಿಯ ಆಕಾರ ತಾಳುತ್ತಾನೆ ಬ್ರಹ್ಮ.

ಮುತ್ತುಮಾಣಿಕ ಹೊನ್ನಗೂಡೆಯ ಪಿಡಿದು
ಉತ್ತಮ ಶಿಶುವ ಬೆನ್ನಲಿ ಕಟ್ಟಿ

ಬರುವ ಕೊರವಂಜಿಯ ಚಿತ್ರ ಅತ್ಯಂತ ಸಹಜವಾಗಿದೆ. ಕೊರವಿಯನ್ನು ಕಂಡ ದೇವಕಿ ಸನ್ನೆ ಮಾಡಿ ಕರೆಯುತ್ತಾಳೆ.

ಮಲೆಯಾಳ ಕೊಂಕಣದೇಶ ಮಹಾರಾಷ್ಟ ಗುಜ್ಜರದೇಶ
ಚೆಲುವ ಕಾಶ್ಮೀರ ಕಳಿಂಗ ಕರ್ನಾಟಕದೇಶ
ತುಳುವ ತೆಲುಗ ದೇಶವನ್ನು ತಿರುಗಿ-----

ಬಂದ ತಾನು 'ತಪ್ಪು ಹೇಳುವ ಕೊರವಿ ಅಲ್ಲ' ಎಂದು ದೇವಕಿಯಲ್ಲಿ ವಿಶ್ವಾಸ ಮೂಡಿಸುತ್ತಾಳೆ.

ಎಂಟನೆ ಗರ್ಭವಿದಮ್ಮ ನಿಮ್ಮುದರದಿ
ಅಂಟಿಹ ಮಗನು ಕಾಣಮ್ಮ
ಕಂಟಕ ಕಂಸನ ಅಮ್ಮಾ ಇವನು ಪುಟ್ಟಿ
ಗಂಟಲ ಮುರಿವ ಕಾಣಮ್ಮ

ಎಂಬ ಶಕುನ ಹೇಳಿ ಕೃಷ್ಣನ ಬಾಲಲೀಲೆಗಳನ್ನು, ಆತನಿಂದ ಆಗುವ ದುಷ್ಟಮರ್ದನ, ಶಿಷ್ಟರಕ್ಷಣಗಳನ್ನು ವರ್ಣಿಸುತ್ತಾಳೆ ಕೊರವಿ. ಸಂತುಷ್ಟಳಾದ ದೇವಕಿ

ಕೊರವಿ ನಿನ್ನ ಮಾತು ಖರೆಯಾದರೆ ಎನ್ನ ಸೆರೆಮನೆ ಹಿಂಗಿದರೆ
ಹಿರಿದಿನ ಭಾಪುರಿ ಕೊಡುವೆನು ನಿನಗೆಯೆಂದು ಕರದಿ ವೀಳ್ಯವನಿತ್ತಳು

ಹೀಗೆ ಮನ್ನಿಸಿ ಕಳುಹಿಸಿಕೊಡುತ್ತಾಳೆ. ಹಾಡಿನಲ್ಲಿ ಒಳ್ಳೆಯ ಸ್ವಾರಸ್ಯವಿದೆ. ಲವಲವಿಕೆಯಿದೆ, ಸಂಭಾಷಣೆಯ ಸೊಗಸಿದೆ. ಗಿರಿಯಮ್ಮ ಕೃಷ್ಣಾವತಾರದ ಸೂಚನೆಯ ಹಾಡನ್ನು ಭಾವಪೂರ್ಣವಾಗಿ ಹಾಡಿದ್ದಾಳೆ.

**೬. *ಲವಕುಶರ ಕಾಳಗ* :** ಈವರೆಗೆ ಅಪೂರ್ಣವಾಗಿ ದೊರೆತಿದ್ದ ಈ ಕೃತಿ ಪ್ರಥಮಬಾರಿಗೆ ಪೂರ್ಣರೂಪದಲ್ಲಿ ದೊರೆತಿದೆ. 'ಪಟದ ಸಂಧಿ' ಎಂಬ ಹೆಸರು ಈ ಕೃತಿಗೆ ಇದ್ದಂತೆ ಕಾಣುತ್ತದೆ. ಪಟದ ಕಲ್ಪನೆಯೊಂದನ್ನು ಹೊಸದಾಗಿ ಸಂಯೋಜಿಸಿಕೊಂಡಿದ್ದಾಳೆ ಗಿರಿಯಮ್ಮ. ಗರ್ಭಿಣಿಯಾದ ಸೀತೆಗೆ ಹಿಂದಿನ ದಿನಗಳು ನೆನಪಾಗಿ

ಅಯೋಧ್ಯಪುರದ ವಾನರರೆಲ್ಲಾ ಬಿಟ್ಟು
ಕೈಹಿಡಿದ ಪುರುಷನ ಬಿಟ್ಟು
ಸಕಲ ಸೌಭಾಗ್ಯ ಸಂಪತ್ತು ಎಲ್ಲವ ಬಿಟ್ಟು
ನೆನೆದಾಳು ಋಷಿಗಳಾಶ್ರಮವಾ

ಆಶ್ರಮದಲ್ಲಿ ಸ್ವಲ್ಪಕಾಲ ಕಳೆಯಬೇಕೆಂದು ಬಯಸುತ್ತಾಳೆ. ಇತ್ತ ರಾಮಲಕ್ಷ್ಮಣರು ಬೇಟೆಗೆ ಹೊರಡುತ್ತಾರೆ.

ವಾಯುವೇಗ ಮನೋವೇಗವೆಂಬೋ ರಥ
ಏರಿದರು ರಾಮಲಕ್ಷ್ಮಣರು
ಜಾಣನೆಂಬೋ ಸೂರ‍್ಯತಾನೆ ರಥವನಡ
ಕೂಡಬೇಟೆಗೆ ತೆರಳಿದರು

ಬೇಟೆಯಾಡಿ ದಣಿದ ರಾಮ ಮರದ ತಂಪಿನಲ್ಲಿ ಮಲಗಿದ್ದಾಗ ತಾಟಕಿಯೊಬ್ಬಳು ಬಂದು ಸೀತೆಯ ಮುಡಿಪಿಡಿದೆಳೆಯುತ್ತಿರುವ ಕೆಟ್ಟ ಕನಸು ಕಾಣುತ್ತಾನೆ.

ಇತ್ತ ತಾಟಕಿ ಕೊರವಿಯ ವೇಷ ಧರಿಸಿ ಅಯೋಧ್ಯೆಗೆ ಬರುತ್ತಾಳೆ. ಸೀತೆಯಲ್ಲಿಗೆ ಬಂದು ನಾಗಸಂಪಿಗೆಯ ಪೂವನ್ನು ಮುಡಿ ಎಂದು ನೀಡಿದಾಗ ಸೀತೆಗೆ ಸಂದೇಹ ಬರುತ್ತದೆ.

ದಾವದೇಶ ನೀವು ಏನು ಕಾರಣ ಬಂದಿ
ಈ ನಾಡಗರತಿ ನೀನಲ್ಲ
ದಾವದು ಸ್ಥಳ ಕುಲ ದಾರು ಬಂಧುಗಳುಂಟು
ದಾರಬಳಿಗೆ ನೀ ಬಂದೀ

ಎಂದೆಲ್ಲಾ ವಿಚಾರಿಸುತ್ತಾಳೆ 'ಈರೇಳು ಲೋಕವ ಸುತ್ತಿ ತಿರುಗಿ ಬಂದೆ-----' ಎಂದು ಮುಂತಾಗಿ ಕೊರವಿ ಹೇಳುತ್ತಾಳೆ. ಹೊನ್ನು ಹಣ ಅನ್ನವಸ್ತ್ರ ಎಲ್ಲಾ ಕೊಡುವುದಾಗಿ ಸೀತೆ ಹೇಳಿದಾಗ

ಹೊನ್ನು ಹಣವನೊಲ್ಲೆ ಅನ್ನವಸ್ತ್ರವನೊಲ್ಲೆ
ನಿನ್ನ ಭಾಗ್ಯವು ನಾನೊಲ್ಲೆ
ಮುನ್ನಿನ ಅಸುರರೂಪ-----ನೀ ಬರೆ-----

ಎಂದು ಒತ್ತಾಯಿಸುತ್ತಾಳೆ. ಸೀತೆ ಒಪ್ಪದಿರಲು ಭಸ್ಮವನ್ನು ತೊಡೆದು ಅವಳನ್ನು ವಶಪಡಿಸಿಕೊಳ್ಳುತ್ತಾಳೆ ಆಗ ಸೀತೆ ವನಕ್ಕೆ ಬಂದಿದ್ದಾಗ ರಾವಣನ ಉಂಗುಷ್ಠವನ್ನು ಮಾತ್ರ ಕಂಡು ಬಲ್ಲೆ ಎಂದು ಹೇಳುತ್ತಾಳೆ.

ಉಂಗುಷ್ಠದಂದಕ್ಕೆ ಮುಂದೆ ಪಾದವ ಬರಿ
ಹಿಂದೆ ಹಿಂಬುಡ ಮೊಣಕಾಲು
ಚಂದಾದ ನಡುದೊಡಿ ಎದೆ ಭುಜ-------

ಎಂದೆಲ್ಲಾ ಹೇಳುತ್ತಾ ಚಂದಾದ ಕಾಗದ ಲೆಕ್ಕಣಿಕೆ ಕೊಟ್ಟು ಬರೆಸುತ್ತಾ ಬರೆಸುತ್ತಾ 'ತಂದು ನಿಲಿಸಿದಳು ರಾವಣನಾ' ಎಂದೆಂದು ಅಳಿಯದ ಹಾಗೆ ವರಕೊಡು ಎಂದು ಕೊರವಿ ಒತ್ತಾಯಿಸಿದಾಗ 'ಕಿರಿಯ ಲಕ್ಷ್ಮಣ ದೇವ ಹೊಡೆದಾರೆ ಮಡಿ' ಎಂದು ಸೀತೆ ಹೇಳುತ್ತಾಳೆ. ರಾವಣನ ಪಟವನ್ನು ಮೇಲಕ್ಕೆ ಹಾರಿಸಿ ಅಸುರೆ ಗಗನಕ್ಕೆ ಹಾರಿ ಮರೆಯಾಗುತ್ತಾಳೆ ಸೀತೆ ಚಿಂತಿತಳಾಗಿ ಮಂಚದಲಿ ಒರಗುತ್ತಾಳೆ. ಆ ಪಟ ಕೂಡ ಅಲ್ಲಿಗೇ ಬಂದು ಒರಗುತ್ತದೆ.

ಇತ್ತ ಶ್ರೀ ರಾಮ ಬೇಟೆ ಮುಗಿಸಿ ಹಿಂದೆ ಬರುತ್ತಾನೆ. ಅಪಶಕುನಗಳಾಗುತ್ತವೆ. ಅರಮನೆಗೆ ಬಂದ ರಾಮ ಸೀತೆಗೆ ಹೇಳಿ ಕಳುಹಿಸುತ್ತಾನೆ. 'ಇಂದು ರಾಮರ ಕೈಲಿ ಅಳಿವೇನೊ ಉಳಿತೀನೊ ಇಂದು ಗೆದ್ದರೆ ಮುಂದೆ ಜಯವು' ಎಂದು ಅಂಜಿ ಅಳುಕುತ್ತಾ ಜಾನಕಿ ಬರುತ್ತಾಳೆ. ಆಮೇಲೆ ಊಟವಾಗುತ್ತದೆ. ಸೀತೆಗೆ ಊಟ ಸೇರುವುದಿಲ್ಲ. ಊಟದನಂತರ ಬಂದು ಮಂಚದ ಮೇಲೆ ಕುಳಿತರೆ ಅದು ಎರಡು ತುಂಡಾಗುತ್ತದೆ. 'ತಂದಿಯ ಕಾಲದ ಹಿರಿ ದೊಡ್ಡ ಸಿಂಹಾಸನ' ತುಂಡಾಗಲು ಕಾರಣವೇನು ಎಂದು ಹಾಸುಗೆ ತೆಗೆಯಲು ಹತ್ತು ತಲೆಯವನ ಪಟ ಕಂಡು 'ಏಸು ದಿವಸ ಭೋಗಿಸಿದೆ?' ಎಂದು ರಾಮ ಸೀತೆಯನ್ನು ಕೇಳುತ್ತಾನೆ. 'ಹೆಂಗಸು ಹೆಡತಾಲಿರ್ಮಿತ್ತು ಎಂಬೋದು ಜನರು ಇಂದು ಕಂಡೆ ಸಾದೃಸ್ಯವ' ಎನ್ನುತ್ತಾನೆ ರಾಮ.

ಭೂಮಿದೇವಿ ಮಗಳೆಂದು ನಾ ತಂದೆನೆ
ನಾಡೊಳಗೆ ಪತಿವ್ರತಿ ಎಂದೂ
ಪ್ರಾಣದೊಲ್ಲಬಿನ್ನು ಸತಿ ಎಂದು ನಂಬಿದೆ
ರಾವಣಗೆ ಮರುಳಾಗೋದರಿಯೆ

ಎಂದು ನೊಂದು ನುಡಿಯುತ್ತಾನೆ.

ಭೂಮಿದೇವಿ ಮಗಳಾಗಿ ನಾ ಜನಿಸಿದೆ
ನಾಡದೇವರ ಮರೆಹೊಕ್ಕೆ
ರಾಮರ ಪಾದವೆ ಗತಿ ಎಂದು ನಂಬಿದೆ
ಮಾರಿ ಬಾಹೋದು ನಾ ಕಾಣಲಿಲ್ಲ

ಎಂದು ಸೀತೆ ಪರಿಪರಿಯಾಗಿ ತಿಳಿಸಿ ಹೇಳಲು ಯತ್ನಿಸುತ್ತಾಳೆ. ರಾಮ ಸೀತೆಯನ್ನು ತ್ಯಜಿಸುವ ನಿರ್ಧಾರಕ್ಕೆ ಬರುತ್ತಾನೆ. ಸೀತೆಯನ್ನು ಕಾಡಿಗೆ ಕರೆದುಕೊಂಡು ಹೋಗಿ ಕೊಂದು ಬರುವಂತೆ ಲಕ್ಷ್ಮಣನಿಗೆ ಹೇಳುತ್ತಾನೆ. 'ಸ್ತ್ರೀಹತ್ಯ ಶಿಶುಹತ್ಯ ಗೋಹತ್ಯ ಗುರುಹತ್ಯ ಬ್ರಹ್ಮಹತ್ಯ ಮಾಡಿದವರಿಗೆ' ಮಹಾಪಾತಕ ಬರುವುದು ಎಂದು ಲಕ್ಷ್ಮಣ ನುಡಿದಾಗ ರಾಮ 'ಆಳುಕೊಂದ ಪಾಪ ಅರಸಿ ಮಾಡಿದ ತಾಪ ಭೂಮಿಯನಾಳುವ ರಾಯರಿಗೆ' ಎಂದು ಸಮಾಧಾನ ಮಾಡುತ್ತಾನೆ.

ಅರಣ್ಯದಲ್ಲಿ ಸೀತೆ ತನ್ನನ್ನು ಕೊಲ್ಲುವಂತೆ ಲಕ್ಷ್ಮಣನಲ್ಲಿ ಬೇಡಿಕೊಂಡರೂ ಆತ ಅದಕ್ಕೆ ಒಪ್ಪುವುದಿಲ್ಲ. ಆಗ ಸೀತೆ 'ರಾಮರರಸಿ ಸೀತೆ ಓಡಿ ಹೋದಳೆಂಬೋ ನಾಡೊಳಗೆ ಅಪಕೀರ್ತಿ' ಬರಬಹುದು ಎನ್ನುತ್ತಾಳೆ. ಅದಕ್ಕೆ ಲಕ್ಷ್ಮಣ 'ಕೆಂಡಕ್ಕೆ ಇರುವೀ ಮುತ್ತುವದುಂಟೆ------ ಸಪ್ತ ಸಾಗರದಲ್ಲಿ ಹುಟ್ಟಿದ ಲಕ್ಷ್ಮಿಗೆ ಮತ್ತಪಕೀರ್ತಿಗಳುಂಟೆ' ಎನ್ನುತ್ತಾನೆ. ಲಕ್ಷ್ಮಣ ಅಡವಿ ಮೃಗವೊಂದನ್ನು ಕೊಂದು ಆ ರಕ್ತವನ್ನು ರಾಮನಿಗೆ ತೋರಿಸಿ ಸೀತೆಯನ್ನು ಕೊಂದು ಬಂದೆ ಎನ್ನಲು

ರಾಮ ಪಶ್ಚಾತ್ತಾಪದಿಂದ ಪರಿತಪಿಸುತ್ತಾನೆ. ಆಗ ಲಕ್ಷ್ಮಣ 'ಸಿಟ್ಟೀನಾ ವ್ಯಾಳ್ಯಕೆ ಮೂಗು ಕೊಯಿದುಕೊಂಡರೆ ಅಣ್ಣ ಶಾಂತ ವ್ಯಾಳ್ಯಾಕೆ ಹತ್ತಬಹುದೆ' ಎನ್ನುತ್ತಾನೆ.

ಇತ್ತ ಗಂಗೆಯ ನೀರಿಗೆ ಬಂದ ನಾರಿಯರು ಸೀತೆಯನ್ನು ಕಂಡು ವಾಲ್ಮೀಕಿಗೆ ವಿಷಯ ತಿಳಿಸುತ್ತಾರೆ. ಆತ ಆಕೆಯನ್ನು ತನ್ನ ಆಶ್ರಮಕ್ಕೆ ಕರೆತರುತ್ತಾನೆ. ಆರು ತಿಂಗಳು ತುಂಬಿದ ಮೇಲೆ ಸೀಮಂತ ಮಾಡುತ್ತಾರೆ. 'ರಾಮರನಗಲಿ ನಮಗೆ ಶ್ರೀಮಂತವೇತಕ್ಕೆ?' ಎಂದು ಜಾನಕಿ ಪ್ರಶ್ನಿಸುತ್ತಾಳೆ. ತವರು ಮನೆಯಲ್ಲಿ ಹುವ್ವಮುಡಿಸುವ ಕ್ರಮ ಎಂದು ಹೇಳಿ ಆಕೆಗೆ ಸಂಭ್ರಮದಿಂದ ಆಶ್ರಮದ ನಾರಿಯರೆಲ್ಲಾ ಸೇರಿ ಹೂಮಾಡಿಸಿ ಆರತಿ ಎತ್ತುತ್ತಾರೆ. ನವಮಾಸ ತುಂಬಿ ಸೀತೆ ಮಕ್ಕಳನ್ನು ಹೆರುತ್ತಾಳೆ. ಲವಕುಶರೆಂದು ನಾಮಕರಣವಾಗುತ್ತದೆ. ಸೀತೆ ಮಾತ್ರ 'ತಂದೆಯ ತೋಳು ತೊಡೆಯ ಮೇಲೆ ಆಡದೆ ಕಂದರಿನ್ಯಾರಿಗೆ ಮುದ್ದ' ಎಂದು ಕೊರಗುತ್ತಾಳೆ. ಮಕ್ಕಳು ದೊಡ್ಡವರಾಗುತ್ತಾರೆ ಹಲವು ಪ್ರಶ್ನೆಗಳನ್ನು ಕೇಳುತ್ತಾರೆ. ಸೀತೆ ರಾಮರ ಕತೆಯನ್ನೆಲ್ಲಾ ಹೇಳುತ್ತಾಳೆ. ವಾಲ್ಮೀಕಿ ಬಾಲಕರಿಗೆ ವಿದ್ಯೆ ಕಲಿಸುತ್ತಾರೆ.

ಇತ್ತ ಶ್ರೀರಾಮ ಅಶ್ವಮೇಧ ಯಾಗ ಮಾಡುತ್ತಾನೆ. ಎಲ್ಲೆಲ್ಲೂ ಸಂಭ್ರಮ, ಸಂತಸ. ಕುದುರೆ ವಾಲ್ಮೀಕಿಯ ಆಶ್ರಮಕ್ಕೆ ಬರಲು ಬಾಲಕರು ಅದನ್ನು ಕಟ್ಟುತ್ತಾರೆ. ಸೀತೆಗೆ ಬಂದು ಹೇಳುತ್ತಾರೆ. 'ಬಾಲರೆ ನಿಮಗಿಂತ ತೇಜಿವಶವಾಗುವದೆ ತಳುವದೆ ಮೆಟ್ಟಿ ಕೊಲ್ಲುವದೊ' ಎಂದು ಶಂಕೆಪಟ್ಟರೂ ಸೀತೆ 'ಕುಶದರ್ಭಿಯಿಂದಲಿ ಬಿಲ್ಲುಬಾಣವ ಮಾಡಿ ಶಿಶುಗಳಿಗೆ' ಕೊಡುತ್ತಾಳೆ. ಶತ್ರುಘ್ನ, ಭರತ ಒಬ್ಬೊಬ್ಬರಾಗಿ ಯುದ್ಧಕ್ಕೆ ಬರುತ್ತಾರೆ. ಸ್ವಾರಸ್ಯಕರವಾದ ಸಂಭಾಷಣೆಯು ನಡೆಯುತ್ತದೆ. ಭರತನ ಬಾಣ ತಾಗಿ ಲವ ಮೂರ್ಛೆ ಹೊಂದುತ್ತಾನೆ. ಅವನನ್ನು ಎತ್ತಿಕೊಂಡು ಹೋಗಿ ರಾಮನ ಮುಂದೆ ಇಳಿಸಿದಾಗ ಅವನಿಗೆ ಮೋಹ ಉಂಟಾಗುತ್ತದೆ. ಕುಶ ಬಂದು ವಿಷಯ ಹೇಳಿದಾಗ ಸೀತೆ ಮೈಮರೆತು ಬೀಳುತ್ತಾಳೆ. ಎಚ್ಚೆತ್ತು ಲವನಿಗಾಗಿ ಹಂಬಲಿಸುತ್ತಾಳೆ. ಕುಶ ಬಹಳ ಉಪಾಯದಿಂದ ಅವನನ್ನು ಹಿಂದಕ್ಕೆ ಕರೆತರುತ್ತಾನೆ. ಸೀತೆ ಸಂತಸದಿಂದ ಮಕ್ಕಳಿಗೆ ಹೋಳಿಗೆ ತುಪ್ಪದ ಊಟ

ಬಡಿಸುತ್ತಾಳೆ. ಮಕ್ಕಳ ಕಾಳಗ ನೋಡಲು ಶ್ರೀರಾಮನೇ ಬರುತ್ತಾನೆ. ಮಕ್ಕಳು ತಾಯಿಗೆ ಎರಗಿ ಬುದ್ಧಿ ಹೇಳಮ್ಮ ಎಂದು ಕೇಳಿಕೊಳ್ಳುತ್ತಾರೆ.

ಮುಂದೆ ಬುದ್ಧಿಯ ನಾನು ಏನು ಹೇಳಲಿ ಮಗನೆ
ಕೊಂಡವರ ತೇಜಿಯ ಕೊಟ್ಟು
ಮುಂದೆ ಶ್ರೀರಾಮರ ಪಾದವೆಗತಿ ಎಂದು
ಮುಂದಿನ್ನೂ ಸುಖದಲ್ಲೀರೆಂದ್ಲು

ಶ್ರೀರಾಮನಿಗೂ ಮಕ್ಕಳಿಗೂ ಮಾತುಕತೆಯಾಗುತ್ತದೆ. ಅವರ ತರ್ಕ, ಬುದ್ಧಿವಾದ, ದಿಟ್ಟ ಉತ್ತರಗಳಿಗೆ ರಾಮ ಮೆಚ್ಚುತ್ತಾನೆ. ಕುಲಗೋತ್ರಗಳನ್ನು ವಿಚಾರಿಸುತ್ತಾನೆ. 'ನಿಮ್ಮ ಕುಲಗೋತ್ರವೆ ನಮ್ಮದು' ಎನ್ನುತ್ತಾರೆ ಮಕ್ಕಳು. ಕಡೆಗೆ ಯುದ್ಧ ಪ್ರಾರಂಭವಾಗುತ್ತದೆ. ಬಾಲಕರ ಬಾಣತಾಕಿ ರಾಮಲಕ್ಷ್ಮಣರಿಬ್ಬರು ಮೂರ್ಛೆ ಹೋಗುತ್ತಾರೆ. ಹನುಮ, ಜಾಂಬವಂತನ ಹೆಗಲನೇರಿಸಿಕೊಂಡು ತಾಯಿಯಲ್ಲಿಗೆ ಅವರನ್ನು ತರುತ್ತಾರೆ. ಮೂರ್ಛೆ ಬಿದ್ದ ಅವರನ್ನು ಕಂಡು ಸೀತೆ ಬಹುವಾಗಿ ಶೋಕಿಸುತ್ತಾಳೆ.

ಆಗ ವಾಲ್ಮೀಕನು ಬ್ರಹ್ಮದೇವರ ಕುರಿತು
ರಾಮರಿಗೆ ಜಪವು ಮಾಡಿದನೂ
ತಂದು ಕಮಲದಳದುದುಕವ ತೊಳೆದಾರೂ
ಎದ್ದಾರು ರಾಮಲಕ್ಷ್ಮಣರು

ವಾಲ್ಮೀಕಿ ಮಹರ್ಷಿಗಳು ಎಲ್ಲಾವಿಷಯವನ್ನು ಸವಿಸ್ತಾರವಾಗಿ ರಾಮನಿಗೆ ತಿಳಿಸುತ್ತಾರೆ. ಕೊನೆಗೆ ಶ್ರೀರಾಮ ಸೀತೆ ಮತ್ತು ಮಕ್ಕಳೊಂದಿಗೆ ಅಯೋಧ್ಯೆಗೆ ಹಿಂತಿರುಗುತ್ತಾನೆ. ಅವರಿಗೆ ಭವ್ಯ ಸ್ವಾಗತ ದೊರೆಯುತ್ತದೆ. ಫಲಶ್ರುತಿಯೊಂದಿಗೆ ಕಾವ್ಯ ಮುಗಿಯುತ್ತದೆ.

ರಾಮಾಯಣದ ಉತ್ತರಕಾಂಡಕ್ಕೆ ಸೇರಿದ ಈ ಕಥಾವಸ್ತುವಿನಲ್ಲಿ ಗಿರಿಯಮ್ಮ ಹಲವಾರು ಹೊಸ ವಿಷಯಗಳನ್ನು ಸೇರಿಸಿದ್ದಾಳೆ. ಸಾಂಗತ್ಯದ ಹಾಡುಮಟ್ಟಿನಲ್ಲಿ ರಚಿತವಾಗಿದೆ. ಪಟದ ಕಲ್ಪನೆ, ಮಂತಣಿಯ ವಿಚಾರ, ಕಾವ್ಯದ ಉದ್ದಕ್ಕೂ ಬರುವ ಚುರುಕಿನ ಸಂಭಾಷಣೆ, ಆಚರಣೆಗಳ ವಿವರ, ಕೊನೆಯ ಸುಖಾಂತದ ತಿರುವು ಪ್ರತಿಯೊಂದು ಕಾವ್ಯಕ್ಕೆ ಶೋಭೆಯನ್ನು ನೀಡಿವೆ.

*೭. ಕೃಷ್ಣ ಕೊರವಂಜಿ* : ಈ ಹಾಡು ಪೂರ್ಣವಾಗಿ ದೊರೆತಿಲ್ಲ. ರುಕ್ಮಿ ತನ್ನ ತಂಗಿಯಾದ ರುಕ್ಮಿಣಿಯನ್ನು ಶಿಶುಪಾಲನಿಗೆ ಮದುವೆ ಮಾಡಿಕೊಡಲು ನಿರ್ಧರಿಸುತ್ತಾನೆ. ಕೃಷ್ಣರುಕ್ಮಿಣಿಯರು ಪರಸ್ಪರ ಪ್ರೇಮಿಸಿದ್ದಾರೆ. ರುಕ್ಮಿಣಿಗೆ ಮದುವೆ ಹತ್ತಿರವಾದಂತೆ ಆತಂಕ ಹೆಚ್ಚುತ್ತದೆ. ಆಗ ಕೃಷ್ಣನೇ ಕೊರವಂಜಿಯ ರೂಪದಲ್ಲಿ ಬಂದು ರುಕ್ಮಿಣಿಗೆ ಕಣಿ ಹೇಳುವ ನೆವದಲ್ಲಿ ಕೃಷ್ಣ ಬಂದು ಅವಳನ್ನು ವರಿಸುವುದಾಗಿ ಹೇಳಿ ಧೈರ್ಯ ತುಂಬುತ್ತಾನೆ. ಇದು ಕಥಾವಸ್ತು. ಭಾಗವತದಲ್ಲಿ ಇರುವಂಥದ್ದೇ. ಕೊರವಂಜಿಯ ಕಲ್ಪನೆ ಹೊಸತು ಅಷ್ಟೆ. ಬ್ರಹ್ಮ ಕೊರವಂಜಿಗಿಂತ ಮೊದಲು ರಚಿತವಾಗಿರಬೇಕೆಂಬ ಅಭಿಪ್ರಾಯ ವ್ಯಕ್ತವಾಗಿದೆ. 'ನಾರದ ಕೊರವಂಜಿ'ಯ ಕೆಲವು ಹಾಡುಗಳು ದೊರೆಯುತ್ತವೆ. ಆದರೆ ಕೃಷ್ಣನೇ ಕೊರವಂಜಿಯ ಪಾತ್ರವಹಿಸಿರುವುದು ಈ ಹಾಡಿನ ವೈಶಿಷ್ಟ್ಯ.

## ಕಾವ್ಯ ಶೈಲಿ

ಭಕ್ತಿ ಗಿರಿಯಮ್ಮನ ಎಲ್ಲಾ ಹಾಡುಗಳ ಮೂಲ ಸ್ರೋತ. ಹಾಡುಗಳಲ್ಲಿ ಅದು ನೇರವಾಗಿ ಅಭಿವ್ಯಕ್ತಗೊಂಡಿದ್ದರೆ ದೀರ್ಘಕೃತಿಗಳಲ್ಲಿ ಹರಿಯ, ಹರಿಭಕ್ತರ ಕಥಾಕೀರ್ತನವಿದೆ. ಕೃತಿಗಳ ಆದಿಅಂತ್ಯಗಳಲ್ಲಿ ದೈವ ಸ್ತುತಿ ಬಂದಿದೆ. ವಾತ್ಸಲ್ಯ ಮತ್ತು ಮಧುರ ಭಾವವು ಆಕೆಯ ಹಾಡುಗಳಲ್ಲಿ ಕಂಡು ಬರುತ್ತದೆ. ಲೌಕಿಕ ಜೀವನದಲ್ಲಿ ನಿರಾಸಕ್ತಳಾದ ಗಿರಿಯಮ್ಮ, ಕೃತಿಗಳಲ್ಲಿ ಮಾತ್ರ ಬದುಕಿನ ಚೆಲುವನ್ನು ಉತ್ಸಾಹದಿಂದ ವರ್ಣಿಸಿದ್ದಾಳೆ. ಒಡವೆ, ಅಡಿಗೆ ಊಟ, ಹಬ್ಬ, ಸಮಾರಂಭ ಇವುಗಳ ವರ್ಣನೆ, ವಿವರಗಳು ಬಹು ಸ್ವಾರಸ್ಯವಾಗಿ, ದೀರ್ಘವಾಗಿ ಬಂದಿರುವುದೇ ಇದಕ್ಕೆ ಸಾಕ್ಷಿ.

ಗಿರಿಯಮ್ಮ ಅತ್ಯಂತ ವಿನಯದಿಂದ ಪದೇ ಪದೇ 'ಹೆಚ್ಚಾಗಿ ಅರಿಯದ ಹೆಣ್ಣು ಬಾಲೆಯು ನಾ' 'ಅನ್ವಯ ಅರ್ಥ ಚಾತುರ್ಯ ಬಲ್ಲವಳಲ್ಲ' 'ಅರಿಯೆನು ಕವಿತಾಚಾತುರ್ಯದ ಮಹಿಮೆಯ ಗುರುಮುಖದಲಿ ಹೇಳಲಿಲ್ಲ' ಎಂದೆಲ್ಲಾ ಹೇಳಿಕೊಂಡಿದ್ದಾಳೆ. ಗುರುಮುಖದಿಂದ ಕ್ರಮ ಪ್ರಕಾರವಾದ ಶಿಕ್ಷಣ ಅವಳಿಗೆ ದೊರೆಯದೆ ಹೋಗಿದ್ದರೂ ಹಿರಿಯರಿಂದ ಕೇಳಿ ಆಕೆ ಸಾಕಷ್ಟು ತಿಳಿದವಳು, ಅನುಭವದಿಂದ ಜ್ಞಾನ ಪಡೆದವಳು ಆಗಿದ್ದಳೆಂಬುದರಲ್ಲಿ ಸಂಶಯವಿಲ್ಲ. ಕವಿತೆಗೆ ಬೇಕಾದ ಛಂದಸ್ಸು ಅಲಂಕಾರಗಳು ಆಕೆಗೆ ಗೊತ್ತಿದೆ. ಪ್ರಾಸಾನುಪ್ರಾಸಗಳು, ಉಪಮೆ, ರೂಪಕ, ಗಾದೆ ಮಾತುಗಳು ಸಹಜವಾಗಿ ಅವಳ ಕೃತಿಗಳಲ್ಲಿ ಬಂದಿವೆ.

ನೀಲಕಂಠನ ನಿಗಮಸಾರನ ಬಾಲಶಶಿಧರ ಭರ್ಗನ
ಶೀಲಸದ್ಗುಣ ಫಾಲನೇತ್ರನ ಕಾಲಾಂತಕ ಎನ್ನ ಕಾಯ್ವನ

ಎಂಬಂಥ ನುಡಿಗಳು ಅಪ್ರಯತ್ನವಾಗಿ ಅವಳ ಬಾಯಲ್ಲಿ ಬರುತ್ತವೆ. 'ಹದ್ದಿನ ಬಾಯೊಳಗಿನುರಗನಂತೆ' 'ಚಿಪ್ಪಿನೊಳು ಮುತ್ತು ಮೂಡುವ ತೆರನಂತೆ, 'ಪಂಕಜ ಪತ್ರದೊಳಿಪ್ಪ ನೀರಂತೆ' 'ಅರೆಗಾಯ ಹೊಂದಿದ ನಾಗರಮರಿಯಂದದಿ' ಮುಂತಾದ ಉಪಮೆ ದೃಷ್ಟಾಂತಗಳು ಮತ್ತೆ ಮತ್ತೆ ಬರುತ್ತವೆ.

ಗಿರಿಯಮ್ಮನ ಭಾಷೆ ಸರಳವಾದರೂ ಸಂದರ್ಭಕ್ಕೆ ತಕ್ಕಂತೆ ಸಂಸ್ಕೃತವನ್ನು ಬಳಸಿದ್ದಾಳೆ. ಆಡುನುಡಿಯ ದೇಸಿ ಆಕೆಯ ಹಾಡುಗಳ ಜೀವಾಳ ಎಂದರೆ ತಪ್ಪಾಗಲಾರದು. ಸಾಕಷ್ಟು ಶಬ್ದ ಭಂಡಾರ ಅವಳಲ್ಲಿದೆ. ಕೆಲವು ವಿಶೇಷ ಭಾಷಾ ಪ್ರಯೋಗಗಳು ಕಂಡು ಬರುತ್ತವೆ. ಅನಂದ್ಯತಿ–ಅರುಂಧತಿ, ಹೆತ್ತೋರ–ಹೆತ್ತವರ, ಬ್ರಾಹ್ಮರು–ಬ್ರಾಹ್ಮಣರು, ಕರ್ನಿಕೆ–ಕನ್ನಿಕೆ ನೀರಾಗೆ–ನೀರೊಳಗೆ, ಕಾರ್ದನು–ಕಾರಿದನು, ಸ್ವಾರಿ–ಸವಾರಿ ಇತ್ಯಾದಿ. ಹಲವು ಪದಗಳಿಗೆ ಅನೇಕ ಪರ್ಯಾಯ ಪದಗಳನ್ನು ಬಳಸುತ್ತಾಳೆ. ಉದಾಹರಣೆಗೆ ಭೂಮಿ, ಕಾಡು ಎಂಬ ಶಬ್ದಗಳಿಗೆ ಆಕೆ ಬಳಸಿರುವ ಪರ್ಯಾಯ ಪದಗಳನು ಗಮನಿಸಬಹುದು. ತಾವರೆಕಮಲ, ಕಿತ್ತಳೆನಾರಂಗ, ಅಡವಿಅರಣ್ಯ ಮುಂತಾದ ದ್ವಿರುಕ್ತಿಗಳು ಕಂಡು ಬರುತ್ತವೆ.

ಗಿರಿಯಮ್ಮ ಛಂದಸ್ಸಿನ ನಿಯಮಗಳನ್ನು ಸರಿಯಾಗಿ ಪಾಲಿಸಿದ್ದಾಳೆಂದು ಹೇಳಲಾಗುವುದಿಲ್ಲ. ದಾಸ ಸಾಹಿತ್ಯವೇ ಮುಖ್ಯವಾಗಿ ಹಾಡುವ ಧಾಟಿಯನ್ನು ಅನುಸರಿಸಿರುವುದರಿಂದ ಇಂಥ ದೋಷಗಳು ಸಹಜ. ಗಣವಿಂಗಡನೆ, ಪ್ರಾಸ ಸಾಲುಗಳ ಸಂಖ್ಯೆ ಮುಂತಾದುವುಗಳಲ್ಲಿ ಅನೇಕ ಕಡೆ ತಪ್ಪಿರುವುದು ಕಂಡು ಬರುತ್ತದೆ. ಪಂಡಿತರನ್ನು ಮೆಚ್ಚಿಸುವ ದೃಷ್ಟಿ ಗಿರಿಯಮ್ಮನಿಗಿರಲಿಲ್ಲ. ಸಾಮಾನ್ಯರಿಗಾಗಿ, ತನ್ನ ಆತ್ಮ ಸಂತೋಷಕ್ಕಾಗಿ ಹಾಡಿದ ಸುಂದರ ಭಕ್ತಿ ಪ್ರಧಾನ ಹಾಡುಗಳು ಅವು.

ಅವಳ ಕೃತಿಗಳಲ್ಲಿ ಬರುವ ಪಾತ್ರಗಳು ವೈವಿಧ್ಯದಿಂದ ಕೂಡಿವೆ. ಒಂದರಂತೆ ಒಂದಿಲ್ಲ. ಮುಖ್ಯವಾಗಿ ಸ್ತ್ರೀ ಪಾತ್ರಗಳನ್ನು ಗಿರಿಯಮ್ಮ ಬಹು ಸಹಜವಾಗಿ ರೂಪಿಸಿದ್ದಾಳೆ. ಹೆಣ್ಣಿನ ಮನಸ್ಸಿನ ಆಸೆ, ಆಕಾಂಕ್ಷೆ, ನಿರೀಕ್ಷೆ, ಅವಳ ಬದುಕಿನ ನೋವು ನಲಿವು ಸಮಾಜ ಆಕೆಯನ್ನು ಕಾಣುವ ರೀತಿ ಇವೆಲ್ಲವನ್ನು ಹೆಣ್ಣಿನ ಕೋಮಲ ಅಂತಃಕರಣದಿಂದ ಗಿರಿಯಮ್ಮ ತನ್ಮಯಳಾಗಿ ಚಿತ್ರಿಸಿದ್ದಾಳೆ. 'ಸೀತಾಕಲ್ಯಾಣ'ದ ಸೀತೆ ಲಜ್ಜೆಯಿಂದ ಕೂಡಿ ಹಿರಿಯರು ಹೇಳುವ ಶಾಸ್ತ್ರಗಳನ್ನು ಮಾಡುವ ನವವಧುವಾಗಿ ಚಿತ್ರಿತಳಾಗಿದ್ದರೆ 'ಲವಕುಶರ ಕಾಳಗ'ದ ಸೀತೆ ಬದುಕಿನ ಕಷ್ಟಗಳನ್ನು ಅನುಭವಿಸಿ, ಎರಡು ಮಕ್ಕಳ ತಾಯಿಯಾಗಿ ಪ್ರೌಢ ಮಹಿಳೆಯಾಗಿ ಚಿತ್ರಿತಳಾಗಿದ್ದಾಳೆ. ಕಂದರಿಲ್ಲದ ಬಂಜೆಯು ಪಾಡು, ಅವಿವಾಹಿತಳಾಗಿ ತಾಯಿಯಾಗುವ ಚಂದ್ರಾವತಿಯ ಸ್ಥಿತಿ, ಗಂಡನ ಅಹಂಕಾರದಿಂದ ಪಾಡು ಪಡುವ ರತಿ, ಸೆರೆವಾಸ ಅನುಭವಿಸುತ್ತಾ ಭರವಸೆಗಾಗಿ ಕಾದಿರುವ ದೇವಕಿ, ಕೃಷ್ಣನ ಬರುವಿಗಾಗಿ ಹಂಬಲಿಸುತ್ತಾ ಭವಿಷ್ಯದ ನಿರೀಕ್ಷೆಯಲ್ಲಿರುವ ರುಕ್ಮಿಣಿ ಈ ಒಂದೊಂದು ಪಾತ್ರವು ಜೀವಂತವಾಗಿವೆ.

ಹೆಣ್ಣಿನ ಬದುಕಿನ ಮುಖ್ಯ ಹಂತಗಳಾಗಿ ಬರುವ ಮದುವೆ, ಬಸಿರು, ಸೀಮಂತ, ತಾಯ್ತನ, ಪತಿ ಪ್ರೇಮ, ಪುತ್ರ ವಾತ್ಸಲ್ಯ ಮುಂತಾದುವುಗಳನ್ನು ಆ ಸಂದರ್ಭಗಳಲ್ಲಿ ನಡೆಸುವ ಅನೇಕ ಸಂಪ್ರದಾಯ, ಆಚರಣೆ, ವಿಧಿ ವಿಧಾನಗಳನ್ನು ಗಿರಿಯಮ್ಮ ಬಹು ವಿಸ್ತಾರವಾಗಿ ಪರಿಚಯಿಸಿದ್ದಾಳೆ.

ಗಿರಿಯಮ್ಮ ಕಾವ್ಯದ ವಸ್ತುವಿನ ಆಯ್ಕೆಯಲ್ಲಿ ಹೊಸತನವನ್ನು ತೋರಿದ್ದಾಳೆ. ಚಂದ್ರಹಾಸನ ಕಥೆಯೊಂದೆ ಪ್ರಸಿದ್ಧವಾದ ಕಾವ್ಯದಿಂದ ಆರಿಸಿಕೊಂಡ ಕಥಾವಸ್ತು. ಜಾನಪದ ಮೂಲದಿಂದ ಕೆಲವು ಎಳೆಗಳು ಆಕೆಗೆ ಸಿಕ್ಕಿರಬೇಕು. ಕೊರವಿಯ ಪಾತ್ರ ಆಕೆಯನ್ನು ಬಹುವಾಗಿ ಆಕರ್ಷಿಸಿದೆ. ಬ್ರಹ್ಮ ಕೊರವಂಜಿ, ಕೃಷ್ಣ ಕೊರವಂಜಿಗಳಲ್ಲದೆ ನಾರದ ಕೊರವಂಜಿಯನ್ನು ಆಕೆ ರಚಿಸಿರುವಂತೆ ತಿಳಿಯುತ್ತದೆ. ಶಂಕರಗಂಡನ ಹಾಡು ಕೂಡ ಜಾನಪದ ಸತ್ವದಿಂದ ಕೂಡಿದೆ. 'ಲವಕುಶರ ಕಾಳಗ' ವಂತೂ ಅನೇಕ ಹೊಸ ವಿಷಯಗಳಿಂದ ಕೂಡಿದ ರಾಮಾಯಣವಾಗಿದೆ. ಇಲ್ಲಿ ಸೀತೆ ಕಾಡಿಗೆ ಹೋಗುವುದು ರಾವಣನ ಚಿತ್ರ ಬರೆದದ್ದರಿಂದ. ರಾಮ ಲಕ್ಷ್ಮಣನಿಗೆ ಸೀತೆಯ ತಲೆಯನ್ನು ಕಡಿದು ಬರುವಂತೆ ಹೇಳುತ್ತಾನೆ. ಸೀತೆಗೆ ಲವ ಮಾತ್ರ ಜನಿಸುತ್ತಾನೆ. ದರ್ಬೆಯಿಂದ ಮತ್ತೊಂದು ಮಗುವನ್ನು ಸೃಷ್ಟಿಸಿ ಅದಕ್ಕೆ ಕುಶನೆಂದು ವಾಲ್ಮೀಕಿ ಹೆಸರಿಡುತ್ತಾನೆ. ಮಂಥರೆಯನ್ನು ಮಂತುಣಿ ಎಂದು ನಿರ್ದೇಶಿಸಲಾಗಿದೆ. ಈಕೆ ರಾಮನ ಆಜ್ಞೆಯಂತೆ ಲವನನ್ನು ಮೂರ್ಛೆಬಿದ್ದಾಗ ರಕ್ಷಿಸುತ್ತಾಳೆ. ಕೊನೆಗೆ ಲವಕುಶರು ಈಕೆಯನ್ನು ಕೊಂದು ಹಾಕುತ್ತಾರೆ. ಕಾವ್ಯದ ಕೊನೆಯಲ್ಲಿ ಸೀತೆ ಗಂಡ ಮತ್ತು ಮಕ್ಕಳೊಂದಿಗೆ ಅಯೋಧ್ಯೆಗೆ ಹಿಂತಿರುಗುತ್ತಾಳೆ. ಹೀಗೆ ಗಿರಿಯಮ್ಮ ನವೀನ ದೃಷ್ಟಿಯಿಂದ ರಾಮಾಯಣವನ್ನು ಚಿತ್ರಿಸಿದ್ದಾಳೆ. ಮೂಲ ಎಲ್ಲಿಯದು ಎಂದು ತಿಳಿಯುವುದಿಲ್ಲ.

'ನಾಶವಹುದು ರುಣರೋಗ ದಾರಿದ್ರ್ಯವು ಕ್ಲೇಶಕಂಟಕ ಪರಿಹರವು ಎಂದೆಂದಿಗೆ ಹರಿಭಕ್ತಿ ದೊರೆಕುವುದು ಮುಂದಕ್ಕೆ ಮುಕ್ತಿ ಸಾಧನವು' ಎಂದು ಚಂದ್ರಹಾಸನ ಕಥೆಯ ಕೊನೆಯಲ್ಲಿ ಗಿರಿಯಮ್ಮ ಹೇಳಿರುವ ಮಾತುಗಳು, ತನ್ನ ಸುತ್ತಲಿನ ಜನಸಾಮಾನ್ಯರು ಈ ಕತೆಗಳನ್ನು ಕೇಳಿ ಸನ್ಮಾರ್ಗದಲ್ಲಿ ಬದುಕಿ, ಹರಿಭಕ್ತಿಯನ್ನು ಗಳಿಸಿಕೊಳ್ಳಲಿ ಎಂಬ ಆಕೆಯ ಸದುದ್ದೇಶವನ್ನು ಸ್ಪಷ್ಟಪಡಿಸುತ್ತದೆ ಆಕೆಯ ಈ ಉದ್ದೇಶ ಸಾರ್ಥಕವಾಗಿದೆ ಎಂಬುದು ಆಕೆಯ ಕೃತಿಗಳನ್ನು ಓದಿದಾಗ ಅರಿವಾಗುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮುಖ್ಯವಾಗಿ ಗುರುತಿಸಲ್ಪಟ್ಟ ಕವಯಿತ್ರಿಯರು ಮೂವರು. ಅಕ್ಕ ಮಾಹಾದೇವಿ, ಹೊನ್ನಮ್ಮ ಮತ್ತು ಹೆಳವನಕಟ್ಟೆ ಗಿರಿಯಮ್ಮ.

ಈ ಮೂವರು ದ್ವೈತಾದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಪಂಥದಲ್ಲಿ ಬಂದವರು. ಅಕ್ಕ ಮಹಾದೇವಿ ಒಲ್ಲದ ಗಂಡನನ್ನು ಬಿಟ್ಟು, ಹರನೇ ಗಂಡನೆಂದು ಆರಾಧಿಸಿ, ಸಮಾಜವನ್ನು ದಿಟ್ಟತನದಿಂದ ಎದುರಿಸಿ ಆಧ್ಯಾತ್ಮದಲ್ಲೂ ಸಾಹಿತ್ಯದಲ್ಲೂ ಎತ್ತರದ ಸ್ಥಾನವನ್ನು ಪಡೆದವಳು. ಹೊನ್ನಮ್ಮ ವಿವಾಹಿತಳೋ ಅಲ್ಲವೋ ಸ್ಪಷ್ಟವಾಗಿ ತಿಳಿಯದಿದ್ದರೂ ಗೃಹಿಣಿಯಾದವಳು ಪತಿಯೇ ಪರದೈವವೆಂದು ನಂಬಿ ಬದುಕಬೇಕೆಂದು ಹದಿಬದೆಯ ಧರ್ಮವನ್ನು ಬರೆದವಳು. ಗಿರಿಯಮ್ಮ ವಿವಾಹಿತಳಾದರೂ ಪತಿಗೆ ಬೇರೆ ಮದುವೆ ಮಾಡಿಸಿ ತನ್ನ ಬದುಕಿನ ಮಾರ್ಗವನ್ನು ಕಂಡು ಕೊಂಡು, ಜನಕ್ಕೆ ಹಿತವಾಗುವಂತೆ ಬಾಳಿ ಬದುಕಿ ಭಕ್ತಿಪೂರ್ಣ ಕೃತಿಗಳನ್ನು ರಚಿಸಿದವಳು. ಅಕ್ಕಮಹಾದೇವಿಗೆ ದೊಡ್ಡ ಚಳವಳದ ಬೆಂಬಲವಿದ್ದರೆ, ಹೊನ್ನಮ್ಮನಿಗೆ ರಾಜಾಶ್ರಯವಿತ್ತು. ಇದ್ಯಾವುದೂ ಇಲ್ಲದ ಗಿರಿಯಮ್ಮ ತನ್ನ ಸ್ವಂತ ಪರಿಶ್ರಮ, ಪ್ರತಿಭೆಗಳಿಂದ ಜನಮಾನ್ಯತೆ ಗಳಿಸಿದವಳು. ಈ ದೃಷ್ಟಿಯಿಂದ ಗಿರಿಯಮ್ಮನಿಗೆ ವಿಶಿಷ್ಟವಾದ ಸ್ಥಾನವಿದೆ.

## ಕೃತಜ್ಞತೆಗಳು

ಈವರೆಗೆ ಅಪ್ರಕಟಿತವಾಗಿದ್ದ 'ಲವಕುಶರ ಹಾಡು' ಕಾಗದದ ಹಸ್ತಪ್ರತಿಯ ಜೆರಾಕ್ಸ ಪ್ರತಿಯನ್ನು ಒದಗಿಸಿ ಕೊಟ್ಟ ಶ್ರೀ ಬಿ.ವಿ. ವೀರಭದ್ರಪ್ಪ ಅವರಿಗೆ, ತಮ್ಮಲ್ಲಿದ್ದ 'ಲವಕುಶರ ಕಾಳಗ'ದ ಪೂರ್ಣ ಪಾಠವನ್ನುಳ್ಳ ಕೈಬರಹದ ಪ್ರತಿಯನ್ನು 'ಗಿರಿಯಮ್ಮನವರ ಚರಿತ್ರೆ' ಕೈಬರಹದ ಕಾಗದದ ಪ್ರತಿಯನ್ನು ಕೊಟ್ಟ ಶ್ರೀಮತಿ ಸಿ.ಶಂಕರಮ್ಮ ಅವರಿಗೆ, ಪ್ರತಿಯನ್ನು ಒದಗಿಸಿಕೊಡುವಲ್ಲಿ ಬಹುವಾಗಿ ಸಹಕರಿಸಿದ ನನ್ನ ಅಣ್ಣ ಪಿ.ಎಸ್. ರಘುನಾಥರಾವ್ ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ಹಲವು ಮಾಹಿತಿಗಳನ್ನು ನೀಡಿ, ತಮ್ಮಲ್ಲಿದ್ದ ಡಿ. ರಂಗರಾವ್ ಅವರಿಂದ ಪ್ರಕಟಿತ ಗಿರಿಯಮ್ಮನ ಹಾಡುಗಳ ಹಳೆಯ ಪ್ರತಿಯನ್ನು ಒದಗಿಸಿಕೊಟ್ಟು ಸಹಕರಿಸಿದ ಗಿರಿಯಮ್ಮನ ವಂಶಸ್ಥರೇ ಆದ ಪ್ರೊ.ಡಿ.ರಘುನಾಥರಾವ್ ಅವರಿಗೆ ನನ್ನ ಕೃತಜ್ಞತೆಗಳು. ಹಲವು ಕೀರ್ತನೆಗಳನ್ನು 'ಲವಕುಶರ ಕಾಳಗ'ವನ್ನು ಸುಂದರವಾಗಿ

ನಕಲು ಮಾಡಿಕೊಟ್ಟು ಸಹಕರಿಸಿದ ಪ್ರೊ.ಎಂ.ಶಂಕರನಾರಾಯಣಭಟ್ ಅವರಿಗೆ, ದೀರ್ಘ ಕೃತಿಗಳನ್ನು ನಕಲು ಮಾಡಿಕೊಟ್ಟ ಶ್ರೀಮತಿ ಸರಸ್ವತಿ ಅವರಿಗೆ, ತಾಳೆ ನೋಡುವಲ್ಲಿ, ಅಂಕಿತನಾಮ ಇತ್ಯಾದಿ ಪಟ್ಟಿ ತಯಾರಿಸುವಲ್ಲಿ ನೆರವು ನೀಡಿದ ಶ್ರೀಮತಿ ಶಾರದಾಭಟ್ ಅವರಿಗೆ, ಸಂಪಾದನೆಯ ಕೆಲಸದುದ್ದಕ್ಕೂ ಸಹಕರಿಸುತ್ತಾ ಬಂದಿರುವ ಡಾ.ಟಿ.ಎನ್.ನಾಗರತ್ನ ಅವರಿಗೆ ನನ್ನ ಅನಂತಾನಂತ ಧನ್ಯವಾದಗಳು. ಸಮಗ್ರ ದಾಸಸಾಹಿತ್ಯ ಪ್ರಕಟಣಾ ಯೋಜನೆಯಲ್ಲಿ ಈ ಸಂಪುಟವನ್ನು ಪ್ರಕಟಿಸುತ್ತಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕ ಶ್ರೀ.ವೈ.ಕೆ.ಮುದ್ದುಕೃಷ್ಣ ಅವರಿಗೆ ವಿಶೇಷ ಕೃತಜ್ಞತೆಗಳು ಸಲ್ಲುತ್ತವೆ.

–ಲೀಲಾವತಿ ಎಸ್. ರಾವ್.

# ಕೀರ್ತನೆಗಳ ಕ್ರಮಸೂಚಿ

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಪೂರ್ವಕಥೆಗಳು ಮತ್ತು ಲಘು ಟಿಪ್ಪಣಿಗಳು

೩. ಅಂಕಿತನಾಮ

೪. ವಿಶೇಷ ಪದಸೂಚಿ

೫. ಅಪೂರ್ಣ ಕೃತಿ

೬. ಕೀರ್ತನೆಗಳ ಅಕಾರಾದಿ

# ಅನುಬಂಧ–೧

## ಕಠಿಣ ಶಬ್ದಗಳ ಅರ್ಥ

ಅಂಚೆ – ಹಂಸ
ಅಂಜನೆ – ಅಂಜನೇಯನ ತಾಯಿ
ಅಂಡ – ಶಿವ
ಅಂತಕ – ಯಮ
ಅಂತ್ಯಜಳು – ಹೊಲತಿ, ಶೂದ್ರಳು
ಅಂದಣ – ಪಲ್ಲಕ್ಕಿ
ಅಂದುಗೆ – ಕಾಲಿನ ಆಭರಣ
ಅಂಬರ – ಆಕಾಶ
ಅಂಬು – ನೀರು, ಬಾಣ
ಅಂಬುಧಿ – ಸಮುದ್ರ
ಅಕ್ಕರೆ–ಅರ್ತಿ – ಪ್ರೀತಿ
ಅಕ್ಷಿ – ಕಣ್ಣು
ಅರ್ಕ – ಸೂರ್ಯ
ಅಗರು – ಒಂದುಜಾತಿಯ ಸುಗಂಧದ ಮರ
ಅಜ – ಬ್ರಹ್ಮ
ಅಜಗರ – ಸರ್ಪ
ಅಜಭೂಪ – ರಘುವಂಶದ ದೊರೆ
ಅಡಕು – ಒಳಸೇರಿಸು
ಅಡಚು – ಒತ್ತಾಗಿ ಸೇರು
ಅಣ್ಣೆವಾಲು – ಪರಿಶುದ್ಧ ಹಾಲು
ಅಧರ – ತುಟಿ
ಅನುಜೆ – ತಂಗಿ
ಅಪಸಾತಕೆ – ತಮ್ಮತಮ್ಮೊಳಗೆ
ಅಬ್ಜ – ಕಮಲ
ಅಭ್ರ – ಮೋಡ, ಆಕಾಶ
ಅರವಟ್ಟಿಗೆ – ದಾರಿಹೋಕರಿಗೆ ನೀರು ಪಾನಕ ಇತ್ಯಾದಿ ಕೊಡುವ ಸ್ಥಳ.
ಅರಿ – ಶತ್ರು
ಅರಿದು – ಕತ್ತರಿಸಿ
ಅರೆ – ಬಂಡೆ
ಅರೆದಿಂಗಳ್ – ಅರ್ಧಚಂದ್ರ
ಅರುಹು – ತಿಳಿಸು
ಅಲಗು – ಆಯುಧದ ಮೊನೆ
ಅಲ್ಲದ – ಅಯೋಗ್ಯ
ಅವನಿ – ಭೂಮಿ
ಅಸಲಿ – ಕೊರಳಅಭರಣ
ಅಸು – ಪ್ರಾಣ
ಅಳವು – ಸಾಮರ್ಥ್ಯ
ಅಳಿ – ದುಂಬಿ
ಅಳುಪು – ಅತಿಯಾಸೆ ಪಡು
ಅಳ್ಳೆ – ಏಡಿ
ಆಗಮ – ವೇದ
ಆಜ್ಯ – ತುಪ್ಪ
ಆಣಿಮುತ್ತು – ಶ್ರೇಷ್ಠವಾದ ಮುತ್ತು

೧

ಇಂಥಾವಗ್ಯಾಂಗೆ ಮನಸೋತೆ ಬಲು
ಪಂಥವಾಡಿದ ಜಗನ್ಮಾತೆ ಪ.

ಆವಾಗ ನಾರುವ ಮೈಯ್ಯ ಬಿಚ್ಚಿ
ತೋರಿ ನಲಿಯುವ ಕಾಲು ಕೈಯ್ಯ
ಕೋರೆಯ ಮಸೆಯುತ ಕೊಸರಿಕೊಂಡಸುರನ
ಕರುಳನು ಬಗೆದಂಥ ಅದ್ಭುತ ಮಹಿಮಗೆ ೧

ಬಡಬ್ರಾಹ್ಮಣನಾಗಿ ತಿರಿದ ತನ್ನ
ಹಡೆದ ತಾಯಿಯ ಶಿರವರಿದ
ಮಡದಿಗಾಗಿ ದೊಡ್ಡಡವಿಯೊಳ್ಮನೆ ಕಟ್ಟಿ
ಬಿಡದೆ ಸ್ತ್ರೀಯರ ಗೋಕುಲದಲ್ಲಿ ಮೆರೆದ ೨

ಬತ್ತಲೆ ನಿಂತಿದ್ದನೀಗ ತೇಜಿ
ಹತ್ತಿ ಮೆರೆವದೊಂದು ಯೋಗ
ಉತ್ತಮ ಹೆಳವನಕಟ್ಟೆ ಶ್ರೀರಂಗ
ಭಕ್ತವತ್ಸಲ ಸ್ವಾಮಿ ದೇವಕ್ಯಪಾಂಗ ೩

೨

ಇಂದು ನೀ ಕರೆದು ತಾರೆ ಬೇಗನೆ ಪೋಗಿ
ಚನ್ನವೆಂಕಟರಾಯನ
ಮೊನ್ನೆ ಆಡಿದ ಮಾತು ಒಂದೂ ನಿಜವಲ್ಲಾ
ರನ್ನೆ ಈಗಲೆಪೋಗಿ, ಸನ್ನೆ ಮಾಡಿಬಾರೆ ಪ.

ಅಂಗಜನಯ್ಯನ ಕಾಣದೆ ನಾನು ಹಿಂಗಿರಲಾರೆ ನಮ್ಮಾ
ಕಂಬುಕುಚದ ಬಾಲೆ
ರಂಗನಾ ಕರತಾರೆ
ರಂಗು ಮಾಣಿಕದಹರಳುಂಗುರ ಕೊಡುವೆನು ೧

ಕಾಲಿಗೆ ಎರಗುವೆನೆ
ಕೋಮಲಮುಖಿ ಆಲಸ್ಯ ಮಾಡದಲೆ
ನೀಲಕುಂತಳನೀರೆ । ಲೋಲನ ಕರತಾರೆ
ವಾಲೆಮೂಗುತಿ ಕಂಠಮಾಲೆಯ ಕೊಡುವೆನು ೨

ಮರದಿರಲಾರೆನಮ್ಮಾ
ಬೇಗನೆಪೋಗಿ ನೆರವಂತೆ ಮಾಡು ನೀನು
ಯರವುತನವುಬ್ಯಾಡಾ
ಮರೆಯಲಾರೆನೆ ನಿಮ್ಮಕರವಪಿಡಿವೆ ಹೆಳವನ ಕಟ್ಟೆರಂಗೈಯ್ಯನ ೩

## ೩

ಏನ ಹೇಳಲಿ ಈತನಿರವ ಭಕ್ತರ ಮನಾ–
ಧೀನ ಹೆಳವನಕಟ್ಟೆ ರಂಗ ದೇವೋತ್ತುಂಗನ ಪ.

ಹೊಳೆವ ಮೈಯ್ಯುವ ಕಲ್ಲಹೊರುವ ಕಡಲೊಳಾಡುವ
ತಿಳಿಯ ಎರಡಂಗನೆ ತಿರಿವ ಪರುಶುವಿಡಿವ ಕೋಡಗ
ಕುಲವನಾಳುವ ಗೋವಕಾಯ್ವ ಕಾಂತೆಯರ ವ್ರತವ–
ನಳಿವ ಅಶ್ವವನೇರಿ ಮೆರೆವನ್ಯಾರೆ ಅಮ್ಮಯ್ಯ
ಜಲವಪೊಕ್ಕು ದೈತ್ಯನ ಸಂಹರಿಸಿ
ಕಲಕಿ ಸಮುದ್ರವ ಕಾರಣಕಾಗಿ
ನೆಲಗಳ್ಳನ ಮರ್ದಿಸಿ ಹಿರಣ್ಯಾಕ್ಷನ
ಚಲುವ ಚೆಳ್ಳುಗುರಿಂದೊಡಲನೆ ಬಗಿದು
ಸುಲಭನಾಗಿ ಶುಕ್ರನ ಕಣ್ಣಿರಿದು

ಬಲುಸಾಹಸದಿ ಕ್ಷತ್ರಿಯರನು ಗೆಲಿದು
ಶಿಲೆಯನೊದ್ದು ನಿಜಸತಿಯಳ ಮಾಡಿ
ಗೆಲವ ತೋರಿ ಗೋಪಿಗೆ ಸುತನಾಗಿ
ನಿಲುವ ದಿಗಂಬರಧರ ರಾವುತನಾಗಿ
ಇಳೆಯೊಳು ಚರಿಸುವ ಈತ ಕಾಣೆ ಅಮ್ಮಯ್ಯ ೧

ನಿಲ್ಲದಾಡುವ ನಗವ ಪೊರುವ ಮಣ್ಣಬಗೆವ
ಕಲ್ಲ ಕಂಬವನೊಡೆವ ಇಳೆಯನಳೆವ ಭಾರ್ಗವ
ವಲ್ಲಭನವರಗೆಲುವ ಲಜ್ಜೆನಾಚಿಕೆ–
ಯಿಲ್ಲದೆ ಅಶ್ವವನೇರಿ ಮೆರೆವನ್ಯಾರೆ ಅಮ್ಮಯ್ಯ
ಎಲ್ಲ ವೇದವನುದ್ಧರಿಸ್ಯಂಬುದಿಯ
ಜಲ್ಲಿಸಿ ಧಾರುಣಿಯನು ತಂದಿರುಹಿ
ತಲ್ಲಣಿಸುವ ಪ್ರಹಲ್ಲಾದನ ಪೊರೆದು
ಬಲ್ಲಿದ ಬಲಿಯ ಬಂಧಿಸಿ ಪಿತನಾಜ್ಞೆಯ
ಸಲ್ಲಿಸಿ ಮಾತೆಯ ಶಿರವ ಚೆಂಡಾಡಿ
ಬಿಲ್ಲನ್ನೆತ್ತಿ ಭೂಮಿಜೆಯೊಡಗೂಡಿ
ಮಲ್ಲರ ಮಡುಹಿ ಮುಪ್ಪುರದ ಬಾಲೆಯರ
ಜಳ್ಳು ಮಾಡಿ ಧರ್ಮವ ಹೋಗ್ಯಾಡಿ
ಹಲ್ಲಣಿಸುವ ತೇಜಿಯನೇರಿದ ಶಿರಿ
ವಲ್ಲಭ ಈತ ವಾಸುದೇವ ಕಾಣೆ ಅಮ್ಮಯ್ಯ ೨

ಎವೆ ಇಕ್ಕ ಬೆನ್ನಲ್ಹೊತ್ತು ಗಿರಿಯಕೊ–
ನೆವಲ್ಲ ಮಸೆವ ಸಮಯದಿ ಬಹವಿಪ್ರ ಮುನಿ
ಭವ ಶ್ರೀರಾಘವ ನವನೀತಚೋರ ನಾರಿಯರ ಮೋಹಿಸಿ
ತವಕದಿ ತುರಗವನೇರಿ ಮೆರೆವನ್ಯಾರೆ ಪೇಳಮ್ಮಯ್ಯ
ತಮನ ಮರ್ದಿಸಿ ಸಾಮವನಜಗಿತ್ತು
ಸುಮನಸರಿಗೆ ಸುಧೆಯನು ತಂದೆರದು

ಅವನಿಗಳೆದ ಅಸುರನ ಸಂಹರಿಸಿ
ಮಮತೆಯಿಂದ ಪುಟ್ಟ ಮಗುವನೆ ಸಲಹಿ
ಗಮಕದೊಳಗಿದ್ದ ಬಲಿಯನು ಕೆಡಮೆಟ್ಟಿ
ಸಮರಂಗದಿ ಸುರಧೇನುವ ತಂದು
ದಿನಕರ ವಂಶೋದ್ಧಾರಕನಾಗಿ ಕಂಸ–
ನ ಮಡುಹಿ ಮುಪ್ಪುರದ ಬಾಲೆಯರು
ಭ್ರಮಿಸುವಂತೆ ಬೌದ್ಧಾವತಾರನಾದ
ಕಲ್ಕಿ ಹೆಳವನಕಟ್ಟೆರಂಗ ದೇವೋತ್ತುಂಗನ ೩

೪

ಏನ ಹೇಳಲಿ ಕೃಷ್ಣನಗುಣವ
ನೋಡೆ ಸಖಿಯೆ ಪ.

ಜಾರತನದಿ ಶೀರೆಯ ಶೆಳಕೊಂಡು
ಮಾರನಾಟಕೆ ಎನ್ನ ಮರುಳು ಮಾಡಿದನಮ್ಮ ೧

ಚಂಡು ತಾರೆನುತಲಿ ದುಂಡು ಕುಚವಪಿಡಿದು
ಕಂಡು ಕಂಡಲ್ಲಿ ಎನ್ನ ಬಹು ಭಂಡು ಮಾಡುತಲಿಹನಮ್ಮ ೨

ತಂದೆ ಹೆಳವನಕಟ್ಟೆ ರಂಗನ ಕೃಪೆಯಿರಲು
ಬಂದ ದುರಿತಗಳು ನಂದಿ ಪೋಗುವವು ೩

೫

ಕಂಡೆನೀಗ ರಂಗನಾಥನ ಕಾರುಣ್ಯನಿಧಿಯ ಪ.

ಕಂಡೆನೀಗ ರಂಗಾಥನ ಭೂ–
ಮಂಡಲದೊಳುದ್ದಂಡ ಮೂರುತಿ
ಹಿಂಡು ದೈತ್ಯರ ತಂಡ ತಂಡದಿ
ತುಂಡು ತುಂಡು ಮಾಡಿದ ಸ್ವಾಮಿಯ ಅ.ಪ.

ಕಾಮಪಿತನ ಕೌಸ್ತುಭ ಹಾರನ ಕಸ್ತೂರಿ
ನಾಮವ ನೇಮದಿಂದ ಧರಿಸಿದಾತನ
ವಾಮಭಾಗಲಕ್ಷ್ಮಿ ಸಹಿತ ಹೇಮ ಮಂಟಪದೊಳಗೆ ಕುಳಿತು
ಕಾಮಿಸಿದ ಭಕ್ತರಿಗೆ ಕಾಮಿತಾರ್ಥ ಕೊಡುವ ಸ್ವಾಮಿಯ ೧

ಗರುಡವಾಹನವೇರಿ ಗಗನದಿ ಚರಿಸುತ್ತ ಬಂದು
ಸರಸಿಯೊಳು ಕರಿಯ ಸಲಹಿದೆ
ಪರಮಭಕ್ತರ ಕಾವದೇವ ಕರುಣವಾರಿಧಿ ಕಮಲನಯನ
ಉರಗಶಯನ ಉದ್ಧಾರಿ ನಿನ್ನ ಮರೆಯಹೊಕ್ಕೆ ಕಾಯೊ ಎನ್ನ ೨

ಇಂದುಧರನ ಸಖನೆ ಕೇಳಯ್ಯ ಬಂದಂಥ ದುರಿತ
ಹಿಂದು ಮಾಡಿ ಮುಂದೆ ಸಲಹಯ್ಯ
ತಂದೆ ಅಡಿಯ ಹೊಂದಿದೆನು ಇಂದು ಹೆಳವನಕಟ್ಟೆ ರಂಗ ಆ-
ನಂದ ಪಡಿಸೊ ರಾಮಲಿಂಗ ಹೊಂದಿದೆನು ನಿನ್ನ ಚರಣ ೩

೬

ಕರೆದಳು ತನ್ನ ಮಗನ ಯಶೋದೆ
ಕರೆದಳು ತನ್ನ ಮಗನ ಪ.

ಪರಮಪುರುಷ ಹರಿ ಶರಣರ ಸುರತರು
ತುರು ತುರುಯೆಂಬ ಕೊಳಲನೂದುತ ಬಾರೆಂದು ಅ.ಪ.

ಅಂದುಗೆ ಕಿರುಗೆಜ್ಜೆ ಘಲುಘಲುಕೆನುತಲಿ
ಚಂದದಿ ಕುಣಿವ ಮುಕುಂದನೆ ಬಾರೆಂದು ೧

ಹೊನ್ನುಂಗುರುಡಿದಾರ ರನ್ನ ಕಾಂಚಿಯದಾಮ
ಚೆನ್ನಾಗಿ ಹೊಳೆವ ಮೋಹನನೆ ಬಾರೆಂದು ೨

ಸಾಮಗಾನವಿಲೋಲ ಜಾಲವ ಮಾಡದೆ
ಸ್ವಾಮಿ ಹೆಳವನಕಟ್ಟೆ ರಂಗ ನೀ ಬಾರೆಂದು ೩

## ೭

ತಾರಮ್ಮ ಶ್ರೀ ರಂಗಧಾಮನ ತಂದು
ತೋರಮ್ಮ ಎನ್ನಯ ಪ್ರೇಮನ
ವಾರಿಜಸಖಶತಕೋಟಿತೇಜನ ಹೊಂತ–
ಕಾರಿಯ ನೀ ಕರತಾರೆ ಸೈರಿಸಲಾರೆ ಪ.

ವೃಂದಾವನದೊಳಗಾಡುವ ಶ್ರೀ–
ಗಂಧವ ಮೈಯೊಳು ತೀಡುವ
ಚಂದದಿ ಕೊಳಲೂದಿ ಪಾಡುವ ನಮ್ಮ
ಕಂದರ್ಪ ಜಲಕ್ರೀಡೆಯಾಡುವ
ನಂದ ನಂದನ ಗೋವಿಂದನ ಕಾಣದೆ
ಒಂದು ನಿಮಿಷ ಯುಗವಾಗಿ ತೋರುತಲಿದೆ ೧

ಉಡುವ ಸೀರೆಯ ಸೆಳೆದೋಡುವ ದೊಡ್ಡ
ಕಡಹದ ಮರವೇರಿ ನೋಡುವ
ಕೊಡಲೊಲ್ಲದೆ ಬಹುಕಾಡುವ ಲಜ್ಜೆ–
ಗೆಡಿಸಿ ಮಾನಿನಿಯರ ಕೂಡುವ
ತಡವ್ಯಾತಕ್ಕೆ ಸಖಿ ತವಕದಿಂದಲಿ ಪೋಗಿ ಎ–
ನ್ನೊಡೆಯನ ಕರತಾರೆ ಅಡಿಗೆರಗುವೆ ನಾ ೨

ನೀಲವರ್ಣನ ನಿಜರೂಪನ ಶ್ರೀ–
ಲೋಲ ಹೆಳವನಕಟ್ಟೆವಾಸನ
ಜಾಲಿ ಹಾಳ ವೆಂಕಟೇಶನ ಭಕ್ತ–
ಪಾಲಕ ಪರಮವಿಪೋಷನ
ಆಲಸ್ಯವ್ಯಾಕೆನ್ನ ಇನಿಯನ ಕರೆತಾರೆ
ಬಾಲೆ ನಿನಗೆ ಕಂಠಮಾಲೆಯ ಕೊಡುವೆ. ೩

## ೮

*ತಿಳಿಯದೊ ನಿನ್ನಾಟ ತಿರುಪತಿಯ ವೆಂಕಟ ಪ.

ನೀರೊಳು ಯಳವ ಮೋರೆಯ ನೆಳಲ ನೋಡುವಿ
ಸುಳಿವರಂಬುಧಿ ಇಳೆಯನಾಳುವ ಭಳಿರೆ ಭಾರ್ಗವ
ಖಳನ ಛೇದಿಸಿ ಕೊಳಲ ದನಿಯನು
ನಳಿನಮುಖಿಯರಿಗೆ ನಾಚಿಸುವದಿದೊಳಿತೆಯೇಳು ಹವಣಗಾರನೆ ೧

ಆರುಬಲ್ಲರು ನಿನ್ನ ಶ್ರೀ ಲಕ್ಷ್ಮಿಯ ಮನಸಿಗೆ
ತೋರದಿಹ ಪರಬ್ರಹ್ಮ ಉಳಿದವರು ಬಲ್ಲರೆ
ನೀರಜಾಸನ ಬೊಮ್ಮಾ ಇದು ನಿಮ್ಮ ವರ್ತಿ
ನೀರೊಳಗೆ ಮನೆ ಭಾರ ಬೆನ್ನಲಿ ೨

ಕೋರೆದಾಡೆಯ ನಾರಸಿಂಹನೆ ಭೂರಿ ಬೇಡಿದಿ
ಧೀರ ಹರುಷದಿ ವಾರಿ ಬಂಧಿಸಿ ಮಾರ ಜನಕನೆ
ನಾರಿಯರ ವ್ರತಭಂಗ ಕುದುರೆಯನೇರಿ
ಮೆರಿವೆ ಕೋಮಲಾಂಗನೆ ೩

ಸಕಲ ಮಾಯವಿದೇನೊ ತ್ರಿವಿಕ್ರಮನ ಪಾಲಿಸಿ
ಸಕಲನುಳಿಹಿದೆ ನೀನು ಭಕುತಿಯಿಂದಲಿ
ಸ್ತುತಿಪರಿಗೆ ಸುರಧೇನು ಸುಮನಸರ ಭಾನೂ
ಅಖಿಳವೇದೋದ್ಧಾರ ಗಿರಿಧರ ೪

ನಿಖಿಳ ಭೂಮಿಯ ತಂದ ನರಹರಿ ಯುಕುತಿಯಲಿ ಆಳಿದೆ
ಭಕ್ತವೃಂದಕೆ ಸುಖವ ತೋರುವ ವೇಣು ಗೋಪಾಲನೆ
ರುಕುಮನನುಜೆಯ ರಮಣ ಬೌದ್ಧನೆ
ಲಕ್ಷುಮಿಯರಸನೆ ಕಲ್ಕಿ ರೂಪನೆ ೫

---

* ಈ ಕೀರ್ತನೆ 'ವ್ಯಾಸವಿಠಲ' ಅಂಕಿತದಲ್ಲೂ ದೊರೆಯುತ್ತದೆ.

ನಿನ್ನ ರೂಪವಿದೆಲ್ಲಾ ನೋಡುವರಿಗೆ
ಕಣ್ಣು ಸಾಸಿರವಿಲ್ಲಾ ಪಾಡಿ ಪೊಗಳಲು
ರಂನ್ನಘಾತಿದೆನಲ್ಲಾ ಕಂಣಮುಚ್ಚದೆ
ಬೆಂನ್ನ ತೋರುವೆ ಮಂಣ ಕೆದಿರದಿ ೬

ಚಿಂಣಗೊಲಿದನೆ ಸಂಣವಾಮನ ಪುಣ್ಯಪುತ್ರನೆ
ಹಂಣುಸವಿದನೆ ಬೆಂಣೆಗಳ್ಳನೆ
ಹೆಂಣುಗಳ ವ್ರತಗಳೆವ ಹೆಳವನಂದು
ಗೆಲಿಸಿದ ರಂಗ ದೇವೋತ್ತುಂಗನೆ ೭

೯

ತೋರಬಾರದೆ ನಿಮ್ಮ ಚರಿತೆಯನು
ನರರೊಳು ನಗೆಗೀಡು ಮಾಡದ ಹಾಗೆ ಪ.

ಕಲ್ಲೊಳು ಕಾಂತೆಯ ಮಾಡಿದವನೆಂ–
ದೆಲ್ಲರು ಜಗದೊಳು ಪೇಳುವರು
ಅಲ್ಲಿ ಮಾಡಿದ ಹಾಗೆ ಇಲ್ಲಿ ತೋರಿಸಿದರೆ
ಬಲ್ಲಿದನೆನ್ನೊಡೆಯ ದೊಡ್ಡವನೆಂದು ಸಾರುವೆ ೧

ಅಹಹ ಕುಬುಜೆಯಳ ತನುವನ್ನೆತ್ತಿ
ಮಹಿಯೊಳು ಯುವತಿಯ ಮಾಡಿದೆಯೆಂಬರು
ಬಹು ಪರಾಕ್ರಮವನ್ನು ಈಗ ತೋರಿಸಿದರೆ
ಅಹುದೋ ಎನ್ನೊಡೆಯ ದೊಡ್ಡವನೆಂದು ಸಾರುವೆ ೨

ನೀನೆ ಗತಿಯೆಂದು ಬಂದ ಭಕ್ತನ ಕ–
ಣ್ಣುನವ ತಿದ್ದಿ ನಿಜವ ತೋರಿಸಯ್ಯ
ದೀನದಯಾಳು ಹೆಳವನಕಟ್ಟೆ ರಂಗಯ್ಯ
ದಾನಿ ಎನ್ನೊಡೆಯ ದೊಡ್ಡವನೆಂದು ಹೊಗಳುವೆ ೩

## ೧೦

ಧರೆಯೊಳಗೆ ಹೆಳವನಕಟ್ಟೆಯಲಿ ನೆಲಸಿ
ಪರಿಪೂರ್ಣಕಳೆಯಿಂದ ಭಕುತರನು ಒಲಿಸಿ
ಸ್ಥಿರವಾಗಿ ಪೂಜೆಯನು ನೆಲಸಿ ನೀನಿಂದೆ
ಕರುಣ ದೃಷ್ಟಿಯಲಿ ಭಕ್ತರನು ಮನ್ನಿಸುವೆ ೧

ಹತ್ತು ಅವತಾರದಲಿ ಇದಿರಾಂತವರ ಗೆಲಿದು
ಮತ್ತೆ ಪದವಿಯ ಕೊಟ್ಟುರಕ್ಷಿಸಿ ಕಾಯ್ದೆ
ವಿಸ್ತರಿಸಿ ಪೂಜಯನು ಮಾಡಿಸಿಕೊಂಬೆ
ತೆತ್ತೀಸಕೋಟಿ ದೇವರ್ಕಳನು ರಕ್ಷಿಸಿದೆ ೨

ಉದಯ ಮದ್ಯಾಹ್ನ ಸಂಜೆಯಲಿ ಪೂಜೆಯನು
ವಿಧವರಿತು ಸೇವೆಯನು ಅನುಸರಿಸಿಕೊಂಬೆ ಸ-
ಹೃದಯ ಭಕ್ತರನು ಕಾಯ್ದು ಪಾಲಿಸುವೆ
ಮುದದಿಂದ ಹೆಳವನಕಟ್ಟೆಯಲಿ ನೆಲಸಿರುವೆ ೩

## ೧೧

ನಾರಾಯಣನಮ್ಮ ಈತ
ನಾರಿ ಒಳ್ಳೊಳ್ಳೆ[ಯ]ವರಿಗೆ ಮಾಡಿದ ಖ್ಯಾತ ಪ.

ನಾನಾ ಬಗೆಯಿಂದ ಪೊಗಳುವೆನೀತ-
ನ್ನಾನೆಂಬುವುದನ್ನು ಮುರಿದ ಪ್ರಖ್ಯಾತ ಅ.ಪ.

ಕೈಕಾಲಿಲ್ಲದೆ ಆಟ ಆಡಿದ
ಮೈಮ್ಯಾಲೆ ಹೊರೆಯ ಹೊತ್ತು ನೋಡಿದ
ಕೋರೆಯ ಮಸೆದು ಹದ ಮಾಡಿದ
ಕೋಯೆಂದು ಕೂಗಿ ಒದರುತೋಡಿದ
ಇವ ಭಕ್ತರನ್ನ ಪಾತಾಳಕ್ಕೆ ದೂಡಿದ
ಶಕ್ತಿ ಮಗನಾದ ಕ್ಷತ್ರಿಯರ ಕಾಡಿದ

ರಾವಣನಿಗೆ ಅಂಬು ತೆಗೆದು ಹೂಡಿದ
ರಾಧಾನ್ಮನೆ ಪೊಕ್ಕು ಮೋಜು ಮಾಡಿದ
ಇವ ದಿಗಂಬರನಾಗಿ ಅಶ್ವವೇರಿ ಓಡಿದ ೧

ಕಳ್ಳಗಿಂತ ಮಹಾಕಳ್ಳ
ಕಲ್ಲು ಮಾಡಿಕೊಂಡು ಇರುವನು ನೆಳ್ಳ
ಭೂಮಿ ನೆಗವಿ ಸುತ್ತಿ ಬಲ್ಲ
ಬುದ್ಧಿವಂತ ಪ್ರಹ್ಲಾದಗೊಲಿದನಲ್ಲ
ಇವ ಎರುಡುಪಾದ ಭೂಮಿ ದಾನ ಒಲ್ಲ
ಇವನ ಕೊಡಲಿಬಾಯಿಗ್ಯಾರು ಇದಿರಿಲ್ಲ
ಲಂಕೆಗೆ ಬೆಂಕಿಯನಲ್ಲ
ಕೊಂಕಿ ಕೊಳಲನೂದುವನು ಗೊಲ್ಲ
ಮೈಮೇಲೆ ಗೇಣು ಅರಿವ್ವಿಲ್ಲ
ಇವ ಮಾಮೇರೆಂಬೊ (?) ತೇಜಿ ಏರ್‍ಯಾನಲ್ಲ ೨

[ಬಿಟ್ಟ ಕಣ್ಣ] ಕಂಡ ವೈರಿ ಕೊಂದ
ಕಾಮಾತ್ಮರಿ[ಗಾ]ಗೋದೇನು ಛಂದ
ದಾಡೆಯಿಂದ ದೂಡಿ ಭೂಮಿ ತಂದ
ದಾಡೆಯಿಂದ ಕಂಬ ಒಡೆದು ಬಂದ
ಇವ ಶುಕ್ರನ್ನ ಕಣ್ಣ ಮುರಿದೊಂದ
ತಂದೆ ಮಾತಿಗೆ ತಾಯಿ ಮರಣಂದ
ವನದ್ದಿಂಡು ಕೂಡಿ ವನಕೆ ಕೇಡು ತಂದ
ಒಮ್ಮೆ ಮೀಸಲ್ಬೆಣ್ಣೆ ಮೆದ್ದೇನಂದ
ಇವ ಬತ್ತಲಾಗಿ ಹತ್ತು ಕುದುರಿದಂದ
ತಂದೆ ಹೆಳವನಕಟ್ಟೆರಂಗ ಬಂದ ೩

## ೧೨

* ನೆರದು ಗೋಪಿಯರೆಲ್ಲಾರು ಕೃಷ್ಣಯ್ಯನ ಶೆರಗಪಿಡಿದುಕೊಂಡು
ಭರದಿಂದ ಬಂದು ಯಶೋದೆಗೆ ಛಾಡಿಯ
ಅರುಹಿದರತಿ ಬೇಗದಿ ಪ.

ಬಲುಕಳ್ಳ ನಿನ್ನ ಮಗ ಗೋಪಮ್ಮ ಕೇಳೆ
ಹಾಲು ಕರವುತಿರಲು
ತೊಲೆಗೆ ನಿಚ್ಚಣಿಕೆಯ ಹಾಕದೆ ಸುರಿದಾನು
ನೆಲವಿನ ಪಾಲ್ಮೊಸರಾ ೧

ಅಂಮ್ಮೈಯ್ಯಾ ಇಲ್ಲಾ ಕಾಣೆ ಇವಳು ಯಂನ್ನಾ
ಸುಂಮ್ಮಾನೆ ದೂರುವಳು
ಹುಂಮ್ಮಿಂದ ನಾನವಳ ಅಟ್ಟಕ್ಕೆ ನೆಗವೊರೆ
ಬೊಮ್ಮ ಜಟ್ಟಿಗನೆ ನಾನು ೨

ಮತ್ತೊರ್ವಳಿಂತೆಂದಳು ನಿಂನಮಗ
ಹತ್ತಿ ಗವಾಕ್ಷಿಯಿಂದಾ
ಬಚ್ಚಿಟ್ಟ ಬೆಣ್ಣೆಯನೆಲ್ಲಾವ
ಮೆದ್ದಾನು ಮಕ್ಕಳಿಗಿಲ್ಲದಂತೆ ೩

ಗಡಿಗೆ ಬೆಣ್ಣೆಯ ಮೆಲ್ವಾರೆ ಇವನ
ಹೊಟ್ಟೆ ಕೆರೆಭಾವಿಯೇನೆ ಅಮ್ಮಾ
ಹುಡುಗರಿಗೆ ಎಂದು ಬಚ್ಚಿಟ್ಟ ಬೆಣ್ಣೆಯನೆಲ್ಲಾ
ಹೊಡೆದರವರ ಮಕ್ಕಳು ೪

ಮಲಗೋಮಂಚದ ಮೇಲೆ ನಾ
ಮಲಗೀರೆ ಮೊರೆವ ಹಾವನು ಪಿಡಿದು
ಅರಿಯದಂತೆ ಬಂದು ಮುಸುಕಿ-
ನೊಳಗಿಟ್ಟು ಅರಿಯಾದೆ ಹೋದನಂಮಾ ೫

---

* ಈ ಕೀರ್ತನೆ 'ಕನಕದಾಸ'ರ ಅಂಕಿತದಲ್ಲೂ ಇದೆ.

ಹರನಡುಗುವ ಹಾವನು ನಾ ಪಿಡಿವಾರೆ
ತರಳಾನು ತಡೆಕಾರನೆ
ಹರಕೆಯ ಹೊತ್ತುದವಪ್ಪಿಸದಿದ್ದರೆ
ಗುರುತು ತೋರಲು ಬಂತೇನೊ ೬

ಮಕ್ಕಳ ಪಡೆದವರ್ಯುಯಿಲ್ಲದ ಕಳ
ವಿಕ್ಕಲಿ ಬಹುದೆ ಕೃಷ್ಣಗೆ
ಸಿಕ್ಕಿದ ತಪ್ಪು ಸಹಿತವೆ ತಂದರೆ ನಾನು
ತಕ್ಕ ಬುದ್ಧಿಯ ಪೇಳುವೆ ೭

ಅಣುಮಯರೂಪ ಕಾಣೆ
ನಿಂನಯ ಮಗ ಚಿನುಮಯ ರೂಪ ಕಾಣೆ
ಚಿನುಮಯ ರೂಪ ಹೆಳ
ವನಕಟ್ಟೆ ಆದಿಕೇಶವ ರಂಗನೆ ೮

## ೧೩

ಪಾಹಿ ಪರಮಾನಂದ ಪಾಹಿ ಮುನಿಜನವಂದ್ಯ
ಪಾಹಿ ಖಳಜನ ಬಾಧ ಪಾಹಿ ಗೋವಿಂದ ಪ.

ಪಾಹಿ ಗೋಪಿಯನಾಥ ಪಾಹಿ ಮನ್ಮಥ ತಾತ
ಪಾಹಿ ಲಕ್ಷ್ಮೀಕಾಂತ ಪಾಹಿ ಭೂಕಾಂತ ಅ.ಪ.

ಮತ್ಸ್ಯರೂಪಿಲಿ ಬಂದು ಬಲಿದ ದೈತ್ಯನ ಕೊಂದೆ
ಬೆಚ್ಚರದೆ ಬಹುಗಿರಿಯ ಬೆನ್ನಲ್ಲಿ ತಾಳ್ದೆ
ಬಚ್ಚಿಟ್ಟ ಧರಣಿಯನ್ನು ಬಲುಮೆಯಿಂದಲಿ ತಂದೆ
ಅರ್ಚಿಸಿದ ಪ್ರಹ್ಲಾದಗೆ ಒಲಿದೆ ನರಸಿಂಹ ೧

ಕುಬ್ಜರೂಪಿಲಿ ನೆಲನ ಬೇಡಿ ಬಲಿಯನು ತುಳಿದೆ ಪಿತನಾಡಿದ
ಶಬ್ದವನ್ನು ಕೇಳಿ ಮಾತೆಯ ಶಿರವನಳಿದೆ
ಕೊಬ್ಬಿದ್ದ ರಾವಣನ್ನ ಕಂದರವ ಖಂಡಿಸಿದೆ
ಅಬ್ಜಮುಖಿ ಜಾನಕಿಯನಾಳಿದೆ ಶ್ರೀರಾಮ ೨

ತುರುಹಿಂಡ ಕಾಯ್ದು ತಪವಳಿದು ಪತಿವ್ರತೆಯರ
ಭರದಿ ವಾಜಿಯನೇರಿ ಚರಿಸುತ್ತ ಬಂದೆ
ಕರುಣಾಳು ಶ್ರೀ ಹೆಳವನಕಟ್ಟೆ ರಂಗಯ್ಯ ಪಿಳ್ಳಂ-
ಗಿರಿ ವಾಸ ಶ್ರೀ ವೆಂಕಟೇಶ ೩

## ೧೪

ಬಹಳ ನಂಬಿದೆ ಭಕ್ತಪಾಲ ಶ್ರೀ ಲಕ್ಷ್ಮೀಯ ಲೋಲ
ವೆಂಕಟರಾಯನ ಮೂರು ಲೋಕದೊಡೆಯನ
ಮುಕ್ತಿಯ ಕೊಡುವನ ಪಾಲಿಸಿ ಜಗವನುದ್ಧರಿಸಿದ ದೇವನ ಪ.

ಜಲದೊಳು ಪೊಕ್ಕು ವೇದವ ತಂದು ಅಜವನಿಗಿತ್ತು
ಬಲುಗಿರಿ ಕುಸಿಯಲು ಬೆನ್ನಿನಿಂದಲಿ ತಳೆದು
ನೆಲನ ಕದ್ದಸುರನ ಕೊಂದು ಕಂಬದಿ ನಿಂದು
ಬಲಿಯ ದಾನವ ಬೇಡಿ
ಜಲ ಪರುಷವ ನೀಡಿ ಮತ್ತೆ ಮಾತೆಯ ಕಡಿದು
ಛಲದಿ ರಾವಣನ ಸಂಹರಿಸಿ ಸೀತೆಯ ತರಿಸಿ
ಬಲುಸತಿಯರನಾಳಿ ಬವುದ್ಧ ರೂಪವ ತಾಳಿ
ಅಲ್ಲದಶ್ವವೇರಿದ ಅತಿ ಚೆಲುವ ದೇವನ ೧

ನಿಗಮ ಚೋರನ ಕೊಂದು ನೀರೊಳು ಮುಳುಗ್ಯಾಡಿ
ನಗವ ಬೆನ್ನಲಿ ಪೊತ್ತು ಸುರರಿಗಮೃತವಿತ್ತು
ಬಗೆದು ಧಾರುಣಿಯನ್ನು [ಚೀರಿ ಹರಹಿ] ಹಿರಣ್ಯಕನ
ಮಿಗಿಲಾದ ಬಲಿಯ ಮೆಟ್ಟಿ
ಸೊಗಸಿಂದ ಕಾಮಧೇನುವ ತಂದು ಕೌಸಲ್ಯಾ
ಮಗನಾಗಿ ಹುಟ್ಟಿ ರಕ್ಕಸರನ್ನು ತರಿದೊಟ್ಟಿ
ವಿಗಡ ಮಾವನ ಕೊಂದು ಮತ್ತೆ ತ್ರಿಪುರವ ಗೆಲಿದು
ಜಗದೊಳುದ್ದಂಡ ರಾವುತನಾದ ದೇವನ ೨

ಆದಿಪೊಳ[ಕು] ಕ್ಷೀರಾಂಬುಧಿ ಮಥನವ
ಆಡಿ ಕೂರುಮನಾಗಿ ಮತ್ತ ಹಿರಣ್ಯಕನ
ದಾಡೆಯಿಂದಲಿ ಸೀಳಿ ಜೋಡು ರೂಪವ ತಾಳಿ
ಬೇಡಿ ಮೂರಡಿ ನೆಲವ
ತೀಡಿ ಕ್ಷತ್ರಿಯರ ಸಂಹರಿಸಿ ಕಾಡೊಳು ಚರಿಸಿ
ಗಾಡಿಗಾತಿಯರ ಮನೆಯೊಳುಳ್ಯಾಡಿ ಸತಿಯರ ವ್ರತ–
ಗೇಡಿ ಭಕ್ತರಿಗೆ ಅಭಯವ ನೀಡಿ ಹೆಳವನಕಟ್ಟೆ
ಕಾಡುಗಲ್ಲಲ್ಲಿ ನಿಂತ ಕಲಿ ವೆಂಕಟೇಶನ ೩

## ೧೫

ಮಕ್ಕಳ ಮಾಣಿಕವೆ ಮೋಹನ್ನ
ಬಾ ರಂಗೈಯ್ಯಾ ಮಕ್ಕಳ ಮಾಣಿಕವೆ ಮೋಹನ್ನ
ಎನ್ನಕ್ಕರದ ಗುಣನಿಧೆ ಬಾ ರಂಗೈಯ್ಯಾ ಪ.

ಅಪ್ಪುತಪ್ಪು ಹೆಜ್ಜೆನಿಕ್ಕುತ ಬಾಯೊಳು ಜೊಲ್ಲು
ಸುಪ್ಪಾಣಿಮುತ್ತಂತೆ ಸುರಿಯುತಾ ಬಾರಂಗೈಯ್ಯಾ
ನಿನಗೊಪ್ಪುವಾಭರಣ ನೀಡುವೆನೊ ಅದನೊಲ್ಲದಿದ್ದರೆ
ತುಪ್ಪಾಕಜ್ಜಾಯ ಕೊಡುವೆನೂ ೧

ಅಂದಿಗೆ ಕಿರುಗೆಜ್ಜೆ ಅಲಗೊತ್ತು ಕೈಯೊಳಗಿದ್ದು
ಬಿಂದುಲಿ ಬಾಜುಬಂದು ತಿರುಹೂತ ಬಾರಂಗೈಯ್ಯಾ
ಬಂದೆನ್ನ ಬಿಗಿಯಪ್ಪಿಕೊಳ್ಳಯ್ಯ ಅದನೊಲ್ಲದಿದ್ದರೆ
ಅಂದವಾದ ಒಂದು ಮುದ್ದು ತಾರಯ್ಯ ೨

ಓಡಿಓಡಿ ಬಾರೋ ವಸುದೇವನಂದನಾ ಕಂದ
ನೋಡಿ ನೋಡಿ ನಗುತ ಬಾರೊ ರಂಗಯ್ಯ
ಕಾಡ ಬೇಡ ಎನ್ನಯ್ಯಾ ಹೆಳವನಕಟ್ಟೆ
ಕೋಡಗಲ್ಲವಾಸ ವೆಂಕಟ ೩

## ೧೬

ಮೂರು ಜಗವ ಕುಣಿಸುವಂಥ ಗಾರುಡಿಗ ಇವ ದಾರಕ್ಕ
ನಾರಾಯಣನಲ್ಲವೇನೆ ನಾರಿ ಕೇಳೆ ತಂಗಿ ಪ.

ವಾರಿಧಿಯೊಳಾಡುವ ವಿಚಾರ ಮಾಡೆ ಅಕ್ಕ
ಧೀರ ಬಲುಗಂಭೀರ ಮತ್ಸ್ಯವತಾರ ಕಾಣೆ ತಂಗಿ ೧

ಹತ್ತೂ ನಾಲ್ಕು ರತ್ನವ ತೆಗೆದು ಮತ್ತೆ ಇವ ದಾರಕ್ಕ
ರತ್ನ ಕುಂಚದ ಹೇಮಗಿರಿಯನೆತ್ತಿದ ಕೂರ್ಮ ಕಾಣೆ ತಂಗಿ ೨

ಧರಣಿಯ ಸುರುಳಿ ಸುತ್ತಿದಂಥ ಅರಸ ಇವ ದಾರಕ್ಕ
ಅರಿಯದ ಭಕ್ತರ ಮೊರೆಗೋಡುವ ವರಾಹ ಕಾಣೆ ತಂಗಿ ೩

ನಂಬಿದವರ ಕಂಬದೊಳು ಎಂಬೆ ಇವ ದಾರಕ್ಕ
ರಂಭೆ ಹೇಮದ ಬೊಂಬೆ ನರಸಿಂಹ ಕಾಣೆ ತಂಗಿ ೪

ಕದ್ದು ಅಡ್ಡ ಬಿದ್ದನ ಕಣ್ಣ ಇರಿದ ಇವ ದಾರಕ್ಕ
ಮುದ್ದು ಮುಖದ ಪ್ರಸನ್ನನಾದ ವಾಮನ ಕಾಣೆ ತಂಗಿ ೫

ಆ ಮಾತೃ ದ್ರೋಹವ ಮಾಡಿದವ ಇವ ದಾರಕ್ಕ
ಶಾಮ ಸಾರ್ವಭೌಮ ಪರಶುರಾಮ ಕಾಣೆ ತಂಗಿ ೬

ಕಾಮಿನಿಯ ಪೋಗಿ ತಂದ ಭೀಮ ಇವ ದಾರಕ್ಕ
ಕಾಮಿತಾರ್ಥವನೀವ ಶ್ರೀ ರಾಮ ಕಾಣೆ ತಂಗಿ ೭

ಗೊಲ್ಲತೇರ ಗಲ್ಲವ ಪಿಡಿದ ಚೆಲುವ ಇವ ದಾರಕ್ಕ
ಬಲ್ಲಿದ ಮಲ್ಲರ ಮರ್ದಿಸಿದಂಥ ಕಳ್ಳ ಕೃಷ್ಣ ಕಾಣೆ ತಂಗಿ ೮

ತ್ರಿಪುರದೊಳು ಚಪಲಾಕ್ಷಿಯರ ವಿಪರೀತವ ಮಾಡಿದನಕ್ಕ
ಅಪರಿಮಿತ ಮಹಿಮನಿವ ಚಪಲ ಬೌದ್ಧ ಕಾಣೆ ತಂಗಿ ೯

ಕುದುರೆಯೇರಿ ಎದುರಿಗೆ ಬರುವ ಚದುರ ಇವ ದಾರಕ್ಕ
ಮಧುವನಿಕ್ಕಿದ ಮಧುರಾಪುರದ ಚದುರ ಕಲ್ಕಿ ತಂಗಿ ೧೦

ಇಂದುವದನ ಮೂರ್ತಿ ಗೋವಿಂದ ಇವ ದಾರಕ್ಕ
ನಂದನ ಕಂದ ಹೆಳವನಕಟ್ಟೆ ರಂಗ ಕಾಣೆ ತಂಗಿ ೧೧

## ೧೭

ಯಾಕೆದೂರುವಿರೆಂಮ ಬಾಲನಾ
ಲೋಕದೊಳಿವನಂಥ ಪುಂಡು ಮಕ್ಕಳಿಲ್ಲವೆಂದು ಪ.

ಒಂದು ಹೆಜ್ಜೆಯನಿಡವಲ್ಲಿ ಬೀಳುತಲಿಹನೆ
ನಿಂದಿಹವದನ್ನು ನಾ ಕಾಣೆ ಅ.ಪ.

ಇಂದು ನಮ್ಮಯ ಮನೆವೊಕ್ಕು ಬೆಣ್ಣೆಯ ಸವಿದನೆಂಬುದು
ಛಂದವೇನೆ ಗೋಪಿ ನಿನ್ನ ಕಂದನ ಸರಿಯಲ್ಲವೆ ೧

ಅನ್ನವನುಣ್ಣಲರಿಯ ಅಮ್ಮಿಬೇಡುತಲಿಹನೆ
ಸೊನ್ನಿಮಾಡಿ ಕರದನೆಂಬೋದು ಸೊಲ್ಲು ಸರಿಯೇ ಗೋಪಿ ೨

ಬಲುಹಿಂದ ಹಾಲನೆರೆಯೆ ಬಾಯತೆಗಿಯಲೊಲ್ಲ ಒಲೆಯ
ಮೇಲಿನಹಾಲ ಒಬ್ಬನೆ ಕುಡಿದಾನೆಂದು ಹೆಳವನಕಟ್ಟೆ
ರಂಗನಾ ದೂರುವುದೊಳಿತೆ ೩

## ೧೮

ಯಾಕೆ ಬಾರನಕ್ಕಯ್ಯ ಎನ್ನಯ
ಪ್ರಾಣನಾಥನ ಕರೆತಾರೆ ಸೈರಿಸಲಾರೆ ಪ.

ಸೋಗೆಗಂಗಳ ಸನ್ನೆ ಮಾಡಿ ಪೋಳೆದು ಪೋದ
ಮೇಘದ ಮಿಂಚಿನಂತೆ ಮಂದರೋದ್ಧಾರ
ಬಾಗಿದ ಮುಖವೆತ್ತಿ ಎನ್ನ ನೋಡದೆ ಪೋದ

ಈಗಲವನ ಮನಸ್ಸೆರಡಂಗವಾಗಿದೆ
ಹ್ಯಾಂಗ ಮಾಡಲಿ ಸಖಿಯೆ ಹೇಳಲಿ ಪ್ರಿಯೆ ೧

ಕರವೊಡ್ಡಿ ಬೇಡಿಕೊಂಡರೆ ಒಲ್ಲದೆ ಪೋದ
ಕರೆದರೆ ಪಿತನಾಜ್ಞೆ ತೋರುತಾನೆ
ನಿರುತದಿ ಏಕಪತ್ನಿಯ ವ್ರತನೆನುತ
ಸರಿಬಂದ ಸತಿಯರ ಒಡನಾಡುತ್ತೈದಾನೆ
ಗರುವತನವ ಬಿಡನೆ ಗೋವ ಕಾಯ್ವವನೆ ೨

ಸುಮ್ಮನೆ ಲಜ್ಜೆಭಂಗವ ಮಾಡಿ ಪೋದನೆ
ಒಮ್ಮೆ ಮನೆಗೆ ಬಾರನೆ ವಾಜಿವಾಹನನೆ
ತಮ್ಮ ಧ್ಯಾನದೊಳೆನ್ನ ಮನಸು ನಿಲ್ಲಿಸಿ ಪರ–
ಬೊಮ್ಮ ಮೂರುತಿ ಹೆಳವನಕಟ್ಟೆರಂಗನ
ಘಮ್ಮನೆ ಕರೆದುತಾರೆ ಸೈರಿಸಲಾರೆ ೩

## ೧೯

ಯೇಕೋದೇವ ಶ್ರೀ ವೆಂಕಟನಾಯಕ ಯಾದವ ಕುಲ ತಿಲಕ
ಸಾಕಾರ ಮೂರುತಿ ಸುಜನ ಮಂದಾರ ಅನೇಕದಿವ್ಯರೂಪ ಪ.

ವನರುಹದಳಲೋಚನ ಮುನಿಸುತ ವೈಕುಂಠ ನಿವಾಸ
ಕನಕಕೌಸ್ತುಭಮಣಿ ಭೂಷಾ ಕಂಬುಗದಾಬ್ಜದಳ
ದಿನಕರ ಕೋಟಿ ಪ್ರಕಾಶ ದಯಾಂಬುಧಿ ದೀನಜನೋದ್ಧಾರ
ಮನಸಿಜಪಿತ ಮೃದು ಮಧು ಸುಂದರ ಮಮಕಾರ
ಬಿಡಿಸೊ ನೀ ಎನ್ನ ೧

ರಮಣಿಯ ಪಂಕಜದಳನೇತ್ರಿಯ ವಿಮಲ ಕುಚಾಗ್ರದಿ
ಸುರಪತಿತನಯನು ದಿನಕರ ವಂಶೋದ್ಧಾರನ
ಸತಿಯನು ಹಿಂಸಿಸಿ

ಅಮರವಂದಿತ ಶ್ರಿತಜನ ರಕ್ಷಕ ಸಮರವಿಕ್ರಮ
ಸಕಲಾಗಮಸುತ್ತ್ಯಾ ಸಾಮಗಾನ ಲೋಲ ೨

ಶರಧಿ ಶಶಿಧರ ಸನ್ನುತ ಶಾಶ್ವತ ಗುಣಭಾಸ
ಪರಮ ಪುರುಷಹರಿವಾಕ್ಕುತಾರ ಪುರಾಣ ಪುರುಷದೇವ
ದುರಿತಭಂಜನ ದಶರಥ ಸುಕುಮಾರ ಧಾರುಣಿಧರರಾಮ
ಕರಿದೇಹ ವಿಮೋಚನ ಹೆಳವನಕಟ್ಟೆ ವೆಂಕಟರಮಣ ೩

## ೨೦

ರಾಮ ಶ್ರೀ ರಘುನಂದನ ಶರಣು ಸಾರ್ವ–
ಭೌಮ ಭೂಸುರವಂದ್ಯ
ಸೋಮಶೇಖರಮಿತ್ರ ಕಾಮಿತ ಫಲದಾತ್ರ
ಕಾಮಧೇನು ವಿಶ್ವಭೀಮ ಸನ್ನುತ ಸೀತಾ ಪ.

ಕ್ರೂರ ದಾನವ ಸಂಹಾರ ಕೌಸಲ್ಯಾಕುಮಾರ ಭೂ–
ಭಾರಹರ ಭಜಕಜನೋದ್ಧಾರ ವೇದಾಂತಸಾರ
ಚಾರುವದನ ಮಣಿಹಾರ ಕುಂಡಲಧರ
ವೀರರಾಘವ ವಿಶ್ವಾಧಾರ ಕರುಣಿಸು ಸೀತಾ ೧

ಪಾಪರಹಿತ ಪಾವನ ಚರಿತ ಅಹಲ್ಯಾ
ಶಾಪ ಹರಣ ದಿವ್ಯರೂಪ ರಮಾರಮಣ
ತಾಪ ವಿಚ್ಛೇದನ ತಾಮಸ ಗುಣಹರಣ ದ–
ಯಾಪರ ಬ್ರಹ್ಮಸ್ವರೂಪ ಮೂರುತಿ ಸೀತಾ ೨

ಮದನಕೋಟಿ ಮೋಹನಾಂಗ ಮಾಧವ ಪುಣ್ಯಚರಿತ
ಕರುಣಾಪಾಂಗ ಹೆಳವನಕಟ್ಟೆ ರಂಗಯ್ಯ
ಸದಾನಂದ ಸುಮತೀಂದ್ರ ಹೃದಯ ಪಂಕಜಭೃಂಗ
ಕದನ ವಿಕ್ರಮ ಬಾಹು ಕೋದಂಡಧೃತ ಸೀತಾ ೩

## ೨೧

ಶ್ರೀ ನರಸಿಂಹದೇವ ಶರಣ ರಕ್ಷಕನೆ
ದಾನವಾರಿ ಸುಭಕ್ತಾಧೀನ ಮೂರುತಿಯೆ ಪ.

ಹರಿ ತನ್ನ ದೈವವೆಂದು ಸ್ಮರಿಸುತಿರಲು ಬಾಲ
ನಿರವ ಕಾಣದೆ ದುಷ್ಟಹಿರಣ್ಯಕಾಸುರನು
ಪರಿ ಪರಿ ಹಿಂಸಿಸೆ ಮೊರೆದು ಕೋಪದೊಳೆದ್ದು
ತರಳಗೊಲಿದೆ ಬಹು ಕರುಣಾನಿಧಿಯೆ ೧

ಛಿಟಿ ಛಿಟಿಲೆಂದಾರ್ಭಟಿಸಿ ಕಂಬವು ಸಿಡಿಯೆ
ಕಟಿ ಕಟಿ ಮಸಿದಗ್ನಿ ನಿಟ್ಟುಸಿರಿನಿಂ ಹಲ್ಗಳ
ಕಟಿ ಕಟಿ ಕಡಿವುತುಬ್ಬಸ ತೋರಿ ನಿಂದ
ಕಠಿಣ ಮೂರುತಿಯೆ ೨

ಕೊಬ್ಬಿದ ಹಿರಣ್ಯಕನುಬ್ಬ ಮುರಿವೆನೆಂದು
ಹೆಬ್ಬಾಗಿಲೊಳು ಸಂಜೆ ಮಬ್ಬಿನಲಿ ಧನುಜನ
ಗರ್ಭವ ನಖದಿಂದ ಇಬ್ಭಾಗವನು ಮಾಡಿ
ಹಬ್ಬಿದ ಕರುಳನು ಹರುಷದಿ ಧರಿಸಿದೆ ೩

ಭೀತರಾದ ಸುರವ್ರಾತ ಪ್ರಾರ್ಥಿಸೆ ಬಹು
ಪ್ರೀತಿಯ ಭಕ್ತನ ಮಾತನು ಮನ್ನಿಸಿ ಅತಿ
ಶಾಂತನಾಗಿ ಸಂತೋಷಪಡಿಸಿದ ಅ–
ನಾಥ ರಕ್ಷಕನೆ ಕಾತರವಳಿದೆ ೪

ಖಳನ ಮರ್ದಿಸಿ ಬಹು ಇಳೆಯ ಪಾಲಿಸಿದೆ
ನಳಿನ ಸಂಭವಗೆ ಬಲು ಹರುಷವನಿತ್ತೆ
ಹೆಳವನಕಟ್ಟೆ ಶ್ರೀ ರಂಗ ದಾಗಿನಕಟ್ಟೆ
ನೆಲೆವಾಸ ಕಂಬದ ನರಸಿಂಹದೇವ ೫

## ೨೨

ಶ್ರೀರಂಗ ಶ್ಯಾಮಲಕೋಮಲಾಂಗ
ಕ್ರೂರರಕ್ಕಸಕುಲನಿವಾರಣ ನಾರದಾದಿವಂದ್ಯನೆ ಪ.

ಮಾಣಿಕ್ಯ ಮೌಕ್ತಿಕಹಾರ ಧೀರ ವಾಣೀಪತಿಪಿತ ವನಜನೇತ್ರನೆ
ವಾಣಿಬಾಹೋತ್ತಂಡನ ಚಾಣೂರಮರ್ದನ ಚಿದಾನಂದ
ವೇಣುನಾದಪ್ರಿಯದೇವನೆ ಇನಕುಲಾಂಬುಧಿಚಂದ್ರನೆ ೧

ಅಕ್ರೂರ ಅಂಬರೀಷವರದ ನಕ್ರಬಂಧನ ನಾಗಸ್ತ್ರೀರಕ್ಷಕ
ಚಕ್ರಧರ ಮುಕುಂದನೆ ರುಕ್ಮಿಣೀವಲ್ಲಭ ವಾಸುದೇವ
ಶಕ್ರಶಶಿಧರಶೇಷಸನ್ನುತ ಸಕಲಲೋಕೋತ್ತಮನೆ ೨

ನಿತ್ಯಾನಂದನೆ ನಿಗಮಗೋಚರನೆ
ಸತ್ಯಭಾಮೆ ಶ್ರೀಮನೋಹರ ಮದನ ಶ್ರೀಗೋಪಾಲನೆ
ಭಕ್ತವತ್ಸಲ ಭಯನಿವಾರಣ ಕರ್ತು ಹೆಳವನಕಟ್ಟೆರಂಗನೆ ಕೃಪಾಂಗನೆ ೩

## ೨೩

ಹೊನ್ನ ತಾ ಗುಬ್ಬಿ ಹೊನ್ನ ತಾ
ಚೆನ್ನ ಗೋಪಾಲ ಚೆಲುವ ಕೃಷ್ಣನ ಕೈಗೆ ಪ.

ಆಗಮವನು ತಂದು ಅಜಗಿತ್ತ ಕೈಗೆ
ಸಾಗರವನೊತ್ತಿಕ್ಕಿ ಸುಧೆಯಿತ್ತ ಕೈಗೆ
ತೂಗಿ ನಡೆವ ಸ್ಥೂಲಕಾಯನ ಕೈಗೆ
ನಾಗಶಯನ ನರಸಿಂಹನ ಕೈಗೆ ೧

ಬಲಿಯ ದಾನವ ಬೇಡಿ ಬಂದಂಥ ಕೈಗೆ
ಛಲದಿಂದ ಕ್ಷತ್ರಿಯರ ಕೊಂದಂಥ ಕೈಗೆ
ಕಲಿ ವಿಭೀಷಣಗಭಯವಿತ್ತಂಥ ಕೈಗೆ
ಬಲುಗಿರಿಯ ಬೆರಳಲ್ಲಿ ಆತಂಥ ಕೈಗೆ ೨

ಪತಿವ್ರತೆಯರ ವ್ರತವಳಿದಂಥ ಕೈಗೆ
ಹಿತವಾಜಿಯನೇರಿ ದುರುಳಮರ್ದನ ಕೈಗೆ
ಸತಿ ಶಿರೋಮಣಿ ಲಕ್ಷ್ಮೀಕಾಂತನ ಕೈಗೆ
ಚತುರ ಹೆಳವನಕಟ್ಟೆ ರಂಗನ ಕೈಗೆ ೩

## ೨೪

* ಹ್ಯಾಂಗಿರಲಿನ್ನು ರಂಗನ ಬಿಟ್ಟಿನ್ನಹ್ಯಾಗಿರಲಿಂನು
ಮಂಗಳಾತ್ಮಜ ಹೆಳವನಕಟ್ಟೆರಂಗನ ಬಿಟ್ಟು ಹ್ಯಾಂಗಿರಲಿಂನು ಪ.

ಸಿರಿಮನೋಹಾರಿ ಶರಣರಿಗಂತ:ಕರಣವ ತೋರಿ
ತ್ವರಿತದಿದಿವ್ಯರಥಗಳನ್ನು ನೀಡಿ
ಪರಮಾ ಸಂಭ್ರಮದಿಂದಾಯಿರುವೋನ
ಮರದು ನಾ ಹ್ಯಾಂಗಿರಲಿನ್ನೂ ೧

ಗಿರಿಮನಿ ಮಾಡಿ ಶರಣಗರಿತ:ಕರುಣವ ನೀಡಿ
ಸರಸದಿ ಮನೋರಥಗಳ ತೋರಿ
ಪರಮಾ ಸಂಭ್ರಮದಿಂದಾ ಇರುವನ
ಮರದು ನಾ ಹ್ಯಾಂಗಿರಲಿನ್ನೂ ೨

ಶರಣು ಪೊಕ್ಕಿರುವಾ ಗಿರಿಯಮ್ಮಗಾ
ತುರದಿ ವಲಿದಿರುವ ಸರಕಿರಿಗೆಜ್ಜೆ
ಧರಿಸಿ ಕುಣಿದಿರುವ ಸಿರಿನಾರಸಿಂಹನ
ಚರಣವಾ ಮರೆದು ನಾ ಹ್ಯಾಂಗಿರಲಿನ್ನೂ ೩

## ೨೫

ಆಡುತ್ತಾ ಬಾರಮ್ಮಾ
ನಲಿದಾಡತ್ತಾ ಬಾರಂಮಾ ಆಡುತ್ತವರಗಳಾ ನೀಡುತ್ತಾ ಕರುಣಾದಿ
ನೋಡುತ್ತಾ ದಯದಿಂದಾ
ಲಕ್ಷ್ಮಿ ಆಡುತ್ತಾಬಾರಮ್ಮಾ ಪ.

* 'ಸಿರಿನಾರಸಿಂಹ' ಅಂಕಿತದ ಬೇರೊಬ್ಬದಾಸರಿರಬಹುದೇ ?

ಬೇಸರವು ಬೇಡಮ್ಮಾ ದಾಸರ ದಾಸಿಯು ನಾನಿಂಮ
ವಾಸನಪೂರಿತೆ ವನರೂಹ ನೇತ್ರೆ
ಸಾಸಿರನಾಮದ ವಾಸುದೇವನ
ಸತಿ ಆಡುತ್ತಾಬಾರಮ್ಮಾ ನಲಿದಾಡುತ್ತಾ ಬಾರಮ್ಮಾ ೧

ಕರದಾರವೊಯೆಂದು ತಾಯೆಯಂನಾ
ಮೊರೆಯಲಾಲಿಸೆ ನೀ ಬಂದು
ದುರಿತಗಳಾನೆಲ್ಲಾ ಪರಿಹರಿಸುವ ನಿಂಮ
ಕರುಣಾಮೃತವನು ಸ್ಮರಿಸುವೆ ಅನುದಿನ ಆಡುತ್ತಾ ಬಾರಮ್ಮಾ ೨

ಧರಣಿಯೊಳುನ್ನತವಾದ ಹೆಳವನಾಕಟ್ಟೆ
ಗಿರಿಯೊಳು ನೆಲಸಿದ
ಪರಮ ಪವಿತ್ರಳ ಕರುಣಾ ಸಿಂಧುವೆ
ವರವನು ಕೊಡುತ್ತಾ ಬೇಗಾದಿಂದಲಿ ಆಡುತ್ತಾ ಬಾರಮ್ಮಾ ೩

## ೨೬

ಈತ ಅಂಜನೆಸುತನು ಭೀಮರಾಯನು ಪ.

ಈತ ರಾಮರ ಬಂಟನು
ಈತ ಕೋಟಿಲಿಂಗವನ್ನು ರೋಮರೋಮದಿ ಧರಿಸಿದವನು
ಈತ ಲೋಕ ಪ್ರಖ್ಯಾತನು ಭೀಮರಾಯನು ಅ.ಪ.

ಪುಟ್ಟಿದಾಗಲೆ ಗಗನಮಂಡಲವನ್ನು ಮುಟ್ಟಿ ರವಿಯನು ತುಡುಕಿ
ಇಟ್ಟ ಕೈಪ ಕುಂಡಲವನ್ನು ತೊಟ್ಟು ಮೆರೆವಂಥ ದಿಟ್ಟ
ಹನುಮರಾಯನು ೧

ಮುಂಚೆ ಸ್ವಾಮಿಯ ಕಂಡು ಅಂದು ಸೇವೆಯ
ವಂಚನಿಲ್ಲದೆ ಮಾಡಿದ
ಅಂಚೆಗಮನೆ ಸೀತಾದೇವಿಗುಂಗುರವಿತ್ತು ಮಿಂಚುಳ್ಳ
ವನವ ಕಿತ್ತನು ಭೀಮರಾಯನು ೨

ಲಂಕಿಣಿಯನೆ ತುಡುಕಿ ಮಾಯಾಜಾಲವ ಶಂಕೆಯಿಲ್ಲದೆ ಗೆಲಿದ
ಲಂಕಾಪಟ್ಟಣವ ಸುಟ್ಟು ರಾವಣೇಶ್ವರನ ಅಹಂಕಾರವಳಿದ ಧೀರ
ಭೀಮರಾಯನು ೩

ತಂತ್ರದರಸ ಶೂರನು ಸಂಗ್ರಾಮದಿ ಮಾರಾಂತ
ವೀರರ ಗೆಲಿದ
ಪಂಥದಿ ಸಂಜೀವನವ ತಂದು ಲಕ್ಷ್ಮಣನ ಅಂತರವಳಿದ
ಶೂರನು ಭೀಮರಾಯನು ೪

ಲೆಕ್ಕವಿಲ್ಲದೆ ಖಳರ ಗೆಲಿದು ಬಂದು ಕೊಕ್ಕನೂರೊಳುನಿಂತನು
ರಕ್ಕಸಾಂತಕ ಹೆಳವನಕಟ್ಟೆ ರಂಗಯ್ಯನ ಅಕ್ಕರುಳ್ಳತಿದಾಸನು
ಭೀಮರಾಯನು ೫

## ೨೭

ಭೀಮಾ ಹೋ ಭಲಾರೆ ನಿಸ್ಸೀಮ ಹೋ ಭಾಪುರೆ ಹನುಮ ಹೋ ಪ.

ನಿಜಜಿತಕಾಮ ಹೋ ಕಾರುಣ್ಯಧಾಮ ಹೋ
ರಾಮಚಂದ್ರನ ಚರಣಕಮಲಸರಾಮ ಕಾರ್ಯಧುರಂಧರನೆ ಅ.ಪ.

ಆಂಜನೇಯ ಸುಕುಮಾರ ಅದ್ಭುತಮಹಿಮ ರಾಮ[ನ] ದೂತನೆ
ಅಂಜದುದಧಿಯ ದಾಟಿ ಅಸುರನ[ವ] ನವ ಕಿತ್ತನೆ
ಕಂಜಮುಖಿ ಜಾನಕಿಗೆ ಮುದ್ರೆಯನಿತ್ತ ಬಲುಪ್ರಖ್ಯಾತನೆ
ರಂಜಿಪ ಲಂಕಾನಗರವನು ಸುಟ್ಟು ರಾಜಕಾರ್ಯವ
ಮಾಡಿಸಿದೆ ಕಲಿ ೧

ಅವನಿತನುಜೆಯ ಚೂಡಾರತ್ನವ ಅಂಬುಜಾಕ್ಷನಿಗಿತ್ತನೆ
ಸಮರಕನುಕೂಲವೆಂದು ರಾಮಗೆ ಸುಗ್ರೀವನ ಕಾಣಿಸಿದನೆ
ಕಮಲನಾಭನ ಆಜ್ಞೆಯಿಂದಲಿ ಕಪಿಬಲವ ಕೂಡಿಸಿದನೆ
ಸಮುದ್ರವನು ಕಟ್ಟಿ ಬಲವ ನಡೆಸಿದ
ಬಹುಪರಾಕ್ರಮಿಯಹುದಹುದೊ ಕಲಿ ೨

ಅಗಳುಸಾಗರ ಮಧ್ಯದಲ್ಲಿಹ ನಗರವನು ಬಂದು ಮುತ್ತಿದೆ
ಬಗೆದು ಕಲ್ಮರಗುಂಡಿನಿಂದಲಿ ವಿಗಡದೈತ್ಯರ ಮಡುಹಿದೆ
ಬಗೆಬಗೆ ಮಯಾಜಾಲವನು ಗೆದ್ದು ಭರದೊಳದ್ರಿಯ ತುಡುಕಿದೆ
ಜಗತ್ಪತಿಯ ಮೂರ್ಛಲವನೆಲ್ಲವ ಸಂಜೀವನವ ತಂದುಳುಹಿದೆ ೩

ಪೃಥ್ವಿಯೊಳಗುದ್ದಂಡ ದೈತ್ಯರ ಸುತ ಸಹೋದರರ ಮಡುಹಿದೆ
ಹತವ ಮಾಡಿ ಶ್ರೀರಾಮ ಬಾಣದಿ ಹತ್ತು ತಲೆಗಳ ಕೆಡಹಿದೆ
ಪ್ರತಿಶತೇಶ್ವರ ಶ್ರೀರಮಣಿಯನ್ನು ತಂದು ರಾಘವಗೆ ಒಡಗೂಡಿಸಿದೆ
ಅತಿಹರುಷದಿಂದ ಅಯೋಧ್ಯಾನಗರಿಗೆ ಪ್ರತಿಪ್ರವೇಶವ
ಮಾಡಿಸಿದೆ ಕಲಿ ೪

ತೋರುತ್ತಿದೆ ಶಿಖಿ [ಕೃಪ] ಕುಂಡಲ ಚಾರು ಯಜ್ಞೋಪವೀತನೆ
ಸೂರ್ಯಚಂದ್ರಮರುಳ್ಳನಖ ವಜ್ರಕಾಯದಲಿ ನಿರ್ಭೀತನೆ
ವೀರಕದನಕಠೋರ ರಾಣಿಬೆನ್ನೂರ ಬಯಲಾಂಜನೇಯನೆ
ನೀರಜಾಕ್ಷನ ಹೆಳವನಕಟ್ಟೆರಂಗನ ಪ್ರಿಯದಾಸನೆ ಕಲಿ ೫

## ೨೮

ಮಂಗಳ ಮುಖ್ಯಪ್ರಾಣೇಶಗೆ ಜಯ
ಮಂಗಳ ಮೂಜಗವಂದಿತಗೆ ಪ.

ಅಂಜನೆತನಯಂಗೆ ಮಾಪ್ರತಿ ಮಹಿಮಂಗೆ
ಕಂಜನಾಭನ ಕಾರ್ಯದನುಕೂಲಗೆ
ಸಂಜೀವನ ತಂದ ಸಾಹಸವಂತಗೆ ಶ್ರೀ
ರಂಜಿಪ ಹನುಮಗೆ ಮಂಗಳ ೧

ಆ ಮಹಗಡಲ ಲಂಘಿಸಿ ಹೋಗಿ ಲಂಕೆಯ
ಧಮಧುಮ ಮಾಡಿ ವನವ ಕಿತ್ತು

ರಾಮ ಮುದ್ರಿಕೆ ಜಾನಕಿಗೆ ತಂದಿತ್ತ
ಹೇಮಾದ್ರಿ ಹನುಮಗೆ ಮಂಗಳ ೨

ಸುತ್ತ ಸಾಗರ ಮಧ್ಯದಲ್ಲಿ ಲಂಕೆಯ
ಮುತ್ತಿ ವನಜಾಕ್ಷಿಯ ಮುಂದೆ ಬಂದು
ಹತ್ತು ತಲೆಯ ರಾವಣನೈಶ್ವರ್ಯವನಳಿದಗೆ
ಖ್ಯಾತ ಹನುಮಗೆ ಮಂಗಳ ೩

ಜಾತಿ ಬಂಧುಗಳ ಒಡಗೊಂಡು ಸಮುದ್ರದ
ಸೇತುವ ಕಟ್ಟಿ ಸಾಹಸದಿಂದಲಿ
ಸೀತಾಪತಿಯ ಬಲವ ನಡೆಸಿದ ಪ್ರ
ಖ್ಯಾತ ಹನುಮಗೆ ಮಂಗಳ ೪

ಈ ಕಾಡಕಪಿಯಲ್ಲ ನಿಮ್ಮ ಸೇವಕನೆಂದು
ಬೇಡವೆಂದು ಸೀತೆಯ ಭಯಬಿಡಿಸಿ
ಚೂಡಾರತ್ನ ಶ್ರೀ ರಾಮರಿಗಿತ್ತ ಬಂಟ
ಕೊಂಡಾಡಿಸಿಕೊಂಬಗೆ ಮಂಗಳ ೫

ಬಲ್ಲಿದ ರಾವಣೇಶ್ವರನ ಮಾರ್ಬಲವನು
ಕಲ್ಲು ಮರದೊಳಿಟ್ಟು ಕೆಡಹಿದಗೆ
ಜಲ್ಲುಕ ದೈತ್ಯರಿಗೆಲ್ಲ ಎದೆಯ ಶೂಲವಗಿದ
ಧಲ್ಲ ಹನುಮಗೆ ಮಂಗಳ ೬

ಬಲು ದೈತ್ಯರನೆಲ್ಲ ಗೆಲಿದು ಮುದ್ದೇನಹಳ್ಳಿಲಿ
ಸ್ಥಿರವಾಗಿ ನಿಂದು ಭಕ್ತರ ಹೊರೆವ
ಹೆಳವನಕಟ್ಟೆ ವೆಂಕಟೇಶನ ದೂತ
ಚಲದಂಗ ಹನುಮಗೆ ಮಂಗಳ ೭

## ೨೯

ಬಾರನ್ಯಾತಕೆ ನೀರೆ ನೀ ಕರೆತಾರೆ ಸುಗುಣ ಗಂಭೀರನ ಪ.

ಮೂರು ಲೋಕ ಸಂಚಾರ ಕರುಣಾಸಾಗರ
ತೇಜಿಯನೇರಿ ಮೆರೆವನ ಅ.ಪ.

ಕೋಮಲಾಂಗನ ಕಂತುದಹನನ ಸೋಮಾರ್ಕ ಶಿಖಿನೇತ್ರನ
ವಾಮದೇವನ ವನಜಭವಸಂಭವ ಮುನಿಸ್ತೋಮ ವಿನುತ
ಎನ್ನ ಪ್ರೇಮನ ೧

ನೀಲಕಂಠನ ನಿಗಮಸಾರನ ಬಾಲಶಶಿಧರ ಭರ್ಗನ
ಶೀಲಸದ್ಗುಣ ಫಾಲನೇತ್ರನ ಕಾಲಾಂತಕ ಎನ್ನ ಕಾಯ್ವನ ೨

ಮಂಗಳಾತ್ಮನ ಮಲ್ಲರಿಪುದಲ್ಲಣ ದೇವೋತ್ತುಂಗ ಹೆಳವನಕಟ್ಟೆ
ರಂಗಗತಿಸಖನಾದ ನೀಲಗಿರಿ ಲಿಂಗ ಮೂರುತಿಯ ೩

## ೩೦

ವಿಶ್ವಪತಿ ಇಂದುಶೇಖರ ಸುರಮಸ್ತಕಮಣಿ ಮನ್ಮಥರಿಪುವೆ
ವಿಸ್ತರಿಪೆನು ನಿಮ್ಮ ಮಹಿಮೆಯ ಜಗದೊಳು ಸ್ವಸ್ಥವಾಗಿ ಪ.

ಎಲ್ಲಿ ನೋಡಲು ಲಿಂಗಮಯವು ಅಲ್ಲಿಗಲ್ಲಿಗೆ ತೀರ್ಥಯಾತ್ರೆಯು
ಸೊಲ್ಲು ಸೊಲ್ಲಿಗೆ ಹರಮಹಾದೇವಂತೆಲ್ಲರು ಸ್ತುತಿಸುವರು
ಬಲ್ಲವರು ಇದು ಭಾವಿಸಿ ಕಾಶಿಗಿಂತ ಮಹಿಮೆ ವೆಗ್ಗಳವಹುದೆನುತ
ಸುಲಕ್ಷಣೆ ಶಿವಗಾತ್ರೆ ಶಿವನವಲ್ಲಭೆ ತ್ರಾಸಿನಲಿ ತೂಗುವಳು ೧

ನಾಟಕದಿ ನಾನಾಜನ್ಮದಿ ಬಂದು ದಾಟದಂತರವನಳಿದನು ಚಂದ್ರ
ಜೂಟ ಸಖನಂಘ್ರಿಗೆ ಪಾರ್ಥನು ಈ ಬಯಲಾದನು
ಸೂಟಿಯೆನಗಾಯಿತು
ಕೋಟಿತೀರ್ಥದಿ ಮಿಂದು ಮೈಯ ಕೋಟಲೆ ಸಂಸಾರಗಳೆಲ್ಲ
ದಾಟಿದೆನು ಇನ್ನು ಜನನಮರಣಗಳೆಂಬೋಪಾಯಗಳಿಲ್ಲವು ೨

ಕೂಪಾರದಲಿ ಬಂದು ಸೂಸುವ ತೆರೆಗಳು ಅಭ್ರದಿಂದಲಿ
ಅಪ್ಪಳಿಸಲು ಉನ್ನತ ಭ್ರಮೆಗೊಂಡಿದ್ದ ಕರ್ಮದ ಬಲಿಗಳು ಮಿಗಿಲಾದವು
ಉರ್ವಿಯೊಳಗುಳ್ಳ ಸಕಲನದಿಗಳನು ಗರ್ಭದಲಿ ಇಂಬಿಟ್ಟು ಮೆರೆದಂತಿಹ
ಸರ್ಬಗೂಡಿಸುವ ಸಿಂಧುರಾಜನಲಿ ಮಿಂದು ನಿರ್ಭಯಳಾದೆನು ೩

ಬಲಿದ ದನುಜನ ಭಾವಕ್ಕೆ ಮೆಚ್ಚಿ ಒಲಿದಷ್ಟವರವಿತ್ತ
ಸಿಲುಕಲು ಸುಲಭನೆಂದು ಹೇರಂಬನೊಳಿತ್ತು ನೆಲೆಗೊಳಿಸಿ
ಎಳೆದರೆ ಎಳೆಯಲೊಲ್ಲದೆ ಛಲವಿಡಿದ ಲಂಕಾಧಿಪತಿಯ ಅಹಂಕಾರ
ವಳಿದು ಇಂದ್ರಾದಿಗಳಿಗೆ ವರವಿತ್ತ ಮಹಾಬಲಲಿಂಗನ ಕಂಡೆ ೪

ಅನ್ನದಾ ಶತಶೃಂಗ ಪರ್ವತ ಪಶ್ಚಿಮದಿಂದ ಪಾತಾಳಗಂಗೆ ಸಹಿತಲಿ ಪ್ರ–
ಸನ್ನನಾಗಿ ನಿಂದ ಚೆನ್ನ ಹೆಳವನಕಟ್ಟೆರಂಗನ ಪ್ರಿಯ
ಪನ್ನಂಗಧರ ಪರಮಪವಿತ್ರ ಗೋಕರ್ಣೇಶನ ಕಂಡೆ ಪಾ–
ವನವಾಯಿತು ಎಲ್ಲಾ ಕುಲಕೋಟಿಯು ೫

## ೩೧

ರಕ್ಷಿಸೆ ಏಕನಾಥೆ ತಾಯೆ ದಯದಿಂದ ಎನ್ನನು
ಸೊಕ್ಕಿದ ದೈತ್ಯ ಸಂಹಾರೆ ಶರಣ ಜನೋದ್ಧಾರೆ ಪ.

ಶ್ರೀ ಶರ್ವಾಣಿ ಶಂಕರಿ ದುರಿತ ದುಃಖ ನಿವಾರಿ
ಶರಣರ ಸಲಹುವ ದಾತೆ ಖಳರೆದೆಗಂತೆ ನಿಡಿ
ಗುರುಳ ಬಾಲೆ ಪಲ್ಲವಪಾಣಿ
ಸುರರ ನಾಯಕಿ ಅಖಿಲದೇವಮಾತೆ ವಿಖ್ಯಾತೆ ೧

ಅಳುವಾಡುವ ರಂಗನ ಅದೇನರಿತು ಭಂಗ
ಬಾಳ ಬಡಿಸಿದೆಯವ್ವ ಭಕ್ತರುದ್ಧಾರಿ
ಕಾಳಗದೊಳು ಕಂಠೀರವೆ ಕರೆದಭಯವನೀವೆ
ಪೇಳಲೆನ್ನಳವೆ ಸುಕೃತ ಪಂಥಗಾರ್ತಿ ೨

ಹಿಂಡು ಭೂತಂಗಳಿಗೆಲ್ಲ ಹೆಚ್ಚಿನ ಬಿರುದನೆ ತಾಳ್ದೆ
ಚಂಡಿ ಚಾಮುಂಡಿ ತ್ರೈಲೋಕ್ಯನಾಥೇ
ಅಂಡಪವಿತ್ರೆ ಶುಭಗಾತ್ರೆ ನಂಬಿದ ಭಕ್ತರ ಸಂಪ್ರೀತೆ
ಕಂಡು ನಮಿಸುವರ ಕಾಯ್ವೆ ಕಾಮಿತದಾತೆ ೩

ಇಂದ್ರಾದಿ ದಿಕ್ಪಾಲಕರು ವಂದಿಸಿ ಸ್ತುತಿಮಾಡಲವರ
ಬಂಧನವ ಪರಿಹರಿಸಿದೆಯೆ ಚಂದ್ರಮುಖಿಯೆ
ಇಂದು ಬಂದ ಬಂಧನವ ಬಿಡಿಸಿ
ಎಂದೂ ಎನ್ನ ನೀ ಕಾಯೆ ತಾಯೆ ೪

ಮಲೆತ ಮಹಿಷಾಸುರನ ಕೊಂದೆ ಮಲೆಬೆನ್ನೂರಿನಲಿ ನಿಂದೆ
ಬಲುನೇಮವಂತೆ ಸಂತೆಹರವಿಲೆ ನಿಂತೆ
ಪುಲ್ಲಲೋಚನೆ ಪ್ರಖ್ಯಾತೆ ಪರಶುರಾಮನ ಮಾತೆ
ಹೆಳವನಕಟ್ಟೆ ರಂಗನ ಸಹೋದರಿ ೫

## ೩೨

ಬಟ್ಟೆಯ ನೆವದಿಂದ ಬಂದು
ತಟ್ಟ ಕವನೆ ಕಂಡು ಕಣ್ಣ ತೆರೆದ ಕೃಷ್ಣವೇಣಿ ನಿಮ್ಮ ಕಂಡೆ
ದುಷ್ಟ ಮಾನವರ ಬಾಧೆಗೆ ಅಂಜಿ ಇತ್ತ ಬಂದೆ
ಕಷ್ಟ ದುರಿತಗಳ ಕಳೆಯೆ ತಾಯೆ ಪ.

ಭೋರಿಡುವ ಮಳೆಗೆ ಹಲ್ಲುಗಿಟಗರಿದು ಶೀತತಲೆ–
ಗೇರಿ ಕಂಪಿಸಿ ನಡುಗುತ್ತ
ಜಾರಿ ಕೆಸರೊಳು ಬಿದ್ದು ಮತ್ತೇಳುತಲಿ
ದಾರಿಯನು ಕೇಳಿಕೊಳ್ಳುತ
ಕ್ರೂರವಾಗಿದ್ದ ಜಾಲಿಯ ಮುಳ್ಳನೆ ತುಳಿದು
ಹರಿ ನಾರಾಯಣ ಎನ್ನುತ
ಹಾರೈಸಿ ನಿಮ್ಮ ದರುಶನಕ್ಕೆ ನಾ ಬಂದೆ
ಘೋರ ದುರಿತವನು ಕಳೆಯೆ ತಾಯೆ ೧

ನಿತ್ಯ ಕಲ್ಯಾಣಿ ನಿರ್ಜರಸ್ತೋತ್ರೆ ಶುಭಗಾತ್ರೆ
ಪ್ರತ್ಯಕ್ಷ ವಿಷ್ಣುಜಾತೆ ಮಾತೆ
ವಿಸ್ತರಿಸಲಾರೆ ಶ್ರೀ ವಿಷ್ಣು ಸಂಪ್ರೀತೆ
ಸತ್ಪಾತ್ರ ಸಂಪೂಜಿತೆ ಪ್ರೀತೆ
ಸತ್ತು ಹುಟ್ಟುವ ಜನ್ಮ ಕೋಟಲೆಯ ಖಂಡ್ರಿಸೆ
ಪತಿತ ಪಾವನ ಚರಿತೆ
ವ್ಯರ್ಥವಾಯಿತು ಜನ್ಮ ಸಾರ್ಥಕವ ಮಾಡಮ್ಮ
ಮುಕ್ತಿಸಾಧನದಾತೆ ಮಾತೆ ೨

ಸುರಗಂಗೆ ಕೃಷ್ಣಮಲಾಪಹಾರಿ ಮೂವರು ಕೂಡಿ
ಬೆರೆದಿದ್ದ ಸಂಗಮದಲ್ಲಿ
ಅರಿಸಿಣ ಅಕ್ಷತೆ ಗಂಧ ಕುಂಕುಮ ತಾಂಬೂಲಗಳ
ಹರುಷದಿಂದರ್ಪಿಸುತಲಿ
ಥರಥರದಿ ನೆರೆದ ಮುತ್ತೈದೆಯರೆಲ್ಲರು
ಮರದ ಬಾಗಿನವ ಕೊಡುತಲಿ
ಹರುಷದಿಂದಿಪ್ಪುದನು ಕಂಡೆ ಹೆಳವನಕಟ್ಟೆ
ಅರಸು ರಂಗನ ಕೃಪೆಯಲ್ಲಿ ತಾಯೆ ೩

## ೩೩

ಎಂದು ಕಾಹು(ಣು?)ವೆ ಎನ್ನ ಮನೋಹರ
ಎಂದಿ[ಗೆಕಾ] ಹುದಿನ್ನೆಂದಿಗೆ
ಬಂದೆ ಭವಭವಭವವೀ ದುಃಖದಿ
ನೊಂದೆನೊ ರಂಗನಂಘ್ರಿ ಚರಣವ ಪ.

ಮಂಗಳಾಂಗನ ಮಾಧವನ ಕೋಟಿ
ಅಂಗಜಜನಕವಿಲಾಸನ
ಗಂಗಾಜನಕನ ಗರುಡವಾಹನ
ತುಂಗವಿಕ್ರಮನಂಘ್ರಿ ಚರಣವ ೧

ಕಂತುಜನಕನ ಕಮಲನಾಭನ
ಸಂತತದ ಸರ್ವೇಶನ
ಯಂತ್ರವಾಹಕ ಎನ್ನ ಒಡೆಯನ
ಚಿಂತಾಯ[ಕ]ನ ಶ್ರೀ ಚೆಲುವಚರಣವ ೨

ಪರಮಪುರುಷನ ಪುಣ್ಯನಾಮನ
ಶರಣುಜನಸರ್ವೇಶನ
ಕರುಣಿ ಹೆಳವನಕಟ್ಟೆರಂಗನ
ಚರಣ[ವ]---------- ೩

## ೩೪

ಏನಿದು ಬಯಲ ಪಾಶ ನೋಡಿದರಿಲ್ಲಿ
ಏನು ಹುರುಡುಗಾಣೆನೊ
ನಾನಾಜನ್ಮದಿ ಬಂದು ಹೊಂದಲಾರೆನು ನಿನ್ನ
ಧ್ಯಾನವ ಕೊಡೊ ಅಭಿಮಾನದೊಡೆಯ ರಂಗ ಪ.

ನೀರಬೊಬ್ಬುಳಿಯಂದದ ದೇಹವ ನೆಚ್ಚಿ
ದೂರ ಹೊತ್ತೆನು ಹರಿಯೆ ಯಾರು ಎನಗೆ ಸರಿಯಿಲ್ಲೆಂಬಹಂ-
ಕಾರ ಪ್ರಪಂಚದ ಬಂಧನದೊಳು ಸಿಲುಕಿ ನೊಂದೆನೊ
ಹರಿ ನಿಮ್ಮ ನಾಮವ ನೆನೆಯದೆ ಎಂದೆಂದಿಗೆನಗಿತ್ತು
ಸದ್ಗತಿ ತೋರೊ ೧

ಒಡವರಾಧಾರಿ ಕೇಳೊ ಸಂಸಾರದ
ಮಡುವಿನೊಳಗೆ ಧುಮುಕಿ
ಕಡೆಹಾಯಿಸೊ ಕೈಪಿಡಿದು ಕೃಪೆಯೊಳೆನ್ನ
ದಡವ ಸೇರಿಸೊ ಜಗದೊಡೆಯ ಶ್ರಿರಂಗಯ್ಯ ೨

ಸುತ್ತೆಲ್ಲ ಬಂಧು ಬಳಗ ನವಮಾಸದಿ
ಹೊತ್ತು ಪಡೆದ ಜನನಿ

ಪುತ್ರ ಸಹೋದರರ ಘಳಿಗ್ಯಗಲಲಾರದೆ
ಮತ್ತೆ ಯಮನವರೊಯ್ವಾಗ ಯಾರು ಸಂಗಡ ಇಲ್ಲ ೩

ಆಸೆಯೆಂಬುದು ಬಿಡದು ಈ ಭುವನದೊಳ್
ಲೇಸುಗಾಣೆನು ಹರಿಯೆ
ಭಾಷೆಯ ಕೊಡು ಮುಂದೆ ಜನುಮಬಾರದ ಹಾಗೆ
ಈಶಸನ್ನುತ ಹೆಳವನಕಟ್ಟೆರಂಗಯ್ಯ ೪

## ೩೫

ಕಡೆಗಣ್ಣಲಿ ನೀ ನೋಡದಿರೆನ್ನಯ್ಯ ಬಿಡಬೇಡವೊ ಕೈಯ್ಯ
ಬಡವರ ಬಂಧು ಬಹುಕೃಪಾಸಿಂಧು
ಒಡೆಯ ನೀನಲ್ಲದೆ ಎನಗೆ ಬ್ಯಾರಿಲ್ಲವೊ ಪ.

ಶತ ಅಪರಾಧವ ಮಾಡಿದೆನಯ್ಯ ಸೇರಿದೆ ನಾ ನಿನ್ನ ಬೆನ್ನ
ಅತಿಪಾತಕಿ ಅಜಾಮಿಳನ ಉದ್ಧರಿಸಿದೆ
ಪೃಥಿವಿಯೊಳಗೆ ಬಿರುದಾಂತ ಶ್ರೀಕಾಂತ ೧

ನೆಲೆಗಾಣದೆ ನಾನಾಪರಿ ಚಿಂತೆಗೆ ಒಳಗಾದೆನೊ ನಾಹೀಗೆ
ಬಳಲಿಸಬ್ಯಾಡವೊ ಭಕ್ತಕುಟುಂಬಿ
ನಳಿನದಳಾಂಬಕ ನೀ ಸಲಹೆನ್ನನು ೨

ಸಾರಿ ಹೇಳುವೆ ಎನ್ನ ಬಳಗದ ಅರಭಾರವು ನಿನ್ನದು
ಹೇರೊಪ್ಪಿಸಿದ ಮೇಲ್ಯಾತರ ಸುಂಕವು
ಕಾರುಣ್ಯನಿಧಿ ಹೆಳವನಕಟ್ಟೆ ರಂಗಯ್ಯ ೩

## ೩೬

ಕಾಯೊ ಕರುಣಾಕರನೆ ನೀಯನ್ನಾ
ಕಾಯೋ ಅನಾಥರಕ್ಷಕ ದಯಾಸಿಂಧೂ ಪ.

ಕಾಯೊಯನ್ನನು ಕರವಿಡಿದು ಕೃಪೆಯಿಂದ ನೀಯನ್ನಾ
ಕಾಯೊದೇವರದೇವ ಶ್ರೀ ವೆಂಕಟೇಶ್ವರನೆ ಕಾಯೊ ಅ.ಪ.

ನೀನಲ್ಲದೆ ಅನ್ಯತ್ರ ತಾಯಿ ತಂದೆಗಳಿಲ್ಲಾ
ನೀನಲ್ಲದೆ ಬಂಧುಬಳಗವೆನಗಿಲ್ಲಾ ನೀ
ಯನ್ನ ಕಾಯೊ ಶ್ರೀ ವೆಂಕಟೇಶ್ವರನೆ ೧

ತರುಳ ಕರಿಯಲು ಕಂಭದಿ ಬಂದು
ಹಿರಣ್ಯಾಕ್ಷಕನ ಕರುಳ ತೆಗದು ವನಮಾಲೆ ಹಾಕಿ ನಿಂದೀ
ನರಮೃಗರೂಪಿನಲಿ ಪ್ರಹ್ಲಾದಗೆ
ವರವಿತ್ತೆ ನೀಯನ್ನ ಕಾಯೊ ಶ್ರೀ ವೆಂಕಟೇಶ್ವರನೆ ೨

ಜಲದೊಳಗೆ ನೆಗಳೆಯು ಹಿಡಿದು
ಎಳೆಯುತ್ತಿರೆ ಬಹುಬಾಧೆಬಡಿಸೆ ನಿಮ್ಮ ನೆನೆಯಲು
ನಿಲ್ಲದೆ ಬಂದೊದಗಿನೆಗಳೆಯನು
ಶೀಳ್ದು ಕರಿರಾಜಗೊಲಿದು ರಕ್ಷಿಸಿದೊ ಶ್ರೀ ವೆಂಕಟೇಶ್ವರನೆ ೩

ದುರುಳದುಶ್ಯಾಸ ದ್ರೌಪತಿ ಸೀರೆಯನು ಸೆಳೆಯೆ
ಹರಿಣಾಕ್ಷಿ ಸಭೆಯೊಳಗೆ ಕೃಷ್ಣಾಯೆಂದುವದರೆ
ಪರಿಪರಿ ವಸ್ತ್ರವನು ಕೊಟ್ಟೆ ಅಭಿಮಾನವನು ಕಾಯ್ದೊ
ದೇವರದೇವ ಶ್ರೀ ವೆಂಕಟೇಶ್ವರನೆ ೪

ಶಂಖಚಕ್ರಧರ ನಿನ್ನ ಚರಣವನು ನಂಬಿದೆ
ಪಕ್ಷಿವಾಹನಸ್ವಾಮಿ ಕರುಣಾನಿಧೆ
ಹೆಳವನಕಟ್ಟೆಯೊಳು ನಿಂದು
ಭಕ್ತರನ್ನೆಲ್ಲಾ ಕಾಯ್ದ ದೇವರದೇವ ಶ್ರೀ ವೆಂಕಟೇಶ್ವರನೆ ೫

## ೩೭

ದಯಾಪೂರ್ಣ ಗುಣನಿಧಿಯೆ ದೀನರಕ್ಷಕನೆಂದು ಭಯದಿಂದ
ನಂಬಿದೆನೊ ರಂಗ
ಕೈವಿಡಿದು ಕಾಯದಿಹುದು ನಿನಗುಚಿತವೆ ಭಯರಹಿತ
ಗೋವಿಂದ ರಂಗ ಪ.

ಇಳೆಸೃಷ್ಟಿಗಾಧಾರನೆಂಬ ಬಿರುದುಳ್ಳಡೆ ಜಗನ್ಮಯನೆ ಚಿನ್ಮಯರೂಪ ರಂಗ
ಪ್ರಿಯದಿಂದ ಭಜಿಸುವರ ಭಕ್ತವತ್ಸಲ ಏಕೋದೇವ
ನೀನಾದ್ಯಯ್ಯ ರಂಗ ೧

ಸುಜನಮಂದಾರ ಸರಸಿಜಭವಪಿತ ನಿನ್ನ ಪ್ರಜೆಗಳು ಪೊಗಳುತ್ತಿಹರೆ ರಂಗ
ನಿಜವಾಗಿ ನೆನೆವರ ಹೃದಯಹೃತ್ಕಮಲ ಮನಸಿಜ ಜನಕ
ಮುರಹರನೆ ರಂಗ ೨

ಸುಜನರೊಳಗೆನ್ನ ಕುಹಕವ ಮಾಡದೆ ನಿನ್ನ ಭಜಕನೆಂದಿರಲಾಗಿ ರಂಗ
ಗಜರಾಜವರದ ಗಂಗಾಜನಕ ಸಲಹೆನ್ನ
ಭುಜಗೇಂದ್ರಶಯನ ಶ್ರೀರಂಗ ೩

ಧಾತ್ರಿಗಾಧಾರ ಅನಾಥರಕ್ಷಕನೆ ದಯವ್ಯಾತಕೆನ್ನೊಳಿಲ್ಲ ರಂಗ
ವಿಹಿತವೆ ನಿನಗೆ ನಡುನೀರೊಳಗೆ ಕೈಬಿಡುವುದು ಶ್ರೀಕಾಂತ
ಕಡೆಹಾಯಿಸೊ ರಂಗ ೪

ನೋಡೆ ಶ್ರೀ ಹರಿಯೆ ನೀನಲ್ಲದನ್ಯತ್ರ ದಾತ್ರರಿಲ್ಲವೊ ರಂಗ
ನೀ ಪರಂಜ್ಯೋತಿಮೂರುತಿಯೆಂದು ನಂಬಿದೆನು ಅಪಾರ
ಮಹಿಮ ಶ್ರೀರಂಗ ೫

ಕೋಪವನು ಬಿಡು ಎನ್ನ ಕುಂದನೆಣಿಸದಿರಯ್ಯ ಆಪತ್ಬಂಧು ಶ್ರೀರಂಗ
ದ್ರೌಪದಿವರದ ಹೆಳವನಕಟ್ಟೆರಂಗಯ್ಯ ಲಕ್ಷ್ಮೀಪತಿ
ಸಲಹಯ್ಯ ರಂಗ ೬

## ೩೮

ನಂಬಿದೆ ನಂಬಿದೆ ಅಂಬುಜಾಕ್ಷನೆ ನಿನ್ನ
ನಂಬಿದ ಭಕ್ತರಿಗೆ ಬೆಂಬಲನಾಗಿರುವನೆ ಪ.

ಮೊರೆಯಿಡೆ ದ್ರೌಪದಿ ತ್ವರಿತದಿ ಪೋಗುತ
ಪೊರೆದ ಮಹಾನುಭಾವ ಮುರಹರನೆ ನಿನ್ನ ೧

ಶಕ್ತನೆ ನಿನ್ನ ನಾ ಭಕ್ತಿಯಿಂ ಭಜಿಸುವೆ
ಭಕ್ತರಿಗೆಲ್ಲ ನೀನು ಮುಕ್ತಿಯ ಕೊಡುವನೆ ೨

ಧರೆಯೊಳು ರಾಜಿಪ ವರ ಹೆಳವನಕಟ್ಟೆ
ಗಿರಿಯೊಳು ನೆಲಸಿಹ ಪರಮಪುರುಷ ರಂಗ ೩

## ೩೯

ನಿನ್ನ ನಂಬಿದವರ ಕಾಯೊ ನಿಜವುಳ್ಳ ದೇವ
ಎನ್ನನು ಉದ್ಧರಿಸಿ ಕಾಯೊ ಕರುಣಿವೆಂಕಟ ಪ.

ಸುರಪತಿಯು ಮುನಿದು ಮಳೆಗರೆಯಲೇಳು ದಿನವೂ ಬಿಡದೆ
ತುರುಗಳೆಲ್ಲ ಸೊರಗಿ ಬಾಯ ಬಿಡುತಿರಲು
ಬೆರಳಿನಿಂದ ಗೋವರ್ಧನ ಗಿರಿಯನ್ನೆತ್ತಿ ಗೋವ್ಗಳನು
ದ್ಧರಿಸಿ ಕಾಯ್ದೆ ಕರುಣಾಸಿಂಧು ಕಮಲಲೋಚನ ೧

ಮಡುವಿನೊಳಗೆ ಮಲೆತನೀರ ಕುಡಿಯ ಬಂದಾಗಜವ ನೆಗಳು
ಪಿಡಿದು ಕಾಲಕಚ್ಚಿ ಭಂಗಬಡಿಸುತ್ತಿರಲು
ತಡೆಯಲಾರದೆ ಪ್ರಾಣ ಬಿಡುವ ಸಮಯದಲ್ಲಿ ಬಂದು
ಕೆಡಹಿ ಚಕ್ರದಿಂದ ನೆಗಳ ಕರಿಯ ಸಲಹಿದೆ ೨

ಮತ್ತೆ ಮಂದ ಜ್ಞಾನದಿಂದ ಮೈ ಮರೆದು ಬರಲು ಸ್ತನವ
ತುತ್ತು ಮಾಡಿ ಪಿಡಿದು ಕುದುರೆ ಕ್ರೂರ ದಂತದಿ
ಕತ್ತರಿಸುವ ಸಮಯದಲ್ಲಿ ಕಡೆಮಾಡಿ ಕಾಯೆನ್ನ
ಕರ್ತು ಹೆಳವನಕಟ್ಟೆ ಕರುಣಿ ವೆಂಕಟ ೩

## ೪೦

ಪದುಮನಾಭನೆ ನಿನ್ನ ಪಾದ ಕಿಂಕರ ನನ್ನ ಕೈಬಿಡು–
ವುದುಚಿತವೇ ರಂಗ ಪ.

ಮುದದಿಂದ ನಿನ್ನ ಪಾದಗೆರಗುವೆ ನಾನು ತ್ವರಿ–
ತದಿ ನೀ ಕಾಯೊ ಎನ್ನೊಡೆಯ ರಂಗ ಅ.ಪ.

ಅಜಗರಶಯನನೆ ಬುಧಜನ ನಮಿತನೆ
ತ್ರಿಜಗವಂದಿತಪಾದ ಪದುಮಜ ಜನಕನೆ ೧

ಶಿಶುವಾಗಿ ಗೋಕುಲದ ಪಶುಗಳ ಸಲಹಿದೆ
ಶಶಿಭೂಷಣಸಖ ಶಿಶುವ ಕಾಪಾಡೊ ೨

ಸಾಂದೀಪಗೊಲಿದೆ ಸಂದೇಹವಿಲ್ಲ
ತಂದೆ ಹೆಳವನಕಟ್ಟೆ ರಂಗ ಕೃಪಾಂಗ ೩

## ೪೧

ಪಾಪಿಯೊಳು ನಾ ಬಂದೆ ಪರದೇಶಿ ನಾನಾದೆ
ಕಾಪಾಡುವರ ಕಾಣೆ ಕೈಪಿಡಿ (ದು)
ಆಪತ್ತು ಬಂದ ಕಾಲಕ್ಕೆ ಆರಯ್ವರೊಬ್ಬರಿಲ್ಲ
ಶ್ರೀಪತಿಯೆ ಕಡೆಹಾಯಿಸೊ
ತಂದೆ ತಾಯೆಂಬುದನು ನಾ–
ನೊಂದು ಗುರತನರಿಯೆ ನಿಮ್ಮ ಕಂದ –
ಳೆಂದೆನಿಸಿ ಕಡೆಹಾಯಿಸೊ ಹೆಳವನಕಟ್ಟೆರಂಗ

## ೪೨

ಭಕ್ತವತ್ಸಲನೆಂಬ ಬಿರುದು ಬಿಡದಿರು ದೇವ
ಬಹು ಪರಾಕೆಲೊ ಮುರಾರಿ ಪ.

ಶಕ್ತ ನೀನೆಂದು ನಂಬಿರುವೆ ಕೃಪಾಸಿಂಧು
ರಾಕ್ಷಸಾಂತಕ ಸಲಹೊ ರಾಜೀವದಳನೇತ್ರ ಅ.ಪ.

ಮತ್ತಗಜ ಮೈಮರೆದು ಸುತ್ತಿ ಕೆಸರೊಳು ಬಿದ್ದು
ಶಕ್ತಿ ಹೀನನಾಗಿ ಏಳದಂತಾಗಿದೆ
ಮತ್ತಾರಿಗಳವಲ್ಲ ಮಂದರಾದ್ರಿಧರನೆ
ಎತ್ತಿ ಕಡೆಹಾಯಿಸೊ ಎನ್ನೊಡೆಯ ಶ್ರೀ ಹರಿಯೆ ೧

ನಿಂದ ನೆಲ ಮುನಿಯುತಿದೆ ನಿಪುಣತನವಡಗಿತು
ಮಂದಮತಿ ವೆಗ್ಗಳಿಸಿ ನೆಲೆಗಾಣೆ ಮುಂದೆ
ತಂದೆ ನೀನಲ್ಲದಿನ್ನಾರು ರಕ್ಷಿಪರಯ್ಯ
ಬಂಧನವ ಪರಿಹರಿಸೊ ಭಯನಿವಾರಣ ಹರಿಯೆ ೨

ಕೊಂಡೆಯರ ಕೆಡಮೆಟ್ಟಿ ಕುಹಕಿಗಳ ಮಸ್ತಕವ
ಚೆಂಡಾಡಿದ ಚಿನ್ಮಯರೂಪ ನೀನು
ದಿಂಡರಿದು ದುರುಳರನು ದುರಿತಗಳ ಪರಿಹರಿಸಿ
ಪಾಂಡವರಿಗೊಲಿದು ಪಾಲಿಸಿದೆ ಪುಂಡರೀಕಾಕ್ಷ ೩

ನಾಲ್ಕು ದಿಕ್ಕಿಗೆ ನಾಲ್ಕು ಪರಿಯ ಬಂಧನದಿಂದ
ವ್ಯಾಕುಲದಿ ಕೃಷ್ಣಮೃಗವು ಎದೆಗುಂದಿರೆ
ನೀ ಕರುಣಿ ಸಮಯದಲಿ ವೃಷ್ಟಿಯ ಕರೆದು
ಜೋಕೆಯಲಿ ಪಥವನೇರಿಸಿದ್ಯೊ ಜಗದೀಶ ೪

ನಿನ್ನನೆ ಪೂಜಿಪೆನು ನಿನ್ನನೆ ಪಾಡಿ ಪೊಗಳುವೆನು
ನಿನ್ನನೆ ನಂಬಿದವಳಿಗಿಂತ
ಉನ್ನತವಾದ ಕಂಟಕವು ಬಂದಿದೆ ಕಾಯೊ
ಪನ್ನಗಶಯನ ಹೆಳವನಕಟ್ಟೆ ರಂಗಯ್ಯ ೫

## ೪೩

ಭಕ್ತಳ ಬನ್ನ ಪರಾಕು ಭಾಗ್ಯದ ನಿಧಿಯೆ ಪ.

ನಿನ್ನ ನಂಬಿದೆ ನೀರಜಾಕ್ಷ ಪರಾಕು
ನಿನ್ನ ರನ್ನೆಯ ಒಲುಮೆ ಬೇಕು ಪರಾಕು
ಅನ್ಯರ ಸಂಗವನೊಲ್ಲೆ ಪರಾಕು
ಎನ್ನಪೇಕ್ಷೆಯ ಸಲಿಸೊ ಪರಾಕು ೧

ಶೇಷಶಯನ ಶ್ರೀನಿವಾಸ ಪರಾಕು
ಸಾಸಿರನಾಮದ ಒಡೆಯ ಪರಾಕು
ದೋಷ ದುರಿತಹರ ಸ್ವಾಮಿ ಪರಾಕು
ಭಾಷೆ ಪಾಲಿಪುದೆನ್ನ ವಾಸುದೇವ ಪರಾಕು ೨

ರತಿಪತಿಪಿತ ಮಾಧವನೆ ಪರಾಕು
ಅತಿರೂಪ ಎನ್ನಯ್ಯನೆ ಪರಾಕು
ಹಿತ ವಿರಹಿತರ ಕಾಯೊ ಪರಾಕು
ಕರ್ತು ಹೆಳವನಕಟ್ಟೆರಂಗ ಪರಾಕು ೩

## ೪೪

ಮನದ ಚಿಂತೆಯಬಿಡಿಸೊ ಮಾಧವ ಮುಕುಂದ ಹರಿ
ದನುಜಾರಿದಯಾವಾರಿಧಿ
ಅನುದಿನದಿ ನಿಮ್ಮ ಚರಣವ ನಂಬಿದವರಿಗಿಂಥ
ಬಿನುಗುದುರಿತಗಳು ಬಾಧಿಸುವುದ್ಯಾತಕೊ ಸ್ವಾಮಿ ಪ.

ತರುಣಿಕುಲರಾಮನೊಳು ತೊಡಕು ಬೇಡವು ಸೀತೆ(ಯ)
ಹರಿಗೆ ಒಪ್ಪಿಸು ಎನಲು
(ಮೊರೆದು) ಕೋಪದಲಿ ದಶಕಂಠ ತನ್ನನುಜನ
ಊರ ಹೊರಗೋಡಿಸಿರಲು
ಭರದಿಂದ ಬಂದು ಮರೆಹೊಗಲು ವಿಭೀಷಣನು
ಚರಣಕಮಲಕೆ ಎರಗಲು
ಕರವ ಪಿಡಿದೆತ್ತಿ ಅಭಯವನಿತ್ತು ಲಂಕೆಯ
ಸ್ಥಿರಪಟ್ಟಕಟ್ಟಿದ ಕರುಣಾಳುಗಳ ದೇವ ೧

ಒದೆದೆಳೆದು ಪತಿಗಳೈವರ ಮುಂದೆ ದ್ರೌಪದಿಯ
ನಡುಸಭೆಯೊಳು ನಿಲ್ಲಿಸಲು
ಉಡುವ ಸೀರೆಯ ಸೆಳೆವೆನೆಂದು ದುಶ್ಯಾಸ(ನ) ಕೈ
ದುಡುಕುತಿರಲಾಕ್ಷಣದಲಿ
ಕೆಡುವದಭಿಮಾನ ಶ್ರೀ ಹರಿ ನೀನೆ ಕಾಯೊ ಎನ್ನಂ–
ದೊದರುತಿರಲು
ನುಡಿಯಲಾಲಿಸಿ ನಾನಾಪರಿಯ ವಸ್ತ್ರವನಿತ್ತು
ಉಡಿಸಿ ಅಭಿಮಾನ ರಕ್ಷಿಸಿದಂಥ ಶ್ರೀಕಾಂತ ೨

ಉತ್ತಾನಪಾದರಾಜ (ನ)ಣುಗ ತಮ್ಮಯ್ಯನ
ಮತ್ತ ತೊಡೆಯೇರಿಇರಲು
ನಿತ್ಯದಲಿ ಸುರುಚಿ ಸುನೀತಿ ಕುಮಾರಕನ
ಎತ್ತಿ ಕಡೆಯಕ್ಕೆ ನೂಕಲು

ಪ್ರತ್ಯಕ್ಷವಾಗಿ ಪಾಲಿಸಿ ಧ್ರುವಗೆ ಪದವಿಯ –
ನಿತ್ತ ವಿಚಾರವಿಲ್ಲದಂತೆ
ಸತ್ಯಮೂರುತಿ ಹೆಳವನಕಟ್ಟೆರಂಗಯ್ಯ
ಭಕ್ತವತ್ಸಲನೆಂಬೊ ಬಿರುದು ನಿನ್ನದು ಸ್ವಾಮಿ ೩

## ೪೫

ಮನ್ನಿಸ್ಯಾದವಾ ಮಮತೆಯಿಂದಾಲೆನ್ನ ಮಾಧವಾ ಪ.

ನೀರಜಾಕ್ಷನೆ ಪಾಲಿಸು ಜಗದ್ಭರಿತವಾಸನೆ
ಘೋರ ಸಂಸಾರಕ್ಕೆ ಸಿಲ್ಕಿ ಘಾಸಿಯಾಗನೆಂದಾಮೋಸವಾಗಿ
ಮೂರುದಿನದ ಬಾಳ ನೆಚ್ಚಿ ಘಾಸಿಯಾದೆನು
ನಾರಾಯಣ ನಿಮ್ಮ ನೆನೆವೆನನುದಿನಾ ೧

ಬಿಸಜನ್ನೈಯ್ಯನೆ ಶ್ರೀತುಲಸಿಮಾಲಾ ಭೂಷನೆ
ಹಸಿವು ತೃಷೆಯು ನಿದ್ರೆಯಿಂದಾ ಹೊತ್ತುಗಾಣೆನ್ನೈಯ್ಯಾ
ದೆಸೆಗೆದೆಸೆಗೆ ಇಂದ್ರಿಯಗಳು ಎಳೆದು ಕಾಡುತಾರ್ರೈಯ್ಯಾ
ವಸುಧಿಗೊಡೆಯ ನಿಮ್ಮ ನೆನೆಯದೆ ಮುಗ್ಧಳಾದೆನು ೨

ದುರಿತನಾಶನೆ ಪಾಲಿಸು ಜಗದ್ಭರಿತವಾಸನೆ
ನಿರುತ ವ್ಯಾಧಿಯಿಂದ ಮಂದಳಾದೆನು ಸರ್ವೇಶನೆ
ಮರುತನಂತೆ ಮನಸ್ಥಿರವ ಮಾಡಿಸೋ ಲಕ್ಷ್ಮೀಶ
ಕರ್ತೃ ಹೆಳವನಕಟ್ಟೆ ವೆಂಕಟೇಶನೆ ೩

## ೪೬

ಶ್ರೀ ವೆಂಕಟೇಶ ಎನ್ನ ಸಲಹಲ್ಯಾಕೆ ಬಳಲುವೆ ಪ

ಬಂದ ದುರಿತ ಪರಿಹರಿಸೊ ಬಂದು ತಾಪವನ್ನು ಬಿಡಿಸೊ
ಮಂದ ಬುದ್ದಿಯನ್ನೆ ಕೆಡಿಸೊ ಮದನನಯ್ಯ ಮಮತೆ –
ಯಿಂದ ಇಂದು ಎನ್ನ ಮಾತ ಲಾಲಿಸೊ
ತಂದೆ ಕುಂದು ಎಣಿಸದೆನ್ನ ಪಾಲಿಸೊ ೧

ನಕ್ರನ ಬಾಧೆಯೊಳಗೆ ಸಿಲುಕಿ ಗಜವು ನರಳುತಿರಲು ತ್ರಿ–
ವಿಕ್ರಮನೆ ಸಲಹೊಯೆಂದು ಕರೆಯಲಾಗ ನಕ್ರನ
ಚಕ್ರದಿಂದ ಹೊಡೆದು ಕೆಡಹಿದೆ ಆ ಗಜಕೆ ಬಂದ
ವಕ್ರವನ್ನು ಬಿಡಿಸಿ ಸಲಹಿದೆ ಎನ್ನ ಮನದ ವಕ್ರವನ್ನು ಬಿಡಿಸಲಾಗದೆ ೨

ತರಳ ಧ್ರುವನು ತನ್ನ ಪಿತನ ತೊಡೆಯ ಮ್ಯಾಲೆ ಬಂದು ಕುಳ್ಳಿರೆ
ತರವೆ ನಿನಗೆ ಎಂದು ಸುರುಚಿ ತವಕದಿಂದ ಎಳೆಯಲವನ
ಭರದಿ ಬಂದು ನಿನ್ನ ಚರಣವ ಭಜಿಸಲವಗೆ
ಸ್ಥಿರಪದವಿಯಿತ್ತೆ ಕರುಣದಿ ನಾನು ನಿನ್ನ ಸ್ಮರಣೆಗೈವೆದಿವ್ಯನಾಮವ ೩

ಆರು ಸಲಹುವರು ಎನ್ನ ಪಾರುಗಾಣಿಸುವರ ಕಾಣೆ
ಸೇರಿದೆನೊ ಶೇಷಶಯನ ಶ್ರೀನಿವಾಸ ಎನ್ನನು
ದ್ಧಾರ ಮಾಡಲಾಗದೆ ಸಕಲ ಆರಭಾರ ನಿನ್ನ
ಸೇರಿತಲ್ಲವೆ ಬೇರೆ ವಿಚಾರವಿಲ್ಲದೆ ನಿನ್ನ ನಂಬಿದೆ ೪

ದುಷ್ಟ ದನುಜರನ್ನು ಮುರಿದು ಧಾರುಣಿಯೊಳು ಇರುವೆ ಎನ್ನ
ಕಷ್ಟವ ಬಿಡಿಸಿ ಕಾಯೊ ಕಮಲನಾಭ ಹೆಳವನ
ಕಟ್ಟೆವಾಸ ವೆಂಕಟೇಶನೆ ಸಕಲ ಭಾರ
ದೃಷ್ಟಿಯಿಂದ ಪೊರೆವೊ ದೇವನೆ ಕೃಷ್ಣಾ ಸೃಷ್ಟಿಗೊಡೆಯ
ಸುಜನಪಾಲನೆ ೫

## ೪೭

*ಆರಿಗಾದರು ಪೂರ್ವದ ಕಟ್ಟಳಿಯು ತಪ್ಪುದು ವಿಧಿಬರಹವು ಪ.

ಪೊಡವಿಭಾರವ ಪೊತ್ತು ಮೃಡಗೆ ಭೂಷಣನಾಗಿ
ಹೆಡೆಯಲ್ಲಿ ಮಾಣಿಕವಯಿಟ್ಟುಕೊಂಡು
ಬಿಡದೆ ಶ್ರೀಹರಿಗೆ ಹಾಸಿಗೆ ಆದ ಫಣಿಪಂಗೆ
ಅಡವಿಯೊಳಗಣ ಹುತ್ತ ಮನಿಯಾಯಿತ್ಯೆಯ್ಯಾ ೧

ಸುರಪತಿಯಗೆದ್ದು ಸುಧೆಯನೆ ತಂದು ಮತ್ತೆ ಮಾತೆಯ
ಸೆರೆಯ ಪರಿಹರಿಸಿ ಬಹುಶಕ್ತನೆನಿಸಿಕೊಂಡ

* ಈ ಕೀರ್ತನೆ 'ಕನಕದಾಸ'ರ ಅಂಕಿತದಲ್ಲೂ ದೊರೆಯುತ್ತದೆ.

ಹದಿನಾಲ್ಕು ಲೋಕನಾಳುವವನ ಹೊತ್ತು
ಇರುವವಗಾಯಿತು ಮನೆಯು ಮರದ ಮೇಲೆ ೨

ರಾಮಚಂದ್ರನ ಸೇವೆಮಾಡಿ ಮೆಚ್ಚಿಸಿಕೊಂಡು
ರಾವಣನ ಗರ್ವಮುರಿದು ಬಂದೂ
ರೋಮರೋಮಕೆ ಕೋಟಿಲಿಂಗಧರಿಸಿದ
ಹನುಮಂತಗೆ ಗ್ರಾಮಗಳ ಕಾಯ್ವುದಾಯಿತ್ತೈಯ್ಯಾ ೩

ಮೂಲೋ೯ಕಕಾಧೀಶ ಮುಕ್ಕಣ್ಣ ಶಿವನೆಂದು
ಸಾರುತಿದೆ ವೇದ ಸಟೆಯಲ್ಲವಿದು
ಪಾರ್ವತಿಗೆ ಪತಿಯಾದ ಕೈಲಾಸವಾಸನಿಗೆ
ಊರಹೊರಗಣ ಕಾಡ ಕಾಯ್ವುದಾಯಿತ್ತೈಯ್ಯಾ ೪

ಮೀರಲಳವಲ್ಲಾ ಮುನ್ನಿನಾ ಕರ್ಮವನು
ಕಾರಣಕರ್ತನಿಗಲ್ಲದೆ
ಮಾರಪಿತ ಹೆಳವನಾಕಟ್ಟೆರಂಗೈಯ್ಯನ
ಸೇರದ ಕಾಲವ್ಯರ್ಥವ್ಯಾದಿತ್ತೈಯ್ಯಾ ೫

## ೪೮

ಯಾಕೆ ಮರುಳಾದೆ ಹೀಂಗೆ ಎಲೆ ಮನವೆ
ಕಾಕು ಬುದ್ಧಿಯ ಬಿಡು ಬಿಡು ಸುಮ್ಮನೆ ಪ.

ಧನದಾಸೆಯನು ಮರಿ ಮನುಮಥನ
ಬಾಣಕಳುಕದಿರು ತೊಳಲದಿರು
ನೆಲದಾಸೆಗೆ ನೀನದರ
ಅನುವರಿತು ಹರಿಯ ಸ್ಮರಿಸು ಮನವೆ ೧

ಅನ್ಯರಾಗುಣ ದೋಷಯಣಿಸದಲೆ
ನಿನ್ನಿರವ ನೋಡು ಕಂಡ್ಯಾ ಮನವೆ
ಬಂಣಗಾರಿಕೆಯು ಬರಿದೆ ಔದಂಬ್ರ–
ಹಣ್ಣಿನಂತೀ ಕಾಯವು ಮನವೆ ೨

ತಮ್ಮ ಬುದ್ದಿ ತಲೆಗೆ ಸುತ್ತಿ ಸಂಸಾರ
ಭ್ರಮೆಗೊಂಡು ಬಳಲಾದಿರೋ
ಕಮಲಪತ್ರಕ್ಕೆ ಒಳಗಿನ ಜಲದಂತೆ
ನೆಲಕೆ ನಿರ್ಲೇಪನಾಗೋ ಮನವೆ ೩

ಈ ದೇಹ ಸ್ಥಿರವಲ್ಲವೊ ಕಾಲನಾ
ಬಾಧೆಗೊಳಗಾಗದಿರೋ ಮನವೆ
ಭೇದ ದುರ್ಗುಣವ ತ್ಯಜಿಸು ನೀ
ಗೇರುಬೀಜದಂದದಿ ತಿಳಿಯೊ ಮನವೆ ೪

ಮಾಡು ಹರಿಸೇವೆಯನ್ನು ಮನದಣಿಯೆ
ಬೇಡು ಹರಿಭಕ್ತಿಯನ್ನು
ಕೂಡು ಹೆಳವನಕಟ್ಟೆಯ ವೆಂಕಟನ
ಬೇಡಿ ಮುಕ್ತಿಯನು ಪಡೆಯೊ ಮನವೆ ೫

## ಪಾರಿಜಾತ

### ೪೯

ಶ್ಲೋಕ :ದ್ವಾರಾವತಿಯಲಿ ದನುಜದಲ್ಲಣ ಮುಕುಂದ
ಸಾರೆ ರುಕ್ಮಿಣಿಸಹಿತ ಆನಂದದಿಂದ
ವಾರಿಜಾಂಬಕ ವಾಲಗದೊಳು ಚಂದ
ನಾರಂದಮುನಿ ತಾ ಪಾರಿಜಾತವ ತಂದ ೧

ಪದ : ಬಲ್ಲಿದ ಮುನಿಯ ಕುಳ್ಳಿರಿಸಿದ ಸತ್ಕರಿಸಿದ ಪುಷ್ಪಯಾರಿಗೆ ಎಂದ
ವಲ್ಲಭೆರುಕ್ಮಿಣಿಗಲ್ಲದೆ ಬ್ಯಾರೆ ಸಲ್ಲದು ಎಲ್ಲ ನೀನು ಬಲ್ಲದೆ ಇಂತೆಂದ

ಈ ಸುದ್ದಿ ಸತ್ಯಭಾಮೆಗೆ ತಂದು ಹೇಳಿದರಂದು ಕೇಳಿದಳಾಕೆ ನಿಂದು
ತಲ್ಲಣಿಸುತ ಎದೆ ಧಿಗಿಲೆಂದು ಭುಗಿಭುಗಿಲೆಂದು
ಮನದಲ್ಲಿ ಅತಿನೊಂದು ೧

ಶ್ಲೋಕ : ಇಂದ್ರಲೋಕದ ಚಂದದ ಕುಸುಮವನ್ನು
ಮಂದಗಮನೆಯ ಮುಡಿಗೆ ತಾ ಮುಡಿಸಿದನು
ಎಂದು ಎನ್ನೊಳು ಎರವು ಇಲ್ಲವು ಕಾಣೆ
ಇಂದು ಮಾಡಿದ ಕುಹಕವ ಕೃಷ್ಣ ತಾನು ೨

ಪದ : ಹರಿಯು ಮಾಡಿದ ಮಾಟವನು ಕಂಡೆನು ನಾನು
ಇನ್ನಾರಿಗೆ ಪೇಳುವೆನು
ಪರಿಮಳದ ಪಾರಿಜಾತದ ಹೂವ ತಂದನು ಭಾಮೆ
ರುಕ್ಮಿಣಿ ತನ್ನ ಜೀವ
ಸರಿ ಬಂದ ಮಡದಿಗೆ ಮುಡಿಸಿದ ಶೃಂಗರಿಸಿದ
ಬಹುಪ್ರೀತಿ ಬಡಿಸಿದ
ಬರಿಯ ಮಾತಿನ ಬನ್ನಣೆಯಿಲ್ಲ ಸ್ನೇಹ ತನಗಲ್ಲಿ
ಠಕ್ಕುಠವಳಿಗಳಿಲ್ಲಿ ೨

ಶ್ಲೋಕ : ಮೆಚ್ಚಿ ಬಂದೆನೆ ಮೋಹಕ್ಕೆ ಮರುಳಾದೆನೆ
ಹಚ್ಚಿರೆ ಮಾತ ಹರಿಯು ತಾ ಕೇಳಿದನೆ
ನೆಚ್ಚಿ ಇದ್ದೆನೆ ಎನ್ನೊಳು ವಂಚಿಸಿದನೆ
ರಚ್ಚೆಗಿಕ್ಕಿದ ರಂಪು ಮಾಡಿದ ಕಾಣೆ ೩

ಪದ : ಮಾರನಟ್ಟುಳಿ ತಾಳಲಾರೆನೆ ಮುಖದೋರನೆ ಇನ್ನೇನು ತೆರನೆ
ತೋರಿಸೆ ಕೃಷ್ಣನ್ನ ಅಮ್ಮಯ್ಯ ಕೇಳು ದಮ್ಮಯ್ಯ
ಕಂತು ಕಮಲಜನಯ್ಯ
ಬಾರದಿದ್ದರೆ ಪ್ರಾಣ ಉಳಿಯದು ಮತ್ತೆ ಅಳಿವುದು
ಏನೆಂದು ತಿಳಿಯದು

ಸಾರಿದ ಸರಿಬಂದ ಸತಿಯ [ಳ] ಬಹುರತಿಯ[ಳ]
ಬಹು ಪ್ರೀತಿ ಇದ್ದವ[ಳ] ３

ಶ್ಲೋಕ :ಮಳೆ ಇಲ್ಲದ ಮೇಘವಿದ್ಯಾತಕ್ಕಮ್ಮ
ಬೆಳೆ ಇಲ್ಲದ ಭೂಮಿ ಮತ್ಯಾತಕಮ್ಮ
ಗಿಳಿಇಲ್ಲದ ಗೂಡು ತಾನ್ಯಾತಕಮ್ಮ
ತಾಳಲಾರೆನೊ ಶ್ರೀ ಕೃಷ್ಣನಿಲ್ಲದೆ ಎಮ್ಮ ೪

ಪದ : ಯಾಕೆನ್ನ ಬ್ರಹ್ಮ ಪುಟ್ಟಿಸಿದನೊ ಸೃಷ್ಟಿಸಿದನೊ
ಮಾತೆನ್ಯಾಕ ಪಡೆದಳೊ
ಸಾಕಿನ್ನು ಹೆಣ್ಣು ಜನ್ಮದ ಬಾಳು ಯಾತಕೆ ಹೇಳು
ತಾಕಲೆನ್ನಯ ಗೋಳು
ಕುಹಕ ಪೇಳ್ದು ನಾರದ ಸಿದ್ಧ ಎಂಬುದು ಬದ್ಧ
ಮೂರುಲೋಕ ಪ್ರಸಿದ್ಧ
ಶ್ರೀಕೃಷ್ಣಂಗೆ ಎನಗೆ ಭೇದವ ಮಾಡಿ ಹೋದನು
ಓಡಿ ತನಗ್ಯಾಕಿದು ಬ್ಯಾಡಿ ೪

ಶ್ಲೋಕ :ಬಿಸಜಾಕ್ಷನ ಬಹಳ ನಂಬಿದ್ದೆ ನಾನು
ವಶವಾದನೆ ಒಲಿದು ರುಕ್ಮಿಣಿಗೆ ತಾನು
ಶಶಿಮುಖಿಯಳೆ ಸವತಿ ಅಟ್ಟುಳಿ ಇದೇನು
ಆಸೆಬಟ್ಟೆನೆ ಬಹಳ ವಸುದೇವ ಸುತಗೆ ೫

ಪದ : ಸಿಟ್ಟಿನಿಂದತಿ ಘುಡಘುಡಿಸುತ ಆರ್ಭಟಿಸುತ
ಎಲ್ಲರೊಡನೆ ಕೋಪಿಸುತ
ತೊಟ್ಟತೊಡಿಗೆ ಈಡಾಡುತ ಬಿಸಾಡುವ
ನನಗ್ಯಾಕಿದು ಎಂದು
ಪಟ್ಟೆ ಮಂಚದ ಮೇಲೆ ಒರುಗುತ ತಾ ಎರಗುತ
ಮನದೊಳು ಮರುಗುತ
ಇಷ್ಟು ಮಾಡುವುದಿದು ನೀತವೆ ಪ್ರಖ್ಯಾತವೆ
ಸುರಪಾರಿಜಾತವೆ ೫

ಶ್ಲೋಕ : ದೇವಲೋಕದ ಹೂವ ತನಗಿಲ್ಲವಲ್ಲ
ಭಾವೆ ಎನ್ನೊಳು ಮುನಿಯದೆ ಬಿಡುವಳಲ್ಲ
ಆವ ಪರಿಯಲಿ ತಿಳಿದು ಹೇಳುವೆನು ಸೊಲ್ಲ
ಜೀವದೊಲ್ಲಭೆಯೊಡನೆ ಪಂಥವು ಸಲ್ಲ ೬

ಪದ : ಮಂದಗಮನೆ ಮುನಿದಿಹಳೊ ಎನ್ನ ಪ್ರಿಯೆಳೊ
ಎನ್ನೊಡನೆ ನುಡಿಯಳೊ
ಇಂದು ಅಲ್ಲಿಗೆ ಹೋಗದಿದ್ದರೆ ಇಲ್ಲಿದ್ದರೆ
ಅಪ್ರಬುದ್ಧನಾದರೆ
ಕುಂದು ಎನ್ನ ಮ್ಯಾಲಿಡುವಳೋ ಸ್ನೇಹ ಬಿಡುವಳೊ
ಕೋಪವನು ತಾಳುವಳೊ ಇಂ
ತೆಂದು ನುಡಿದ ಮುಕುಂದ ನಿತ್ಯಾನಂದನು
ಬಾಗಿಲೊಳು ನಿಂದನು ೬

ಶ್ಲೋಕ : ಚಿತ್ತದೊಲ್ಲಭೆ ಚದುರೆ ಮೋಹನಾಕಾರೆ
ಮುತ್ತುರತ್ನವ ಮನೆಯೊಳಗೆಲ್ಲ ಬೀರಿ
ಎತ್ತ ಹೋದಳೊ ಎನ್ನ ಪ್ರಾಣದ ನಾರಿ
ಸತ್ಯಭಾಮೆಯ ಸುಳುಹು ಕಾಣೆನು ತೋರಿ ೭

ಪದ : ಕನ್ನಡಿ ಕದಪಿನ ಜಾಣೆಯ ಸುಪ್ರವೀಣೆಯ
ಕೋಕಿಲವಾಣಿಯ
ಇನ್ನೆಲ್ಲಿ ಹೋದಳು ತೋರಿಸೆ ಹತ್ರ ಸೇರಿಸೆ ಬಂದೆನು
ಹಾರೈಸಿ ನಿಂತವರು ಕಣ್ಣು
ಸನ್ನೆಯ ಮಾಡಿ ತೋರ್ವದು ನೋಡಿ ಮೆಲ್ಲಗೆ
ಮಾ[ತಾ]ಡಿ ೭

ಶ್ಲೋಕ : ಹಾಸಿ ಮಲಗಿದ್ದ ಸತಿಯ ಕಂಡು
ಬೀಸಣಿಕೆಯಲಿ ಬೀಸಿದ ಕೃಷ್ಣ ತಾನು
ಸೂಸು ಪರಿಮಳ[ದ] ಪಾರಿಜಾತದ ಹೂವ ಹಾ–
ರೈಸಿ ಕಂಗಳು ತೀರ[ವು] ನೋಡಿದಳು ಕಾಂತೆ ೮

ಪದ : ಕಂಡಳು ಕಾರುಣ್ಯಮೂರ್ತಿಯ ಸತ್ಕೀರ್ತಿಯ
ಫಲ್ಗುಣನ ಸಾರಥಿಯ
ಇಲ್ಲಿಗ್ಯಾತಕೆ ಬಂದೆ ಹೋಗೆಂದು ಅತ್ತ ಸಾಗೆಂದು
ಇದು ಏನು ಸೋಗೆಂದು
ಹಿಂಡು ಸ್ತ್ರೀಯರ ಶಿರೋರನ್ನಳೆ ಮೋಹನ್ನಳೆ
ಮುನಿಸ್ಯಾತಕೆನ್ನೊಡನೆ
ಕಂಡ ಕನಸು ಎಂದು ಭಾವಿಸೆ ಎನ್ನ ಜೀವಿಸೆ
ಅಪರಾಧವ ಕ್ಷಮಿಸೆ ೮

ಶ್ಲೋಕ :ಅಕ್ಕರಿಂದಲೆ ರುಕ್ಮಿಣಿಗೆ ಇತ್ತ ಹೂವ
ಮಿಕ್ಕ ಸತಿಯರಿಗ್ಯಾತಕೆಂಬ ಭಾವ
ಕಕ್ಕುಲಾತಿಯ ಕಂಡೆ ನಿನ್ನಲ್ಲಿ ಜೀವ
ಸೊಕ್ಕಬ್ಯಾಡವೊ ಸಾಕು ಹೋಗೆಲೊ ಗೋವ ೯

ಪದ : ಮಲಯಜಗಂಧಿ ಮರನ ತಂದು ನಿಲಿಸುವೆನಿಂದು
ಮನ್ನಿಸೆ ಕೃಪಾಸಿಂಧು
ಬಲರಾಮ ನಂದಗೋಪನಾಣೆ ತಪ್ಪೆನು ಕಾಣೆ
ಕೋಕಿಲಸ್ವರಗಾನೆ
ಛಲವ್ಯಾತಕೆಂದು ತಕ್ಕೈಸಿದ ಸಂತೈಸಿದ ತೊಡೆಯಲ್ಲಿ
ಕುಳ್ಳಿರಿಸಿದ
ಹೆಳವನಕಟ್ಟೆಯ ರಂಗನು ಕೃಪಾಂಗನು
ದೇವೋತ್ತುಂಗ ವಿಕ್ರಮನು ೯

## ೫೦

ನಾರಾಯಣಯೆಂಬೊ ನಾಮವನು ನೆನೆದರೆ
ಹಾರಿ ಹೋಹುದು ಜನ್ಮಜನ್ಮದ ಪಾಪಗಳು
ಶ್ರೀರಮಣ ನಿಮ್ಮ ನಾಮಸ್ಮರಣೆ ನಿತ್ಯನಗೆ ದೊರೆಕಿಸಿ
ಮುಕ್ತಿದೋರಿಸು ಮುರಾರಿ ಪ.

ಸಕಲವೇದ ಪುರಾಣ ಶಾಸ್ತ್ರಗಳ ತಿಳಿದೋದಿ
ಭಕ್ತಿಯಲಿ ತಾಯತಂದೆಯ ಚಿತ್ತವಿಡಿದವರ
ರಕ್ಷಣ್ಯವನು ಮಾಡಿ ಜಗದೊಳಗೆ ಖ್ಯಾತಿಯಲಿ
ಸುಕುಮಾರನೆನಿಸಿಕೊಂಡು
ಪ್ರಕೃತಿಯಲಿ ಹೋಮಕ್ಕೋಸ್ಕರ ಸಮಿದೆ ತರಹೋಗಿ
ದುಷ್ಕೃತ್ಯದ ಫಲದಿಂದ ಅಂತ್ಯಜಳನು ಕಂಡು ಕಾ-
ಮುಕನಾಗಿ ಮೈಮರೆದು ಅಜಮಿಳ ತಾನು ಪಾತಕವೆಂದು
ಅರಿತರಿಯದೆ ೧

ನಿಲ್ಲು ನಿಲ್ಲೆಲೆ ಕಾಂತೆ ನಿನಗೊಲಿದೆ ನೀನಾರು
ಸೊಲ್ಲಿಸೆನ್ನೊಡನೆ ಸತಿಯರ ಕುಲಕೆ ಕಟ್ಟಾಣಿ
ಇಲ್ಲಿ ಬಾ ಅಂಜಬ್ಯಾಡೆಲೆ ಮುಗದವೆಂಗಳೆ
ಹುಲ್ಲೆನೋಟದ ಭಾವಕಿ
ಸಲ್ಲಿಲಿತ ಗಾತ್ರೆ ಸೊಕ್ಕಾನೆ ಮೆಲ್ಲಡಿಯವಳೆ
ಮಲ್ಲಿಗೆಗಂಧಿ ಮದನನ ಕೈಯ ಮಸೆದಲಗೆ
ಚೆಲ್ಲೆನ್ನಮ್ಯಾಲೆ ಕರುಣವನು ಕೋಮಲೆನಿಲ್ಲೆಂದು
ಸೆರಗ ಪಿಡಿದ ೨

ಎಲೊ ವಿಪ್ರ ಕೇಳು ನಾವು ಕುಲಹೀನರೆಮ್ಮನೆಯ
ಹೊಲಸಿನ ಮಾಂಸ ಗೋವಿನ ಚರ್ಮದ್ವಾಸಿಕೆಯು
ಎಲ್ಲವುಗಳ ರಾಶಿ ಬೊಗಳುವ ಹಿಂಡು ನಾಯಿಗಳು
ಬಲು ಘೋರ ಎನಿಸಿಪ್ಪುದು
ಬಲೆಗೆ ಸಿಕ್ಕಿದ ಪಕ್ಷಿ ಬೇಂಟೆಯವಗಲ್ಲದೆ

ಕುಲವ ಕೂಡುವದೆ ಕಾಮಿನಿ ಕೇಳು ನಿನ್ನೊಡನೆ
ಸಲೆ ಬಾಳಿ ಬದುಕಿ ನಾ ಸುಖದಲ್ಲಿ ಇಹೆನೆಂಬ
ಛಲವೊಂದೆ ಎನಗೆ ಎಂದ ೩

ವ್ಯರ್ಥ ಎನ್ನೊಡನೆ ಮಾತ್ಯಾಕೆಲೊ ವಿಪ್ರ
ಚಿತ್ತವೆನ್ನಲ್ಲಿ ಇದ್ದರೆ ಹೋಗಿ ನೀ ಎನ್ನ
ಹೆತ್ತ ತಂದೆಯ ಕೇಳು ಸಮ್ಮತವಾದರೆ ಮತ್ತೆ
ನಿನಗೊಲಿವೆನೆಂ[ದಳು]
ಅತ್ತ ಕಾಮಿನಿಯ ಒಡಗೂಡಿ ಆಕೆಯ ಪಿತನ
ಹತ್ತಿರಕೆ ಹೋಗಿ ಕೇಳಿದರಾತನಿಂತೆಂದ ಇಂಥ
ಉತ್ತಮದ ಕುಲವನೀಡಾಡಿ ನೀ ಪಾತಕದ
ಮೊತ್ತಕೊಳಗಾಗದಿರೊ ೪

ಆಗದಾಗದು ಎನ್ನ ಕುಲಬಂಧು ಬಳಗವನು
ನೀಗಿ ನಿಮ್ಮೊಡನೆ ಕೂಡುವೆನೆಂಬ ಮತವೆನಗೆ
ನಾಗಭೂಷಣನ ಪಣೆಗಣ್ಣಿಂದ [ಉರಿದನ] ಬಾಣತಾಗಿತೆನ್ನೆದೆಯನೆಂದ
ಕೂಗಿ ಹೇಳಿದೆ ನಿನ್ನ ಕುಲವಳಿಯದಿರೆಂದು
ಹೋಗಿ ಕೂಡೊ ಹೆತ್ತ ತಾಯಿತಂದೆಗಳ ಅದು
ಆಗದಿದ್ದರೆ ಆಚೆ ಮನೆಯೊಳಗೆ ನೀವಿಬ್ಬರಲ್ಲಿರಿ ಹೋಗ್ಯೆಂದನು ೫

ಹಾಲಂತ ಕುಲವ ನೀರೊಳಗದ್ದಿಪೂರ್ವದ
ಶೀಲವನಳಿದು ಸತಿಯೊಡಗೂಡಿ ತಾನು ಚಾಂ–
ಡಾಲತಿಗೆ ಹತ್ತುಮಕ್ಕಳ ಪಡೆದು ತಾನವರ ಲೀಲೆಯನು ನೋಡಿ ಹಿಗ್ಗಿ
ಆಲಂಬನದಲಿ ಅಜಾಮಿಳನು ಇರುತಿರಲಾಗ
ಕಾಲ ಬಂದೊದಗಿ ಕರೆಯಿರೊ ಪಾತಕಿಯನೆಂದು
ಜೋಲುದುಟಿ ಡೊಂಕು ಮಾರಿಲಭ್ರದಿಂ
ಯಮನಾಳುಗಳು ಇಳಿದರಾಗ ೬

ಎಡೆಗೈಯ ಪಾಶಗಳು ಹಿಡಿದ ಚಮ್ಮಟಿಗಳು
ಒಡನೊಡನೆ ಚವುರಿಗಳು ವಜ್ರದ ಮೋತಿಯ [ಕಾಗಡಿ]

ತುಡುಕಿ ಹಿಡಿ ಕೆಡೆಹಿ ಕಟ್ಟಿರೊ ಪಾತಕನನೆಂದು
ಘುಡುಘುಡಿಸುತಲಿ ನಿಂತರು

ಕಡುಹಸುಳೆ ಕಂದನಿವನೆಷ್ಟು ಅಂಜುವನೆಂದು
ಗಡಗಡನೆ ನಡುಗಿ ಕಂಗೆಟ್ಟು ಅಜಾಮಿಳ ತಾನು
ಪಡೆದ ಮಗನ ನಾರಗನೆಂದು ಕರೆಯಲು ನುಡಿಯ
ಲಾಲಿಸಿದ ಸ್ವಾಮಿ ೭

ಮರಣಕಾಲದಿ ಶ್ರೀಹರಿಯೆಂಬ ನಾಮವನು
ಸ್ಮರಣೆಯನು ಮಾಡಲು ಅವನ ಕೋಟಿಜನ್ಮದ ಪಾಪ
ಹರಿವುದಾಕ್ಷಣದಲ್ಲಿ ಕರುಣದಿಂದಜಮಿಳನ ಕರೆತನ್ನಿರಿಲ್ಲಿಗೆಂದ
ಉರದೊಳೊಪ್ಪುವ ತುಳಸಿದಂಡೆ ಪೀತಾಂ-
ಬರವು ಗದೆ ಶಂಖ ಚಕ್ರ ದ್ವಾದಶನಾಮವನು
ಧರಿಸಿ ಕರವೆತ್ತಿ ಅಂಜ ಬ್ಯಾಡೆಲೊ ಎಂದು ಹರಿದಾಸರೈ ತಂದರು ೮

ಪುಂಡರೀಕಾಕ್ಷನ ಭೃತ್ಯನ ಬಾಧಿಸುವ
ಲಂಡರಿವರ್‍ಯಾರು ನೂಕಿ ನೂಕಿರೊ ಎಂದು ಯಮನ
ದಂಡವನು ಮುರಿದು ಬಿಸಾಡಿ ನಿಮ್ಮಸುವ ಹಿಂಡುವೆವು ಎಂದರಾಗ
ಕಂಡ ಹರಿದೂತರಿಗೆ ಯಮನಾಳುಗಳೆರಗಿ ಭೂ-
ಮಂಡಲದೊಳಗೆ ಎಮ್ಮೊಡೆಯ ಯಮಧರ್ಮನ
ದಂಡವ ಮುರಿದವರನು ನಾ ಕಾಣೆ ನೀವೆ
ಉದ್ದಂಡರಹುದೆಂದರಾಗ ೯

ತಂದೆ ಕೇಳೆಮ್ಮ ಬಿನ್ನಪವ ಲಾಲಿಸಿ ನೀವು
ಒಂದು ದಿನ ಹರಿಯೆಂಬ ಧ್ಯಾನವನರಿಯನು ನಾವು
ಬಂದೆಳೆಯಲಾತ್ಮಜನ ನಾರಗಾ ಎನಲು ಕುಂದಿತೆ ಇವನ ಪಾಪ
ಹಂದಿಕುರಿಗಳಿರ ನಿಮಗಿಷ್ಟು ಮಾತುಗಳ್ಯಾಕೆ
ನಿಂದಿರದೆ ಹೋಗ್ಯೆಂದು ನೂಕಿ ಯಮನಾಳ್ಗಳನು
ತಂದಪೆವು ದಿವ್ಯ ಪುಷ್ಪಕವನೆಂದೆನುತ ಬಂದರಾ ವೈಕುಂಠಕೆ ೧೦

ಎದ್ದು ಅಜಾಮಿಳನು ಮೂರ್ಛೆಯ ತಿಳಿದು ಎಚ್ಚೆತ್ತು
ಬಿದ್ದ ಕಾಯವನು ಭಾದಿಸಿದವರ್‍ಯಾರು ಉ-

ಪದ್ರವನು ಬಿಡಿಸಿದ ದಿವ್ಯ ಸ್ವರೂಪ[ದ] ಸುಧಾತ್ಮರಾರು ಎಂದ
ಮದ್ಯಪಾನವ ಮಾಳ್ಪ ಹೆಂಗಸಿನ ಒಡನಾಡಿ
ಅದ್ದಿದೆ ನೂರೊಂದು ಕುಲವ ನರಕದೊಳೆಂದು
ಹದ್ದಿನ ಬಾಯೊಳಗಿನುರಗನಂತಜಾಮಿಳನು ಇದ್ದ
ತಾನತಿ ಮರುಗುತ ೧೧

ವಿಪ್ರ ಕುಲದಲ್ಲಿ ಪುಟ್ಟಿ ವೇದಶಾಸ್ತ್ರವನೋದಿ
ಮುಪ್ಪಾದ ತಾಯಿ–ತಂದೆಯ ಬಿಟ್ಟು ಬುಧ ಜನರು
ಒಪ್ಪಿ ಧಾರೆಯ ನೆರೆದ ಕುಲಸ್ತ್ರೀಯಳ ಬಿಟ್ಟು ಮದನ
ಬಾಣಗೆ ಸಿಲುಕಿ ದುಷ್ಟ
ತಾಪವ ಪೊತ್ತೆ ಜನನಿಂದಕನಾದೆ
ಅಪ್ರತಿಮ ಅನಂತಪಾತಕಿ ಭುವನದಲಿ
ತಪ್ಪಲಿಲ್ಲವೆ ಪಣೆಯ ಬರದ ಬರಹಗಳು ಇನ್ನು ಛಾಮರೆ
ವಿಧಿ ಎಂದನು ೧೨

ಇಷ್ಟು ದಿನ ಹರಿಯೆಂಬೊ ನಾಮವರಿಯೆನು ನಾನು
ದುಷ್ಟಯಮದೂತರನು ಕಂಡು ಚಂಡಾಲತಿಗೆ
ಪುಟ್ಟಿದ ಮಗನ ನಾರಗನೆಂದು ಕರೆದರೆ ಮುಟ್ಟಿದವೆ ನಿಮಗೆ ದೂರು
ಇಷ್ಟು ಅವಗುಣಗಳನು ಎಣಿಸಲಿಲ್ಲವೆ ಸ್ವಾಮಿ
ಎಷ್ಟು ಕರುಣಾಕರನೊ ಎಂದು ಸ್ನಾನವ ಮಾಡಿ
ಬಿಟ್ಟು ತಾಪತ್ರಯವ ಭಯ ನಿವಾರಣ ಹರಿಯ
ಗಟ್ಯಾಗಿ ಧ್ಯಾನಿಸಿದನು ೧೩

ತನ್ನ ನಾಮವ ನೆನೆವ ಭಕ್ತರಾದವರೆಲ್ಲ
ಧನ್ಯರಿವರಹುದೆಂದು ಜಗವರಿಯಬೇಕೆಂದು
ಉನ್ನತವಾದ ಪುಷ್ಪಕವ ತಾ ಕಳುಹಿದ ಪನ್ನಗಾರಿವಾಹನ
ಅನ್ಯಾಯ ಇವಗಿಲ್ಲ ಅವನಿಯೊಳಗುತ್ತಮನು
ಎನ್ನಯ್ಯ ಏಳೆಂದು ಕೈಲಾಗವನು ಕೊಡಲು
ಉನ್ನತವಾದ ಪುಷ್ಪಕವೇರಿ ಅಜಮಿಳನು ಹರಿಯ .
ಸನ್ನಿಧಿಗೆ ನಡೆದ ೧೪

ಜಲಜನಾಭನ ದಿವ್ಯನಾಮವನು ನೆನೆದರೆ
ಕುಲಕೋಟಿ ದೋಷಗಳಿಲ್ಲ ಕುಂದುಗಿಂದುಗಳಿಲ್ಲ
ಛಲವ ಮಾಡದೆ ನೀವು ಬನ್ನಿರೊ ನಮಗವರು
ಸಲುವರಲ್ಲೆಂದ ಯಮನು
ನಲವಿಂದ ಹೆಳವನಕಟ್ಟೆ ಶ್ರೀ ವೆಂಕಟನ
ನೆಲೆಯರಿತು ನೆನೆದವರ್ಗೆಮನ ಬಾದೆಗಳಿಲ್ಲ
ಸುಲಭನಹನು ಸ್ವಾಮಿ ಸಾಯುಜ್ಯ ಪದವೀವ ಬಲು
ನಂಬಿ ಭಜಿಸಿ ಜನರು ೧೫

## ೫೧

ಈತ ರಂಗನಾದ ಹರಿಯು
ಆತ ಲಿಂಗನಾದ ಹರನು ಪ.

ಗಿರಿಜಾಪತಿಯಾದನಾತ
ಗಿರಿಯ ಬೆನ್ನಲಿ ತಾಳಿದನೀತ
ಸ್ಮರನ ಮಡುಹಿದಾತನಾತ
ಸ್ಮರನ ಜನಕನಾದನೀತ ೧

ಶೇಷಭೂಷಣನಾದನಾತ
ಶೇಷಶಾಯಿಯಾದನೀತ
ಪೋಷಿಪ ಭಕ್ತರನಾತ
ದೋಷದೂರನಾದನೀತ ೨

ಕಂಗಳು ಮೂರುಳ್ಳವನಾತ
ಮಂಗಳ ದೇವೇಶನೀತ
ತುಂಗ ಹೆಳವನಕಟ್ಟೆ
ರಂಗನೀತ ಲಿಂಗನಾತ ೩

## ೫೨

ಈತ ಲಿಂಗದೇವ ಶಿವನು
ಆತ ರಂಗಧಾಮ ವಿಷ್ಣು
ಮಾತ ಕೇಳೊ ಮಂಕು ಮನುಜ
ಮನದ ಅಹಂಕಾರ ಬಿಟ್ಟು ಪ.

ವೇದಕ್ಕೆ ಸಿಕ್ಕಿದನೀತ
ವೇದನಾಲ್ಕು ತಂದನಾತ
ಬೂದಿ ಮೈಯೊಳು ಧರಿಸಿದನೀತ
ಪೋದಗಿರಿಯ ಪೊತ್ತನಾತ ೧

ವ್ಯಾಧನಾಗಿ ಒಲಿದನೀತ
ಮಾಧವ ಮಧುಸೂದನನಾತ
ಮದನನ್ನ ಉರಿಹಿದನೀತ
ಮದನನಪಡೆದಾತನಾತ ೨

ಗಂಗೆಯ ಪೊತ್ತವನೀತ
ಗಂಗೆ ಪದದಿ ಪಡೆದನಾತ
ತುಂಗ ಹೆಳವನಕಟ್ಟೆ
ಲಿಂಗ ಅಂತರಂಗ ರಂಗನಾಥ ೩

## ೫೩

ಮಳೆಯ ದಯಮಾಡೊ ರಂಗಯ್ಯ ನಿಮ್ಮ
ಕರುಣ ತಪ್ಪಿದರೆ ಉಳಿಯದೀ ಲೋಕ ಪ.

ಪಶುಜಾತಿ ಹುಲ್ಲೆ ಸಾರಂಗ ಮೃಗಗಳು ಬಹಳ
ಹಸಿದು ಬಾಯಾರಿ ಬತ್ತಿದ ಕೆರೆಗೆ ಬಂದು
ತೃಷೆಯಡಗದೆ ತಲ್ಲಣಿಸಿ ಮೂರ್ಛೆಗೊಂಡು
ದೆಸೆದೆಸೆಗೆ ಬಾಯಿ ಬಿಡುತಿಹವಯ್ಯ ಹರಿಯೆ ೧

ಧಗೆಯಾಗಿ ದ್ರವಗುಂದಿ ಇರುವ ಬಾವಿಯ ನೀರ
ಮೊಗೆ ಮೊಗೆದು ಪಾತ್ರೆಯಲಿ ನಾರಿಯರು
ಹಗಲೆಲ್ಲ ತರುತಿಹರು ಯೋಚನೆಯ ಮಾಡುತ್ತ
ಬೇಗದಿಂದಲಿ ತರಿಸೊ ವೃಷ್ಟಿಯನು ಹರಿಯೆ ೨

ಸಂದು ಹೋದವು ಜ್ಯೇಷ್ಠ ಆಷಾಢ ಶ್ರಾವಣ
ಬಂದಿದೆ ಭಾದ್ರಪದ ಮಾಸವೀಗ
ಇಂದು ಪುರಂದರಗೆ ಹೇಳಿ ವೃಷ್ಟಿಯ ತರಿಸೊ
ಸಂದೇಹವಿನ್ಯಾಕೆ ಹೆಳವನಕಟ್ಟೆಯ ರಂಗ ೩

## ಉದ್ದಾಳಿಕನ ಕಥೆ

ಕಿರುಡೊಳ್ಳಿಗೆ ಉರಗನ ಸುತ್ತಿದಾತನೆ ಮೆರೆವ
ಪಾಶಾಂಕುಶ ಧರನೆ
ಗಿರಿಜೆಯ ವರಪುತ್ರ ಕರಿಮುಖಗೊಂದಿ[ಪೆ] ಧೃಢವಾಗಿ
ಕರಿಣಿಸೊ ಮತಿಯ ೧

ವಾಣಿ ಬ್ರಹ್ಮನ ರಾಣಿ ವೀಣೆ ಪುಸ್ತಕಪಾಣಿ
ಮಾನಿನಿಕುಲಕೆ ಕಟ್ಟಾಣಿ
ಮಾಣದೆ ಭಕ್ತರ ಪೊರೆವ ಶೃಂಗೇರಿಯ ಶಾರದೆ
ಕರುಣಿಸೆ ಮತಿಯ ೨

ಮಂಗಳಾಂಗನೆ ಮಲ್ಲಸುರರ ಮರ್ದಿಸಿದನೆ ಗಂಗೆ [ಮೌಳಿ]
ಮನೋಹರನೆ
ಹಿಂಗದೆ ಭಕ್ತರ ಪೊರೆವ ನೀಲಾಬ್ಧಿಯ ಲಿಂಗ ಕರುಣಿಸು
ನಿಜಮತಿಯ ೩

ಭೂಮಿ ಅಂಬರ ರವಿ ತಾರೆ ಚಂದ್ರಾವಳಿ
ಮೇಲಾದಷ್ಟದಿಕ್ಪಾಲಕರು
ಸಾಧು ಸಜ್ಜನ ಗುರುಹಿರಿಯರಿಗೊಂದಿಸಿ ಹೇಳುವೆ ಈ
ಪುಣ್ಯಕಥೆಯ ೪

ಒಣ್ಯೊಳು ಚೆಲ್ಲಿದ ಅಣಿ ಮುತ್ತಾರಿಸಿ ನೂಲಿಗೆ ಪೋಣಿಸಿದಂತೆ
ಯೋಗಿಗಳರಸುದ್ದಾಳಿಕನ ಕಥೆಯನು ಹೇಳುವೆ ಚರಿತೆಯ ಮಾಡಿ ೫

ಭೂವಳಿಯೊಳಗೆ ಉತ್ತಮನೆಂಬೂ ಭೂಸುರ
ವೇದವೇದಾಂತ ಪಾರಗನು
ಸಾಧು ಸಜ್ಜನ ಸತಿಯರ ಕುಲರತ್ನವು ಅನುಕೂಲ್ಯಾತನ
ಧರ್ಮ ಪತ್ನಿ ೬

ಸತಿ ಪುರುಷರು ಸಂತೋಷದಲಿರುತಿರೆ
ಸುತಜನಿಸಿದ ಉದ್ದಾಳಿಕ
ಅತಿ ಹರುಷದಿ ಜಾತಕರ್ಮ ನಾಮಕರಣ ಸುತಗೆ
ಮಾಡಿದ ಕ್ರಮದಿಂದ ೭

ಅನ್ನಪ್ರಾಶನ, ಚೌಲಕರ್ಮಂಗಳ ಮಾಡಿ ಚೆಣ್ಣಗೆ
ಮೌಂಜಿಯ ಕಟ್ಟಿ
ಬ್ರಹ್ಮಚರ್ಯಾಶ್ರಮ ನಡೆಸಿ ತಾಯಿ ತಂದೆ ಮುನ್ನೆ
ನಡೆದರು ಪರಗತಿಗೆ ೮

ಗುರುಕುಲವಾಸವ ಮಾಡಿ ಉದ್ದಾಳಿಕ ಕಲಿತನೆ
ನಾಲ್ಕು ವೇದಗಳ
ಅಜ ಹರಹರಿಯ ಮೆಚ್ಚಿಸುವೆ [ಎಂ]ದೆನುತಲೆ
ಘನತಪವನಕಾಗಿ ನಡೆದ ೯

ಮಿಂದು ಮಡಿಯನ್ನುಟ್ಟು ಸಂದೇಹವ ಬಿಟ್ಟು
ನಿಂದು ಬೆಳಗುವ ಜ್ಯೋತಿಯಂತೆ
ಒಂದೇಮನದಲಿ ಮಾಡಿದ ತಪವನು [ವರುಷ]
ಸಂದವರುವತ್ತು ಸಾವಿರವು ೧೦

ಧರೆಯೊಳಗುತ್ತಮ ಕೌಸಲ್ಯದೇಶದಿ ಆಯೋಧ್ಯವೆಂಬ
ಪಟ್ಟಣದಿ
ರಘುಕುಲದಲ್ಲಿ ಉತ್ಪನ್ನನು ರಘುರಾಮ ಸ್ಥಿರವಾಗಿ
ರಾಜ್ಯವಾಳುವನು ೧೧

ಎಲ್ಲೆಲ್ಲಿ ನೋಡಿದರು ಕೆರೆಬಾವಿ ದೇವಾಲಯ
ಕನ್ಯಾದಾನವು ಭೂದಾನ
ಅನ್ನಛತ್ರವು ಅರವಟ್ಟಿಗೆಯನಿಕ್ಕಿಸಿ ಮನ್ನಿಸಿ
ರಾಜ್ಯವಾಳುವನು ೧೨

ಹೆತ್ತ ತಾಯಿ ಮಕ್ಕಳಗಲರೆಂದೆದಿಗು ಬತ್ತದೆ ಕರೆವ ಧೇನುಗಳು
ಸತ್ಯವಲ್ಲದೆ ಅಸತ್ಯವ ನುಡಿಯರು ಉತ್ತಮರಾ
ದೇಶದೊಳಗೆ ೧೩

ಧರ್ಮವಲ್ಲದೆ ಅನ್ಯಾಯವ ಮಾಡರು
ಪುಣ್ಯಸಾಧನರು ಸಜ್ಜನರು
ಉನ್ನಂತ ಹರಿಯ ಭಕ್ತಿಯಲಿ ಕೊಂಡಾಡುವ
ಧರ್ಮಗಳಾ ದೇಶದೊಳಗೆ ೧೪

ಕೊಡುವವರುಂಟು ಕೊಂಬವರಿಲ್ಲ ಧರೆಮೇಲೆ
ಬಡವರಿಲ್ಲಿ ಚಾರರುಂಟು
ಕಡುಧೀರರುಂಟು ಹಗೆಗಳಿಲ್ಲ ಪಿಸುಣರಗೊಡುವೆಯಿಲ್ಲಾ
ದೇಶದೊಳಗೆ ೧೫

ಸುತ್ತಣರಾಯರ ಗೆಲಿದು ಕಪ್ಪವಕೊಂಡು ಕ್ಷತ್ರಿಯ
ಧರ್ಮವ ನಡೆಸಿ
ಭಕ್ತಿಯಿಂದ ದೇವ ಬ್ರಾಹ್ಮರ ಮನ್ನಿಸುತಲೆ ಸತ್ಯದಿ
ರಾಜ್ಯವಾಳುವನು ೧೬

ಕೊಟ್ಟ ವಾಕ್ಯಂಗಳ ತಪ್ಪನು ಭೂಪಾಲ ಮಸ್ತಕ
ಮಕುಟವೆಂದೆನಿಸಿ
ಪಟ್ಟದರಸಿಯಲ್ಲದನ್ಯತ್ರ ನೋಡೇಕ ಪತ್ನಿಯ ವ್ರತವ ನಡೆಸಿದನು ೧೭

ಪಟ್ಟದರಸಿಯೊಳ್ ಕುಮಾರನು ಅಜಭೂಪ ಹುಟ್ಟಿ
ಸಂತೋಷದೋರಲು
ಚಿಪ್ಪಿನೊಳಗೆ ಮುತ್ತುಮಾಡುವ ತೆರನಂತೆ ಪುತ್ರಿ
ಹುಟ್ಟಿದಳ್ ಚಂದ್ರಾವತಿಯು ೧೮

ಹೊನ್ನಿನ ರಾಸಿ ಸುವರ್ಣದ ಬೆಟ್ಟವು ಕನ್ಯಾದಾನದ ಹೆಬ್ಬೆಳಸು
ಪುಣ್ಯದ ಪುಂಜ ಪೂರ್ಣವಿತ್ತೆಯೆನಗೊಂದು ಹೆಣ್ಣು
ಮಾಣಿಕವೆ ಸಂತಾನ ೧೯

ಹೊಡೆ ಮಗ್ಗುಲಿಕ್ಕೋಳು ಇಡವಳಂಬೆಗಾಲ
ನಡೆಯೋಳು ದಟ್ಟಡಿಯಿಡುತ
ನುಡಿವೋಳು ತೊದಲ್ನುಡಿಯಲಿ ಅರಗಿಣಿಯಂತೆ
ಕಡುಲಾಲಿಕೆ ಬಾಲಲೀಲೆ ೨೦

ನಡೆದರೆ ದಿಟ್ಟ ತಾಕೀತೆಂದು ಕುಮಾರಿಗೆ ನುಡಿದರೆ
ಬಡವಾದಾಳೆಂದು
ಮುಡಿಯ ಭಾರಕೆ ಸೆಳೆನಡುವು ನೊಂದೀತೆಂದು
ಕಡುಹರುಷದಲಿ ಹಿಗ್ಗಿದರು ೨೧

ಅಕ್ಷರಾಭ್ಯಾಸವ ಮಾಡಿಸಿ ಕುಮಾರಿಗೆ ನರ್ತನ ಗೀತವ ಕಲಿಸಿ
ಉತ್ತಮವಾದ ನಾಟಕ ಕವಿಶಾಸ್ತ್ರವ
ಪುತ್ರಿಗಭ್ಯಾಸ ಮಾಡಿಸಿದ ೨೨

ಬಾಲತ್ವದಿಂದ ಕಳೆದವು ಕುಮಾರಿಗೆ ಮೇಲೆ
ಯೌವನವು ತೋರಿದವು
ನೀಲಮಾಣಿಕ ನವರತ್ನ ಮುತ್ತಡಚಿದ
ಆಲಯವನೆ ಕಟ್ಟಿಸಿದ ೨೩

ಪುತ್ರಿಯ ಸೇವೆಗೆ ಇಟ್ಟನೆ ಭೂಪಾಲ ಹತ್ತುಸಾವಿರ ಕೆಳದಿಯರ
ಸುತ್ತಲು ಪ್ರಾಕಾರ ಎಸೆದವು ರಕ್ಷೆಗೆ ಇಟ್ಟನೆ ದ್ವಾರಪಾಲಕರ ೨೪

ಇತ್ತ[ಲೀ] ರಾಯ ಸಂಪತ್ತಿನೊಳಿರುತಿರೆ ಅತ್ತ[ಲಾ]
ಮುನಿಕೌಶಿಕನು
ಪೃಥವಿಯನ್ನೆಲ್ಲಾ ಸುತ್ತಲು ಬಂದ[ನು] ಸಪ್ತದ್ವೀಪಗಳ
ನೋಡುತಲಿ ೨೫

ಸತ್ಯಲೋಕ ತಪೋಲೋಕವ ಚರಿಸುತ್ತ ಹೊಕ್ಕ[ನೆ]
ಯಮ ಲೋಕವನು
ಬೆಕ್ಕಿನಬಾಯ ಮೂಷಕದಂತೆ ಮಿಡುಕು[ತ]ಲಿಪ್ಪ
ಜೀವಿಗಳ ತಾಕಂಡ ೨೬

ತೃಣದ ಮೂಲಾಗ್ರದಿ ನಡುಗುತಿಪ್ಪರ ಕಂಡು ಬ[ಳಿ]
ಯಲ್ಲಿ ನಿಂತು ಮಾತಾಡಿ
ನಿಮಗೆ ಈ ಲೋಕ ಪ್ರಾಪ್ತಿಯಾಕೆ ಆಯಿತು
ತಿಳಿದು ಹೇಳುವುದು ಎನ್ನೊಡನೆ ೨೭

ಸುತರಿಲ್ಲದೆ ಸದ್ಗತಿಯಿಲ್ಲವೆನುತಲೆ ಶೃತಿ ಸಾರುತಿದೆ
ಜಗದೊಳಗೆ ಎಮಗೆ
ಸಂತತಿಯಿಲ್ಲ ಉತ್ತಮ ಗತಿಯ ಕಾಣಿಸುವೊರೆ
ಪತನಕ್ಕೆ ಬಿದ್ದೆವೆಂದೆನಲು ೨೮

ಪುತ್ರಪೌತ್ರರಿಲ್ಲವೆ ನಿಮ್ಮ ವಂಶದಿ ಉತ್ತಮಗತಿಯ
ಕಾಣಿಸುವ ದೌಹಿತ್ರರು
ಧರ್ಮ ಸಂತಾನಿಗಳಿಲ್ಲವೆ[ಎಂ]ದು ಮತ್ತಾಗ
ಮುನಿಯು ಕೇಳಿದನು ೨೯

ಹೆಣ್ಣನೊಲ್ಲದೆ ಅರಣ್ಯವ ಚರಿಸುವ ಉನ್ನಂತ ತಪಸೀಲಿದ್ದ
ನಮ್ಮ ಸಂತತಿ ಉದ್ದಾಳಿಕನೊಬ್ಬನಿರುವನು ಮನ್ನಿಸಿ
ತಿಳಿದು ಹೇಳುವುದು ೩೦

ಉತ್ತಮಳಾಗಿರ್ಪ ಸತಿಯನೊಳಗೊಂಡು
ಪುತ್ರಸಂತಾನವ ಪಡೆದು
ಹೆತ್ತವರಿಗೆ ಸದ್ಗತಿಯ ಕಾಣಿಸುವುದೆಂದು
ವಿಸ್ತಾರವಾಗಿ ಹೇಳುವುದು ೩೧

ಘೋರನಲ್ಲಿಂದ ತೆರಳಿದನಾಗಲೆ ಮುನಿ ಅರಣ್ಯವ ಚರಿಸುತಲೆ
ದೂರದಿಂದಲೆ ಕಂಡನು ಉದ್ದಾಳಿಕನ ಸಾರಿದನಾ
ತಪೋವನವ ೩೨

ಇದಿರೆದ್ದು ಉದ್ದಾಳಿಕನು ಕಂಡು ಮುನಿಪನ
ಕರವಿಡಿದು ಕರೆ ತಂದನಾಗ
ತೃಣದಾಸನವಿತ್ತು ಅತಿಥಿ ಪೂಜೆಯ ಮಾಡಿ
ಬರವೇನೆಂದು ಕೇಳಿದನು ೩೩

ಸತ್ಯಲೋಕ ತಪೋ ಲೋಕವ ಚರಿಸುತ್ತ ಹೊಕ್ಕೆನು
ಯಮ ಲೋಕವನು
ನಿಮ್ಮೆತ್ತ ತಾಯಿ ತಂದೆ ಪಿತೃಪಿತಾಮಹರು
ಅತ್ಯಂತ ನರಕಕ್ಕೈದುವರು ೩೪

ಆಲಸ್ಯವಿಲ್ಲದೆ ಬೀಳ್ವರು ಪತನಕ್ಕೆ ಹೇಳ ಬಂದೆನು ನಿನ್ನ ಕೂಡೆ
ಬಾಲರ ಪೆತ್ತು ಸದ್ಗತಿಯ ಕಾಣಿಸಿದರೆ ಅಹುದು
ಮುಕ್ತಿ ಸಾಧನವು ೩೫

ಅರವತ್ತು ಸಾವಿರ ವರುಷ ತಪಸ್ಸು ನಾಮಾಡಿದೆ
ಚಿತ್ತ ಚಂಚಲವಾಗದ್ದಾಂಗೆ
ಮಾರ್ತಾಂಡ ಸುತನ ಲೋಕದೊಳೆನ್ನ ಪಿತೃಗಳು ಇಟ್ಟ
ಕಾರಣವೇನೆಂದ ೩೬

ಹೊನ್ನು ಹೆಣ್ಣು ಮಣ್ಣಿನಾಸೆಯು ಎನಗಿಲ್ಲ ಉನ್ನಂತ
ತಪವ ಮಾಡುವೆನು
ಎಮ್ಮವರಿಗೆ ಯಮಲೋಕವೇತಕೆಯೆಂದು ಮನ್ನಿಸಿ
ಮುನಿಯ ಕೇಳಿದನು ೩೭

ಧರೆಮೇಲೆ ದ್ವಿಜನಾಗಿ ಉದ್ಭವಿಸಿದ ಮೇಲೆ ನಡೆಸೋದು
ನಾಲ್ಕು ಆಶ್ರಮವು
ಕಡುತಪವನೆ ಮಾಡಿ ಬಳಲಿ ಬಾಯಾರುತ್ತ
ಅಡವಿಯಲಿದ್ದೇನು ಫಲವು ೩೮

ಬ್ರಹ್ಮಚರ್ಯಾಶ್ರಮ ನಡೆಸಿ ಕೆಲಕಾಲ ಕನ್ಯಾರ್ಥಿಯಾಗಿ
ನೀ ಹೋಗಿ
ಮುನ್ನ ಬ್ರಾಹ್ಮರ ಸಾಕ್ಷಿಲಿ ಸದ್ಗುಣವುಳ್ಳ ಕನ್ಯಾ
ಪಾಣಿಗ್ರಹಣ ಮಾಡು ೩೯

ಉತ್ತಮಳಾಗಿರ್ಪ ಸತಿಯಳನೊಳಗೊಂಡು ಪುತ್ರ
ಸಂತಾನವ ಪಡೆದು
ಕಳತ್ರಿಯನೊಡಗೊಂಡು ಯಜ್ಞವ ಮಾಡಿದರೆ ಸತ್ಯ
ಅವರಿಗೆ ಸ್ವರ್ಗಲೋಕ ೪೦

ಹಸಿದು ಬಂದವರಿಗೆ ಅಮೃತಾನ್ನವನಿಕ್ಕುತ
ಗೃಹಸ್ಥಧರ್ಮಗಳ ನಡೆಸುತ್ತ
ಉತ್ತಮ ವಾರಣಾಸಿ ಗಯೆ ತೀರ್ಥದಿ ಹೆತ್ತವರನು
ತೃಪ್ತಿ ಬಡಿಸು ೪೧

ಇಷ್ಟು ಪರಿಯಿಂದಲೆ ವಿವರಿಸಿ ಹೇಳುವೆ
ಗೃಹಸ್ಥಧರ್ಮದ ನೀತಿಗಳನು
ಒಪ್ಪಾದರೆ ಕೇಳು ಒಲ್ಲದಿದ್ದರೆ ಬಿಡು ಅಪ್ಪಣೆ ಕೊಡು ತನಗೆಂದ ೪೨

ಆ ಮುನಿಗಪ್ಪಣೆ ಕೊಟ್ಟು ಉದ್ದಾಳಿಕ ಆಲೋಚಿಸಿ ತನ್ನ ಮನದಿ
ಪ್ರಾರಬ್ಧ ಬರೆದಂಥ ವಿಧಿಯ ಕೇಳುವೆನೆಂದು ಸಾರಿದ
ಸತ್ಯಲೋಕವನು ೪೩

ಕಡೆಗಣ್ಣು ಕೆಂಚೇರಿ ಕಿಡಿಗಳು ಉದುರುತ ಘುಡುಘುಡಿಸುತ
ಕೋಪದಿಂದ
ಸುಡುವೆನು ಮೂರು ಲೋಕವನೆಂಬ ಭರದಿಂದ
ಕೆಡುವಗ್ನಿಯಿಂದ ತಾಬಂದ ೪೪

ಮುನಿಯ ಬರವನು ಕಂಡು ಕಮಲಜ ,
ಕರವಿಡಿದು ಕರೆತಂದನಾಗ
ನವರತ್ನಮಯದ ಗದ್ದುಗೆ ಮೇಲೆ ಕುಳ್ಳಿರಿಸಿ
ಮಧುರವಾಕ್ಯದಲಿ ಕೇಳಿದನು ೪೫

ಏನು ಕಾರಣ ನೀವು ಇತ್ತ ಬಿಜಯಂಗೈದಿರತ್ಯಂತರ
ತಪವನ್ನೆ ಬಿಟ್ಟು
ಉತ್ತಮರ ದರುಶನವಾಯಿತು ಪುಣ್ಯ ಹತ್ತು
ಕೋಟಿ ಲಾಭವೆಂದ ೪೬

ಸುತರಿಲ್ಲದೆ ಸದ್ಗತಿಯಿಲ್ಲವೆನುತಲಿ ಪ್ರತ್ಯಕ್ಷದಿಂದ ಕೇಳಿದೆನು
ಪತ್ನಿಯೆಲ್ಲಿಹಳೆನಗೆ ಪುತ್ರನೆಂತಾಗುವ
ವಿಸ್ತಾರವಾಗಿ ಹೇಳೆಂದ ೪೭

ಸತ್ಯವೀ ಮಾತು ತಪ್ಪದು ಎನ್ನ ಲಿಖಿತವು
ಪುತ್ರನಹನು ನಿನಗೊಬ್ಬ
ಲಕ್ಷ್ಮೀಪತಿಯ ಸಾರೋಪ್ಯ[ದ]ಲ್ಲಿ ನಿಮ್ಮವರು
ಮೋಕ್ಷದ ಪದವಿ ಹೊಂದುವರು ೪೮

ಜರೆ ಅಡ[ರಿ] ನೆರೆಪರಿಗಳು ಬಂದವು ಸಡಲಿದವು ದಂತಪಂಕ್ತಿ
ಕೊಡುವವರಾರು ಕರ್ನಿಕೆಯೆಂದು ಮುನಿಪನು ಕಮಲಭವನ
ಬೆಸಗೊಂಡ ೪೯

ಉತ್ತಮ ರಘುಕುಲ ರಘುರಾಯನಾತ್ಮಜೆ ಇಪ್ಪಳು ಕರ್ನಿಕೆಯಾಗಿ
ಪುತ್ರ ಹುಟ್ಟಿದ ಏಳು ವರುಷಕ್ಕೆ ಪತ್ನಿಯು
ದೃಷ್ಟಿಗೋಚರಕೆ ಬೀಳುವಳು ೫೦

ನಿಂದ್ಯ ಹೊರುವಳಾರುಂದ್ಯಾದಲಿಡುವರು
ಕಂದಹುಟ್ಟುವ ನಾಶಿಕೇತು
ಅಂದೆ ನಿಮ್ಮ ಪಿತೃಗಳಿಗೊಯ್ಕುಂಠವಹುದು
ಸಂದೇಹಬೇಡ ಹೋಗೆಂದ ೫೧

ಅಂಬುಜೋದ್ಭವನ ಅಪ್ಪಣೆಗೊಂಡು ಮುನಿಪನು
ಬಂದನೆ ತನ್ನಾಶ್ರಮಕೆ
ಚಂದನಗಂಧಿ ಚಂದ್ರಾವತಿ ನೆನೆದಳು ಅಂದಾಗ
ನೀರಾಟವನು ೫೨

ಮಾವು ಪಲ್ಲವಿಸಿ ಕೋಗಿಲೆ ಧ್ವನಿಗೊಂಡವು
ಕೇಳಿ ತಮ್ಮಯ್ಯನಪ್ಪಣೆಯ
ನಾಳೆ ಉದಯಕ್ಕೆ ಶರಧಿಯ ನದಿಯಲಿ
ಆಡಬೇಕೆಂದು ನೀರಾಟ ೫೩

ತಂದೆತಾಯ ಅಪ್ಪಣೆಗೊಂಡು ಬರುವೆನೆಂದು
ಮಂದಗಮನೆ ಹರುಷದಿಂದ
ಕುಂಭಕುಚದ ಕೋಮಲಾಂಗಿ ತಾ ಹೊರಟಳು
ಬಂಗಾರದೆಳರವಿಯಂತೆ ೫೪

ಹೂವಿನ ಚೆಂಡು ಪುತ್ಥಳಿ ರಾಜಹಂಸೆಯೊ
ಮಾರನ ಮಂತ್ರದೇವತೆಯೊ
ಸೋಗೆನವಿಲು ಬಳ್ಳಿಮಿಂಚುವಂತುದಯದ ಮೂಡುವ
ಬಾಲಭಾಸ್ಕರನು ೫೫

ಮಲಯಜ ಗಂಧಿ ಮೇಲುದವ ಸರಿಸುತ್ತ
ಕಡಗಕಂಕಣ ಹೊಳೆಯುತಲಿ
ಸಡಿಲಿದ ಮುಡಿದ ಮಲ್ಲಿಗೆ ಹೂವ್ವುದುರುತ
ನಡೆತಂದಳಾ ರಾಜಬೀದಿಯಲಿ ೫೬

ಸಿಂಗನ ಮರಿಯಂತೆ ಸೆಳೆನಡು ಬಳುಕುತ
ಅಂಗನೆಯರ ಕರಪಿಡಿದು
ಅಂದುಗೆ ಕಿರುಗೆಜ್ಜೆ ಘುಮ್ಮಘಲಿರೆನ್ನುತ ಬಂದಳೆ
ರಾಯಮಂದಿರಕೆ ೫೭

ನಡೆಗೆ ನವಿಲು ನಾಚಿ ತಲೆಯ ತಗ್ಗಿಸಿದವು
ನುಡಿಗರಗಿಣಿಯು ನಾಚಿದವು
ಮಡದಿಯ ಕಡೆಗಣ್ಣಿಗೆ ಮಿಂಚು ನಾಚಿಯೆ
ಅಡಗಿದವಂಬರದಲ್ಲಿ ೫೮

ಮಗಳ ಬರವನೆ ಕಂಡು ತಾಯಿ ಸಂಭ್ರಮದಿಂದ
ನಡೆತಂದು ಮಗಳ ಬಿಗಿದಪ್ಪಿ
ಮುಡಿಯ ನೇವರಿಸಿ ಮುದ್ದಿಸಿ ತೊಡೆಯೊಳಗಿಟ್ಟು
ಬರವೇನೆಂದು ಕೇಳಿದಳು ೫೯

ಇವಳ ನೋಟಕೆ ಸೋಲದವರಾರು ಜಗದಲಿ
ಸುರನರ ನಾಗಲೋಕದಲಿ
ಹರಿಹರನರಸಿ ಸರಸ್ವತಿಯ ಲಾವಣ್ಯಕ್ಕೆ
ಮಿಗಿಲಾದವವಳ ಚೆಲ್ವಿಕೆಯು ೬೦

ಕುಂಜರಗಮನೆ ಕೋಕಿಲಸ್ವರಗಾನೆಯ ತಂದೆ
ಕರೆದು ತೊಡೆಯೊಳಿಟ್ಟು
ಬಂದ ಬರವೇನು ನಿನ್ನ ಮನದೊಳು ಸಂದೇಹ
ಬೇಡ ಹೇಳೆಂದ ೬೧

ಬೇಸಿಗೆಯ ಬಿಸಿಲು ತೋರಿತು ಶರಧಿ ನದಿಯಲಿ
ಕಾಂತೆಯರ ನೊಡಗೊಂಡು
ಪಾಥೇಯನುಂಡು ಶೀಘ್ರದಿಂದ ಬರುವೆನು
ತಾತನಿರೂಪ ಕೊಡೆಂದು ೬೨

ಮಗಳ ಮಾತನೆ ಕೇಳಿ ಬಿಗಿ ಹರುಷವ
ತಾಳಿ ಕರೆಸಿದೊಸಿಷ್ಠ ಮಹಾಮುನಿಯ
ತರಿಸಿಕೊಟ್ಟನು ಬೇಕಾದ ವಸ್ತ್ರಂಗಳ ಪರಿಪರಿ[ಆ]
ಭರಣ ಭೂಷಣವ ೬೩

ಎನಗಿಂದ ನೀವು ಇಮ್ಮಿಗಿಲು ಕುಮಾರಿಗೆ
ಎರವಲ್ಲ ಪರಮಗುರುಗಳು
ಜಲಕ್ರೀಡೆಯಾಡಿ ಅಂತರದಿಂದ ಕುಮಾರಿಯ ಒಡಗೊಂಡು
ಬಹುದು ಶೀಘ್ರದಲಿ ೬೪

ನೀರಾಟವಾಡಬೇಕೆಂದು ಕುಮಾರಿಗೆ
ಪ್ರೇಮದೋರಿತು ಮನದೊಳಗೆ
ನಾಳೆ ಉದಯಕ್ಕೆ ಒಡಗೊಂಡು ಹೋಗೆಂದು ಹೇಳಿದ
ಮುನಿಗೆ ಭೂಪಾಲ ೬೫

ಹೇಳಿದ ಮುನಿಗೆ ಭೂಪಾಲ ಕುಮಾರಿಯ ಬಹಳ
ಪರಿಯಿಂದ ಕುತ್ತರಿಸಿ
ಬೇಡಿದ ವಸ್ತ್ರಂಗಳ ತರಿಸಿಕೊಟ್ಟನು ಆಲಯವನು ಬೀಳುಗೊಟ್ಟ ೬೬

ತಂದೆತಾಯ ಅಪ್ಪಣೆಗೊಂಡು ಬಂದಳು ಮಂದಗಮನೆ
ಹರುಷದಿಂದ
ತಂಡ ತಂಡದ ಚಿತ್ರಾನ್ನ ಭಕ್ಷ್ಯಂಗಳ ಬಂಡಿ
ಬಂಡಿಯಲಿ ಹೇರಿಸಿದ ೬೭

ಸಂಭ್ರಮದಿಂದ ಸಂಗಾತಿಯರ್ಗೇಳಿದಳಾ ತಂದೆ
ಅಪ್ಪಣೆಗೊಂಡು ಬಂದೆ
ಇಂದುಮುಖಿಯರೆಲ್ಲ ಅರುಣನ ಉದಯಕೆ
ಶೃಂಗಾರವಾಗಿ ಬನ್ನೈಂದು ೬೮

ಒಡನಾರೀಗಪ್ಪಣೆ ಕೊಟ್ಟು ಸುಕುಮಾರಿ
ಮಲಗಿದಳೊಳಗೆ ಮಂಚದಲಿ
ಕಡಲುಬ್ಬಿದಂತೆ ಉಲ್ಲಾಸದಿ ರಾತ್ರೆಯ ಕಳೆದಳು
ಉದಯ ಕಾಲವನು ೬೯

ಕಸ್ತೂರಿಗಂಧ ಕದಂಬದ ತೈಲವ ಒತ್ತಿ ಅಂಗನೆಗೆ ನೀರೆರೆದು
ಉತ್ತಮ ಸೂಕ್ಷ್ಮ ಶುಭ್ರವಸ್ತ್ರದಿಂದಲೆ ಉತ್ತಮಾಂಗವನೊರೆಸಿದರು ೭೦

ಹೊಂಬಟ್ಟೆ ನೆರೆದುಟ್ಟು ಕಂಚುಕವನೆ ತೊಟ್ಟು
ಚಂದದಾಭರಣವನಿಟ್ಟು
ಇಂದ್ರಮಾಣಿಕ ನವರತ್ನದ ತೊಡಿಗೆಯ
ತಂದಿಟ್ಟು ತಟ್ಟೆಯವೊಳಗೆ ೭೧

ತುಂಬೆಗುರುಳ ಓಸರಿಸೆಣ್ಣೆಗಂಟಿಕ್ಕೆ ದುಂಡುಮಲ್ಲಿಗೆ ಮುಡಿಸಿದರು
ಢಾ(ಳೊ)ಜ್ರದ ಕೊಪ್ಪು ಹರಳೋಲೆ ಹೊನ್ನೂವು ರಂಭೆಯ
ಕರ್ಣಕೊಪ್ಪಿದವು ೭೨

ಹರೆನೊಸಲಿಗೊಪ್ಪಿತು ಮುತ್ತಿನ ಬಟ್ಟು ಮೂಗುತಿ
ಹೆಡೆಯ ಮಣಿಯ ಚೆಂತಾಕು
ಮುರಿಗೆಯ ನಲಿಕೆ ಅಡ್ಡಿಕೆ ಮುತ್ತು ತಾಯಿತ
ತರತರವರಿತು ಕಟ್ಟಿದರು ೭೩

ಕುಂಭಕುಚದ ನಡುಮಧ್ಯದಲೊಪ್ಪಿತು
ಕೊಂಬಾಳೆಸರ ಬೆಲ್ಲೆಸರವು
ಗುಂಡಿನ ಸರ ಏಕಾವಳಿ ಪದಕವ
ತಂಡತಂಡರಿತು ಕಟ್ಟಿದರು ೭೪

ನಳಿತೋಳಿಗೊಪ್ಪಿತು ಭುಜಕೀರ್ತಿ ಬಾಪುರಿ
ಕಡಗಕಂಕಣ ಚಳಕಿಗೆಯು
ಹೆಡೆಯ ಮುಂಗಯ್ಯ ಸಲಿಗೆ ಹೊನ್ನಸೂಡಗ
ಬೆರಳಿಗುಂಗುರವನಿಡುವರು ೨೫

ಸಿರಿಮುಡಿ ವರಕುಚ ತೊಡಿಗೆ ಭಾರಕ್ಕೆ
ಮುರಿಯದಿಹುದು ಶಸ್ತ್ರಕಟಿಯು
ನವರತ್ನಖಚಿತವಾಗಿದ್ದ ಒಡ್ಯಾಣವ ನಡುವಿಗೆ ಕಟ್ಟಿನಿಕ್ಕಿದರು ೨೬

ಕದಳಿಯ ಭಾವದಿ ಹೋಲುವ ತೊಡೆ
ಕಣಕಾಲುಗಳೆಸುವ ಭಾವಕಿಗೆ
ಸಾಲು ಘಂಟೆ ಗೆಜ್ಜೆ ಗಿಲಿಕೆಂಬ ಸರಪಣಿ
ಕಾಲಂದಿಗೆಯನಿಡುವರು ೨೭

ಕಾಲುಂಗುರ ವೀರಮುದ್ರೆ ಮೆಂಟಿಕಿ ಪಿಲ್ಲಿ
ಥಳಥಳಿಸುವ ಪಾಯವಟ್ಟ
ಹಲವು ಮಾಣಿಕ್ಯದ ಹಾವಿಗೆಯ ತಂದಿಡುವರು
ಕೆಳದಿಯರಿತ್ತಂಡದಲ್ಲಿ ೨೮

ಕಾಡಿಗೆಹಚ್ಚಿ ಕಸ್ತೂರಿ ಬಟ್ಟಿಟ್ಟಳು ನೋಡಿದಳಾಗ ದರ್ಪಣವ
ಮೂಡುವ ಬಾಲಬಾಸ್ಕರನಂತೆ ಕರ್ನಿಕೆ ಮಾಡದಿಂದಿಳಿದು
ನಡೆದಳು ೨೯

ಚಂದಣವತಿ ಹೊನ್ನಂದಣವೇರಲು ದುಂದುಭಿ ಭೇರಿ ಬಡಿದವು
ಗಿಂಡಿ ಕಾಳಾಂಜಿ ಚಾಮರಗಳ ಬೀಸೋರು ರಂಬೆಯರಿತ್ತಂಡದಲ್ಲಿ ೩೦

ಹರಿಣಲೋಚನೆಯರು ಹಂಸಗಮನೆಯರು
ಮರಿದುಂಬಿಗುರುಳ ಬಾಲೆಯರು
ಅರಳುಮಲ್ಲಿಗೆ ಬಾಯಿದೆರೆಮಲ್ಲಿದಂತದ ತರುಣಿಯರು
ನಡೆದರು ನದಿಗೆ ೩೧

ಆರಡಿಗುರುಳರು ಆನೆಮೆಲ್ಲಡಿಯರು ತೋರಕುಚದ ಬಾಲೆಯರು
ಮಾರನ ಮನಕೆ ಅರೆತೂಕ ಹೋಗುವಂತೆ ನಾರೀರು
ನಡೆದರು ನದಿಗೆ ೮೨

ಕುಂಭಕುಚದೋರು ಕುಡಿತೆಗಂಗಳೋರು
ಬಿಂಬಾಧರ ಕಾಂತೆಯರು
ಹೊಂಬಾಳೆಯೆಸಲಿನ ಸುಳಿಕಾಂತೆಯರು ರಂಭೇರು
ನಡೆದರು ನದಿಗೆ ೮೩

ಕುಟಿಲಕುಂತಳೆಯರು ಕೋಮಲಾಂಗಿಯರು
ಚೆಂದುಟಿಯ ಚೆಲ್ವಿನ ಚಪಳೆಯರು
ಬಟುವು ಪೊಂಬುಗುರಿಕುಚದ ಭಾವಕಿಯರು
ನಟಣೆಯಿಂದೆಲ್ಲ ನಡೆದರು ೮೪

ಚಂಚಲಾಕ್ಷಿಯರು ಚಾರುವದನೆಯರು ಮಿಂಚುವ
ಸುಳಿಪಲ್ಲಿನವರು
ಪಂಚಬಾಣನ ಮುಮ್ಮೊನೆಯ ಸೋಲಿಸುವಂಥ
ಅಂಚೆಗಾತಿಯರು ನಡೆದರು ೮೫

ನಾರಿಯರಂದಣ ಭೋರನೆ ನಡೆದವು ರಾಜಕುಮಾರಿಯ ಕೂಡೆ
ದೂರದಿಂದಲೆ ಕಂಡರು ಆ ನದಿಯನು
ಕಾರ್ಮುಗಿಲಂತೆ ರಂಜಿಸಿತು ೮೬

ಹೊಳೆವ ಮೀನ್ಗಳು ಮುತ್ತಿನ ಚಿಪ್ಪುದಂತಹವು
ಅಳ್ಳೆಗಳು ಆಣಿಮುತ್ತುಗಳು
ಬಿಳಿದಾವರೆಯ ಶಾರದೆ ಮುಖಕಮಲದೊಳ್
ಅಳಿಗಳು ಜಕ್ಕವಕ್ಕಿಗಳು ೮೭

ನಳಿನಮುಖಿಯರು ಹೊನ್ನಂದಣ ಇಳಿದರು
ತಳಿತಮಾವಿನ ತಂಪಸೇರಿ
ಮಳಲಗೊಟ್ಟು ವಿಸ್ತಾರದಲ್ಲಿ ನೀರತಡಿಯಲ್ಲಿ
ಗುಡಾರನೊಯ್ದರು ೮೮

ಸೆಳೆಮಂಚದ ಮೇಲೆ ಶ್ರಮವ ತಂಪಿಸಿದರು
ರವಿಯು ಮದ್ಯಾಹ್ನಕೆ ಬರಲು
ರಮಣಿಯರೆಲ್ಲರು ಕರಗಳ ಪಿಡಿದರು ಇಳಿದರು
ಶರಧಿಯ ಒಳಗೆ ೮೯

ಇಟ್ಟಾಭರಣವ ಸಡಿಲಿಸಿ ಕಡೆಗಿಟ್ಟು ಉಟ್ಟರೆ ಸೂಕ್ಷ್ಮದೊಸ್ತ್ರವನು
ಮತ್ತವಾರಣ ಕದಳೀವನ ಪೊಕ್ಕಂತೆ ಹೊಕ್ಕರೆ
ಶರಧಿಯ ಒಳಗೆ ೯೦

ಸಿರಿಮುಡಿ ಬಿಟ್ಟರು ಶರಧಿಯ ನದಿಯಲ್ಲಿ
ಚಮರಿಯ ಮೃಗ ಪೊಕ್ಕಂತೆ
ಕರದೊಳಗುದಕವ ತುಂಬಿ ಚೆಲ್ಲುತಲಿರೆ
ಅರಳುಮಲ್ಲಿಗೆ ಉದುರುವಂತೆ ೯೧

ಇತ್ತಲೆ ಸ್ತ್ರೀಯರುನ್ಮತ್ತದಲಾಡಲು ಪಕ್ವವಾಯಿತು ಫಲಕಾಲ
[ಅಂಬರದಲಿ] ಸುರಕನ್ನಿಕೆ ಸುಳಿಯಲು ಆ ಕ್ಷಣ
ಬಿಂದು ಸಡಿಲಿದವು ೯೨

ಮುಗು[ಳಂಬು] ಮುನಿಪನ ಹೃದಯದಿ ನೆಟ್ಟವು
ಸಡಿಲಿದವು ಬಿಂದು ಶೀಘ್ರ
ಕಮಲದ ಹೂವಿನೊಳಿಟ್ಟು ಬಂಧಿಸಿ ಬಾಳೆ ಸುಳಿಯಲ್ಲಿ
ತಂದಡಕಿದನು ೯೩

ಈರೇಳು ಗಾವುದ ಮುನಿಯಿಪ್ಪ ಆಶ್ರಮ
ಮೇಲುಭಾಗದಲಿರುತಿಹುದು
ನೀರಿಡಿಯೊಳ್ ತೇಲಿ ಮುಳುಗುತ ಬಂದಿತು
ವಾರಿಜಗಂಧಿಯಿದ್ದೆಡೆಗೆ ೯೪

ಮೀರಬಾರದು ಹರಿಯಕುಮಾರನ ಲಿಖಿತವ
ನಾರಿ ತಾನಾಘ್ರಾಣಿಸಿದಳು
ಏರಿತು ಉತ್ತಮಾಂಗದಲಿ ಆ ಗರ್ಭವು ನಾಭಿಯ
ಕಮಲಕಿಳಿದವು ೯೫

ಜಲಕ್ರೀಡೆಯಾಡಿ ಬಳಲಿ ಬೆಂಡಾದರು ತರುಣೀರು
ತಡಿಗೆ ಸೇರಿದರು
ಅಳವಡಿಸಿದರು ಸಡಿಲಿದ ಭೂಷಣಗಳ ಸಿರಿಮುಡಿ
ಪಿಡಿದು ಕಟ್ಟಿದರು ೯೬

ಆರಡಿಗುರುಳಿಗೆ ಊದಿನ ಹೊಗೆದೋರಿ
ನಾರೀರು ಮಡಿದೆಣ್ಣೆಗಂಟು
ವೇ[ಣೆಯ] ಕಸ್ತೂರಿಯ ಲಲಾಟದಲ್ಲಿಟ್ಟರು
ಪಾವನ್ನಗಂಧ ಪೂಸಿದರು ೯೭

ಉತ್ತಮ ನದಿಯಲಿ ಮಿಂದು ವಸಿಷ್ಠಗೆ ಕೊಟ್ಟರೆ ದಾನದಕ್ಷಿಣೆಯ
ಮುತ್ತೈದೇರಿಗೆ ಮರದ ಬಾಗಿನ ಕೊಟ್ಟು
ಮೃಷ್ಟಾನ್ನವನುಣಿಸಿದರು ೯೮

ಉಂಡು ಕೈ ತೊಳೆದರು ಕೊಂಡು ತಾಂಬೂಲವ
ರಂಭೇರು ವಿಶ್ರಮಿಸಿದರು
ಅಂಬುಜಮಿತ್ರ ಮಧ್ಯಾಹ್ನ ದಾರಿಯ ಮೀರೆ
ಅಂದಣಗಳನೇರಿದರು ೯೯

ನಾರಿಯರಂದಣ ಭೋರನೆ ನಡೆದವು
ಊರಹೊರಗೆ ಉಳಿಯದಂತೆ
ವಾರಿಜಮಿತ್ರ ಪಶ್ಚಿಮ ದಿಕ್ಕಿಗಿಳಿಯಲು
ತಾರಾಪತಿ ಉದಿಸಿದನು ೧೦೦

ನಗರವ ಹೊಕ್ಕರು ರಾಜಕನ್ನಿಕೆಯರು ಬಗೆ ಬಗೆ ವಾದ್ಯಗಳಿಂದ
ಮೃ[ಗ]ಮದಗಂಧಿ ಉಪ್ಪರಿಗೆಯನೇರಿದಳ್
ಸುದತೀರ ಕರಗಳ ಪಿಡಿದು ೧೦೧

ಅಚ್ಚಮಲ್ಲಿಗೆಯ ಹಾಸುವರು ಪರಿಯಂಕಕ್ಕೆ
ಇಟ್ಟರೆ ದೀಪರತ್ನವನು
ಕಸ್ತೂರಿಗಂಧ ತಾಂಬೂಲ ಚಾಮರದಿಂದ
ಮಿತ್ರೆಯನುಪಚರಿಸಿದರು ೧೦೨

ತಿಂಗಳು ತುಂಬಿತು ಕಂಗಳು ಬಳೆಬಿಟ್ಟು ಸರ್ವಾಂಗ
ಬಡವಾಗಿ ತೋರಿದವು
ಹೊಂಬಣ್ಣವೇರಿತು ಹೊಳೆವ ದೇವಾಂಗವು ತುಂಬಿದ
ಕೊಳ ಸೂಸುವಂತೆ ೧೦೩

ಮಾಸವೆರಡರಲಿ ಮಂಚದಿಂದಿಳಿಯಳು
ಪೂಸಳು ಗಂಧಕಸ್ತುರಿಯ
ಲೇಸಾದ ಪಂಚ ಪರಮಾನ್ನ ಮೃಷ್ಟಾನ್ನದ ವಾಸನೆ
ಸೇರದಂಗನೆಗೆ ೧೦೪

ಮಂಚದಿಂದಿಳಿಯಳು ಮಂಡೆಯ ಕಟ್ಟಳು
ದುಂಡುಮಲ್ಲಿಗೆಯ ಮುಡಿಯಳು
ಖಂಡಸಕ್ಕರೆ ನೊರೆಹಾಲು ಪರಮಾನ್ನವ ಕಂಡರೆ
ಮುಖದಿರುಹುವಳು ೧೦೫

ಮುಚ್ಚಿದ ಕಣ್ಣ ತೆರೆದು ಮಾತಾಡಳು
ಪಚ್ಚೆಮಂಚದಲೊರಗಿಹಳು
ಪುತ್ರಿಗೆ ದುಗುಡವಿಮ್ಮಡಿಸಿತೆಂದು ಅವರ
ಹೆತ್ತಾಯ ಒಡನರುಹಿದರು ೧೦೬

ನುಡಿದ ಮಾತನು ಕೇಳಿ ಕಡು ಶೀಘ್ರದಿಂದಲಿ
ನಡೆತಂದು ಮಗಳ ಬಿಗಿದಪ್ಪಿ
ಮುಡಿಯ ನೇವರಿಸಿ ಮುದ್ದಿಸಿ ತೊಡೆಯೊಳಗಿಟ್ಟು
ದುಗುಡವೇನೆಂದು ಕೇಳಿದಳು ೧೦೭

ಬೆಚ್ಚಿದಳೊ ಜಲದೀಲಿ ಕುಮಾರಿಯು
ದೃಷ್ಟಿತಾಕಿತೊ ಬಹುಜನರ
ಇಟ್ಟಳೆ ಭಸಿತವ ಪಂಚಾಕ್ಷರಿಯಿಂದ
ಕಟ್ಟಿದಳ್ಯಂತ್ರರಕ್ಷೆಯನು ೧೦೮

ಮಗಳ ಮನ್ನಿಸಿ ಮಂದಿರಕಾಗಿ ಬಂದಳು ಕುಲದ
ದೈವಕೆ ಬೇಡಿಕೊಂಡು
ತನುಜೆಗೆ ಒಳ್ಳಿತಾದರೆ ಸಹಸ್ರಜನಕೆ ಭೋಜನವನು
ಮಾಡಿಸುವೆ ೧೦೯

ನಳಿನದಳಾಕ್ಷಿಗೆ ತಿಳಿದವು ಬಯಕೆಯು ಎಳೆಹುಳಿ
ಮಧುರವಾಗಿದ್ದ
ಕಳಿತ ಖರ್ಜೂರ ಕಿತ್ತಳೆ ಜಂಬುನೇರಳೆ
ಫಲಗಳಪೇಕ್ಷೆ ಮಾಡುವಳು ೧೧೦

ಅಂಬುಜನಯನೆ ಅಪೇಕ್ಷೆಯ ಮಾಡಿದಳ್ ನಂದದಿ
ಋಷಿಪತ್ನಿಯರೊಡನೆ
ಕಂದಮೂಲಫಲವ ತಿಂದು ಸ್ವೈರಿಸಿಕೊಂಡು ಕೆಂದಳಿರ
ಲೊರಗಬೇಕೆಂದು ೧೧೧

ತುರಿಗಾಯಿ ಕಡುಬು ಹಪ್ಪಳ ಬೆಲ್ಲ ಮಂಡಿಗೆ
ಎರೆಯಪ್ಪ ಅತಿರಸಗಳನು
ಹುರಿಗಡಲೆ ಸೂಸಲಡಸಿದ ಸಕ್ಕರೆ ಬುರುಡೆ
ಪೇಣಿಗಳ ಬಯಸುವಳು ೧೧೨

ಹಾ ತಾಂಗು ಬೇ ತಾಂಗು (?) ಎಳ್ಳು ಮಂಡಿಗೆ
ಘೃತವಳಿಯ ಬೆಣ್ಣೆ ಚಕ್ಕುಲಿಯು
ಸಣ್ಣ ಸಜ್ಜಿಗೆ ಶೇವಿಗೆ ಪರಮಾನ್ನವ ಉಣ್ಣಬೇಕೆಂದು
ಬಯಸಿದಳು ೧೧೩

ನವನಾರಿ ಕುಂಜರ ಪಂಚ ತುರಂಗವು
ನವಪರಿಯಿಂದ ರಂಜಿಸುವ
ಬಿಡು ಹೊಲಿಗೆ ಭುಜದ ಹಸುರ ಕುಪ್ಪಸವ
ತೊಡಬೇಕೆಂದು ಬಯಸಿದಳು ೧೧೪

ನಾಲ್ಕು ತಿಂಗಳಿಗೆ ನಿಡಿಗೇಶ ಕವಲೊಡೆದವು
ಬಾಸೆ ಕಪ್ಪತ್ತಿ ತೋರಿದವು
ಕಾಂತೆಗೆ ಗರ್ಭ ಉನ್ನತವಾಗಿ ಬೆಳೆಯಿತು ಭೂತಳಕೆ
ರವಿಯಿಳಿದಂತೆ ೧೧೫

ರಂಭೆಯ ಕುಚದಲಿ ತುಂಬಿತು ಕ್ಷೀರವು
ಇಂಬುಗೊಂಡವೆ ಸುಳಿನಾಭಿ
ಹೊಂಬಣ್ಣವೇರಿತು ಹೊಳೆವ ದೇವಾಂಗವು ತುಂಬಿದ
ಕೊಳ ಸೂಸುವಂತೆ ೧೧೬

ಮತ್ಸ್ಯ ಮಾಣಿಕ ನುಂಗಿ ಇಪ್ಪ ತೆರನಂತೆ
ಸುಪ್ಪಾಣಿಯ ಮುತ್ತಿನಂತೆ
ಕಪ್ಪುಗೊಂಡವೆ ಕುಚ ಕೊನೆಯಲ್ಲಿ ನಗೆಮುಖ
ದರ್ಪಣದಂತೆ ರಾಜಿಸಿತು ೧೧೭

ಇರುತೊಂದು ದಿವಸ ಕರೆಸಿದಳ್ ಕುಮಾರಿಯ
ವಿವರಿಸಿ ನೋಡಿ ಗರ್ಭವನು
ಎದೆಯೊಳಲಗು ನೆಟ್ಟಂದದಿ ಬಿದ್ದಳು ಮಗಳ
ಕಾಣುತ ಧರೆ ಮೇಲೆ ೧೧೮

ಇಕ್ಕೆಲದ ಸತಿಯರು ಎತ್ತಿ ಸಂತೈಸೋರು
ಪಟ್ಟೆಮಂಚದಲಿರಿಸುವರು
ಒತ್ತುವರು ಸೆರಗ ತಂದು ನಯನಕ್ಕೆ ಮಿತ್ರೆಯನುಪಚರಿಸುವರು ೧೧೯

ಮನದೊಳಗ್ಯೋಚಿಸಿ ಮೈಮುರಿದೆದ್ದಳು
ಗದರಿಸಿದಳು ಕೆಳದಿಯರ
ಮರೆಮಾಚಬೇಡಿ ಎನ್ನೊಡನೆ ಕುಮಾರಿಗೆ
ವರನಾರೆಂದು ಕೇಳಿದಳು ೧೨೦

ಕರೆಸಿದಳಾತ್ಮಜೆ ಕಾಪಿನಿ ಸತಿಯರ ಗದರಿ ಗರ್ಜಿಸಿ ಕೇಳಿದಳು
ಧರಣೀಶ ಕೇಳಿದರೆ ಕಿವಿ ಮೂಗ ಕೊಯಿಸುವ
ತುರುಬಕೊಯ್ದಟ್ಟುವ ನಿಮ್ಮ ೧೨೧

ತಂಡ ತಂಡದ ದ್ವಾರದಲ್ಲಿ ಕಾದಿದ್ದಿರಿ (ದಂ)ಡವ
ಹಿಡಿದು ರಕ್ಷಿಪಿರಿ
ಗಂಡುನೊಣವು ಇತ್ತ ಸುಳಿಯಲಾರದು ಇಲ್ಲಿ
ಬಂದವರಾರೆ ಮಂದಿರಕೆ ೧೨೨

ತಪ್ಪನಾಡೆವು ತಾಯೆ ನಿಮ್ಮ ಕುಮಾರಿಗೆ
ಸ್ವಪ್ನದಲ್ಲಿ ಕಾಣೆ ಪುರುಷನ
ಲಕ್ಷ್ಮಿಯ ಪತಿ ಬಲ್ಲ ಉತ್ಪತ್ತಿ ಸ್ಥಿತಿಗಳ ಮಿಕ್ಕ ಮಾನವರಿಗಿನ್ನಳವೆ ೧೨೩

ಮುಟ್ಟುವುದೆ ಮರಿದುಂಬಿ ಸಂಪಿಗೆಯನ್ನು ಕಪ್ಪೆ
ಮುಟ್ಟುವುದೆ ಉರಗನ
ಮತ್ಸ್ಯಕ್ಕೆ ಉರಿ ಸೋಕುವುದುಂಟೆ ಕುಮಾರಿಯ
ಮುಟ್ಟಲಮ್ಮನೆ ಪರಪುರಷ ೧೨೪

ಕೇಳಿದರರಸು ಕುಮಾರಿಯಕಸುವನು
ಹೀರಿಬಿಡುವ ಕ್ಷಣದೊಳಗೆ
ಬಾಳುವ ತೆರನಿಲ್ಲ ಮರಣಕುಪಾಯವ
ಕಾಣೆನೆನುತ ಮರುಗಿದಳು ೧೨೫

ಗರಳವ ಕೊಟ್ಟು ಮಗಳ ಕೊಲುವೆನೆ ಸ್ತ್ರೀಹತ್ಯಾ
ಕಳೆವೆನೆ ಆತ್ಮಘಾತಕಿಯು
ಮಡುವ ಧುಮುಕಿದರು ಉತ್ತಮಗತಿಯಿಲ್ಲವು
ಮರಣಕುಪಾಯವೇನೆಂದು ೧೨೬

ಪರಪರಿ ದುಃಖದಿ ಹೊರಳುವ ತಾಯಿಯ ಕಂಡು
ನಡೆದಳೆ ತನ್ನರಮನೆಗೆ
ತೊಡಿಗೆ ಆಭರಣವ ಸಡಿಲಿಸಿ ಕಡೆಗಿಟ್ಟು ಮುಡಿಯ
ಬಿಟ್ಟು ಹೊರಳಿದಳು ೧೨೭

ಇಟ್ಟಾಭರಣವ ಸಡಿಲಿಸಿ ಕಡೆಗಿಟ್ಟು ಉಟ್ಟಳೆ ಮಲಿನದೊಸ್ತ್ರವನು
ಹೊತ್ತಪನಿಂದ್ಯಕ್ಕೆ ಗತಿಯೇನೆನುತಲಿ ಹೊಟ್ಟೆಯ
ಬಡಿದ್ಹೊರಳಿದಳು ೧೨೮

ಲಿಂಗ ಪೂಜೆಯ ಮಾಡಿದವರ ನಿಂದಿಸಿದೆನೊ
ನಿಂದಿಸಿದೆನೊ ಸಾಧುಜನರ
ವಂದಿಸದ್ಹೋದೆನೊ ಗುರುಹಿರಿಯರ ಚರಣಕ್ಕೆ
ಬಂದಿತೆನಗೆ ಅಪನಿಂದ್ಯ ೧೨೯

ಕೊಟ್ಟೆನೆಂಬೋರ ನುಡಿ ಕೊಡಿಸದೆ ಹೋದೆನೊ ಕಷ್ಟಕ್ಕೆ
ಒಳಗು ಮಾಡಿದೆನೊ
ವಿಷ್ಣುಪೂಜೆಯ ಮಾಡಿದವರ ನಿಂದಿಸಿದೆನೊ
ಹೊದ್ದಿತೆನೆಗೆ ಅಪನಿಂದ್ಯ ೧೩೦

ಮಾಡುವ ಪೂಜೆಯ ನೋಡದೆ ಹೋದೆನೊ ನೋಯ
ನುಡಿದೆನೋ ಸಾಧು ಜನರ
ತಾಯಿತಂದೆ ಮಾತ ಮೀರಿ ನಾ ನಡೆದೆನೊ
ಆಯಿತೆನಗೆ ಅಪನಿಂದ್ಯ ೧೩೧

ಇದ್ದಾಗ ಉಣ್ಣದೆ ಒಡಲ ದಂಡಿಸಿದೆನೊ
ಕ್ಷುದ್ರತನವ ಮಾಡಿದೆನೊ
ವಿದ್ಯಾರ್ಥಿಗಳಿಗನ್ನವನಿಕ್ಕದ್ಹೋದೆನೊ ಹೊದ್ದಿತೆನಗೆ ಅಪನಿಂದ್ಯ ೧೩೨

ಪರಿಪರಿದುಃಖದಿಹೊರಳಿದಳಂಗನೆ ಹರಿದವು
ಇರುಳಿನೋಲಗವು
ಪರಿವಾರಕ್ಕೆ ಅಪ್ಪಣೆಗೊಟ್ಟು ರಾಯನು ನಡೆದನೆ ತನ್ನರಮನೆಗೆ ೧೩೩

ಓಲಗ ಹರಿದು ಭೂಪಾಲ ತಾ ಬರುತಿರೆ ಮಾರ್ಜಾಲ
ಅಡ್ಡಗಟ್ಟಿದವು
ವಾಯಸಂಗಳು ಎಡನಾದವು ಗೌಳಿಯು ರಾವಿನ
ಮೇಲೆ ಚೀರಿದವು ೧೩೪

ತಾರೆಗಳುದುರಿದವು ರಾಯನ ಎದುರಲಿ
ಧೂಮಕೇತುಗಳುದಿಸಿದವು
ಏನಿದು ಅಪಜಯವೆನುತಲೆ ರಾಯನು ಧ್ಯಾನಿಸಿ
ಮುಂದೆ ನಡೆದನು ೧೩೫

ಎಳೆಹುಲ್ಲನೊಲ್ಲವು ಎರಳೆಯ ಮರಿಗಳು
ದನಿದೋರದಿಹವು ಕೋಗಿಲೆಯು
ಗರಿಯ ಬಿಟ್ಟಾಡಲೊಲ್ಲವು ಮಯೂರವು
ನುಡಿಯಲೊಲ್ಲವು ಅರಗಿಣಿಯು ೧೩೬

ಅರಮನೆ ಹೊಕ್ಕನು ನೆರೆದಿದ್ದ ಸತಿಯರು
ಕರವಿಟ್ಟು ಕದಪಿನ ಮೇಲೆ
ತರತರದಲ್ಲಿ ನಿಂತಿದ್ದರು ಚಿತ್ರದಲ್ಬರೆದ ಪುತ್ಥಳಿಯಂದದಲಿ ೧೩೭

ಒಳಗೆ ಹೊಕ್ಕನು ಕೆಲಬಲವನೀಕ್ಷಿಸುತಲೆ ಸುಳಿವ
ಕಾಣದೆ ತನ್ನ ಸತಿಯ
ಸುಳಿಬಾಳೆಯು ಬಿರುಗಾಳಿಗೆ ಬಿದ್ದಂತೆ ಮಲಗಿದ್ದ
ಸತಿಯಳ ಕಂಡು ೧೩೮

ಸರಳ ತಾಕಿದ ಹುಲ್ಲೆಯಂದದಿ ಬೇಡನ ಬಲೆಗೆ
ಸಿಕ್ಕಿದ ಪಕ್ಷಿಯಂತೆ
ಅರಗಾಯ ಹೊಂದಿದ ನಾಗರಮರಿಯಂದದಿ
ಹೊರಳುತ್ತಿದ್ದಳೆ ಧರೆಮೇಲೆ ೧೩೯

ಏರಿದ ರಾಯ ಮಂಚವ ತನ್ನ ಅರಸಿಯ ಮೇಲ್
ಭಾಷೆಯಿಂದ ಕುಳ್ಳಿರಿಸಿ
(ಏಣ) ಲೋಚನೆ ನಿನ್ನ ಮನಸೆರಡಾದ
ಆ ಕಾರಣವೇನು ಹೇಳೆಂದ ೧೪೦

ವಿಕಸಿತನಯನೆ ಎನ್ನೊಳು ಕೋಪವೇತಕೆ
ಸತಿಶಿರೋಮಣಿ ಶ್ಯಾಮಗಾತ್ರೆ
ಮತಿವಂತೆ ಮಾತನಾಡದೆ ಸುಮ್ಮನಿರುವರೆ
ಅಪರಾಧವೇನೆ ಎನ್ನಿಂದ ೧೪೧

ಜೇನಿನೊಳಗೆ ವಿಷ ಕೂಡಿದಂತಾಯಿತು ಯಾರು
ಹೇಳಿದರೆ ಕೊಂಡೆಯವ
(ಏಣ) ಲೋಚನೆ ನಿನ್ನ ಮನಸೆರಡಾದ
ಕಾರಣವೇನು ಹೇಳೆಂದ ೧೪೨

ತೊಡೆಯ ಮೇಲಿರಿಸಿ ಮುಂಗುರುಳ ನೇವರಿಸುತ್ತ
ತೊಡೆದನೆ ಸುರಿವ ಕಂಬನಿಯ
ನುಡಿಯಲೇಕೊಲ್ಲೆ ಎನ್ನೊಳು ಕಂಭುಕಂಧರೆ
ಕೊಡುವೆನು ಬೇಡಿದೊಸ್ತುವನು ೧೪೩

ಪರಿಮಳ (ಭರಿತ) ಪನ್ನೀರಲಿ ತೊಳೆದನು
ನಳಿನದಳಾಕ್ಷಿಯ ಮುಖವ
ಅಳವಡಿಸಿದನು ಸಡಿಲಿದ ಭೂಷಣಗಳ ಸಿರಿಮುಡಿ
ಪಿಡಿದು ಕಟ್ಟಿದನು ೧೪೪

ಕಿರುಬೆರಿಡುತಲೆ ಮರುಮಾತನಾಡಿದಳ್ ಬಿರಿದು
ಬಿಕ್ಕುತ ಪತಿಯೊಡನೆ
ವರನಿಲ್ಲ ಕನ್ಯೆ ಕುಮಾರಿ ಗರ್ಭಿಣಿಯೆಂದು
ಪರಿಹಾಸ್ಯವಾಯಿತು ಲೋಕದಲಿ ೧೪೫

ಕೇಳಿದ ಕರ್ಣದಿ ಶೂಲವೇರಿಸಿದಂತೆ ರಾಹು
ತುಡುಕಿದ ಚಂದ್ರನಂತೆ
ನೀಗುವೆ ಹರಣವ ಎನುತ ಕೈಯಲಗನು ನೀಡಿದ
ತನ್ನ ಮಸ್ತಕಕೆ ೧೪೬

ರಾಣಿವಾಸದಲ್ಲಿದ್ದ ಸತಿಯರು ರಾಯನ
ಆಯುಧವನೆ ಸೆಳಕೊಂಡು
ಗೋಳಿಟ್ಟು ತಲ್ಲಣಿಸುತ ಪ್ರಧಾನಿಯ ಶೀಘ್ರದಿ ಕರೆಯಲಟ್ಟಿದರು ೧೪೭

ಓಲಗ ಹರಿದು ಬಂದನು ಅರ್ಧರಾತ್ರೇಲಿ ಏನು
ಕಾರಣ ಕರೆಸಿದರೊ
ಧ್ಯಾನಿಸಿ ಹಲವು ಹಂಬಲಿಸುತ್ತ ಮಂತ್ರಿಯು
ರಾಯನಿದ್ದಲ್ಲಿಗೆ ಬಂದ ೧೪೮

ಚಾರಕರನು ಹೊರಗಿಟ್ಟು ಏಕಾಂಗೀಲಿ ಸಾರಿದನೇಕಾಂತಗೃಹವ
ಬಾಗಿಸಿ ತಲೆಯ ತಗ್ಗಿದ ಸಲಿಯಂದದಿ ರಾಯನ
ಕಂಡಾನಾ ಮಂತ್ರಿ ೧೪೯

ಜೀಯ ಚಿತ್ತೈಸು ಸಾವಧಾನವೀ ರಾತ್ರೇಲಿ ಏನು ಕಾರಣ ಕರೆಸಿದಿರಿ
ಹೇಳಿದೂಳಿಗವನ್ನು ಮಾಡುವೆ ಕ್ಷಣದಲಿ ಆಲಸ್ಯ
ಬೇಡ ಹೇಳೆಂದ ೧೫೦

ಬಾಲಗೆ ಪಟ್ಟಗಟ್ಟಿಸು ಪರಿವಾರವ ಬಾಳಿಸು ಮುನ್ನಿನಂದದಲಿ
ದೇವ ಬ್ರಾಹ್ಮರ ಮನ್ನಿಸುತಲೆ ರಾಜ್ಯವ ಆಳು ನೀ
ಸುತನ ಮುಂದಿಟ್ಟು ೧೫೧

ಇಕ್ಷ್ವಾಕುಕುಲತಿಲಕನೆ ನಿನ್ನ ರಾಜ್ಯವ ಒಪ್ಪಿಸಿಕೊಳಲೆನಗಳವೆ
ಪುತ್ರಗೆ ಪಟ್ಟವ ಕಟ್ಟುವುದೇನು ಕಾರಣ ವಿಸ್ತಾರವಾಗಿ ಹೇಳೆಂದ ೧೫೨

ಕೇಳಿದೆ ಕರ್ಣದಿ ಹೀನದ ವಾಕ್ಯವ ಜಾರತ್ವ ಬಂದಿತಾತ್ಮಜೆಗೆ
ನಾನು ಅಂಜಿ ಮಾನವರಪವಾದಕ್ಕೆ ದೇಹತ್ಯಾಗವನೆ
ಮಾಡುವೆನು ೧೫೩

ರಣದೊಳು ಬಿದ್ದರೆ ಜಗದೊಳು ಕೀರ್ತಿಯು
ಅಮರಲೋಕಕ್ಕೆ ವಶವಹರು
ಬರಿದು ಸಾಯುವರೆ ನಿನ್ನಂಥ ಪರಾಕ್ರಮಿ ಯಮನ
ಬಾಧೆಗೆ ಗುರಿಯಾಗಿ ೧೫೪

ಪೃಥುವೀಶರೊಳು ತಲೆ ತಗ್ಗಿಸಿದಂತಾಯಿತು
ವ್ಯರ್ಥವಾಯಿತು ಎನ್ನ ಬದುಕು
ಹೊತ್ತಿರಲಾರೆ ದೇಹವ ನೀಕ್ಷಣದಲಿ ಹತ್ಯೆ
ಮಾಡಿಕೊಂಬೆನೆಂದ ೧೫೫

ನಿಂದ್ಯಕೆ ಅಂಜಿ ನೀಗುವರೆ ಶರೀರವ ಹಿಂದಣ
ಕಥೆಯ ಕೇಳರಿಯಾ
ಇಂದ್ರಾದಿ ಮುನಿಗಳಿಗೆ ಬಂದಿತು ಅಪವಾದ
ಕುಂದನೊದ್ದವರಾರು ಜಗದಿ ೧೫೬

ತಾನೆ ಪುಟ್ಟಿಸಿದ ವಾಗ್ದೇವಿಯ ಕಮಲಜ
ಲಾವಣ್ಯ ಕಂಡು ಸೈರಿಸದೆ
ಮೂಜಗವರಿತು ಪಾಣಿಗ್ರಹಣ ಮಾಡಿದ
ಮೀರಿದರಾರೊ ಕಲ್ಪನೆಯ ೧೫೭

ಮುನಿಸತಿಯೆನದೆ ದೇವೇಂದ್ರ ತಾನಳುಕಿದ
ಸರ್ವಾಂಗದಿಂದ ಸುಂದರಿಯು
ಶಿಲೆಯಾಗಿ ಬಿದ್ದಳಾತನ ಸತಿ ಧರೆ ಮೇಲೆ ಮೃಗದ
ಲಾಂಛನೆಯ ತಾಳಿದನು ೧೫೮

ಗುರುಸತಿಯೆನದೆ ಅಂಬುಜಮಿತ್ರ ಅಳುಪಿದ
ಸೆರೆತಂದ ತಾರಾದೇವಿಯನು
ಮುನಿಗಳು ಅಮರರೊಡನೆ ಕಾದಿಗೆಲಿದರು ನರರ
ಪಾಡೇನು ಭೂಪಾಲ ೧೫೯

ಯಮನ ದಾಡೇಲಿಪ್ಪ ತೆರನಂತೆ ಕಾವಲು ನಿನ್ನ
ಕುಮಾರತಿಯ ಮಂದಿರಕೆ
ಮರುಳಗೊಂಡ್ಯೊ ಮಾನವೆಂದು ಈ ಸುದ್ದಿಯ
ಅರುಹಿದರಾರು ನಿನ್ನೊಡನೆ ೧೬೦

ಪರಿಪರಿ ದುಃಖದಿ ಹೊರಳುವ ರಾಯನ ಮನವ
ನಿಲ್ಲಿಸಿದ ಪ್ರಧಾನಿ
ತಿಳಿದು ಬಹೆನು ಕುಮಾರಿಯನೆಂದೆನುತಲೆ
ನಡೆತಂದ ಸೆಜ್ಜೆವಾಹರಿಗೆ ೧೬೧

ಉರಿ ಸೋಂಕಿದ ಕೆಂದಳಿರಂತೆ ಮುಖಬಾಡಿ
ಮಲಿನವನುಟ್ಟ ಮಾನಿನಿಯ
ಕಳೆಗುಂದಿ ನೆಲದಲ್ಲಿ ಬಿದ್ದ ಕುಮಾರಿಯ
ಸೆಳೆವಿಡಿದೆತ್ತಿದ ರಾಯ ೧೬೨

ಏಳವ್ವ ತಾಯಿ ಚಿಂತಿಸಲೇಕೆ ವರನ್ಯಾರು
ಮಾಜುವದೇಕೆ ಎನ್ನೊಡನೆ
ಧಾರೆಯನೆರೆದು ಕೊಡುವೆ ಕನ್ಯಾಚೋರಗೆ ದೇವ
ಬ್ರಾಹ್ಮರು ಮೆಚ್ಚುವಂತೆ ೧೬೩

ಮರೆತು ಮಲಗಿದ್ದಾಗ ಸುರರಡ್ಡಸುಳಿದರೊ
ಸುರರೊ ನರರೊ ಕಿನ್ನರರೊ
ಧರಣೀಶಗ್ಹೇಳಿ ಮಾಡುವೆ ನಿನ್ನ ಮದುವೆಯ
ಗಿರಿಜೇಶನಾಣೆ ಹೇಳೆಂದ ೧೬೪

ಎತ್ತಣ ಮದುವೆ ಮಾಡುವಿರೆನ್ನ ದೇಹವ
ಇತ್ತೆ ನಾ ಹವ್ಯವಾಹನಗೆ
ಮತ್ತೊಬ್ಬ ಪುರಷನ ಕೂಡಿ ಬಾಳುವಳಲ್ಲ
ವಿಶ್ವಲೋಚನನಂಘ್ರಿಯಾಣೆ ೧೬೫

ಹಗರಣವಾಯಿತು ಜಗಮೂರರೊಳಗೆಲ್ಲ ನಗುವರು
ಸರಿಯ ನಾರಿಯರು
ಸೊಗಸವು ನಿಮ್ಮ ವಾಕ್ಯವು ಎನ್ನ ಕರ್ಣಕ್ಕೆ ಹೊಗುವೆನು
ಉರಿವ ಪಾವಕನ ೧೬೬

ಶ್ವಾನ ಮುಟ್ಟಿದ ಭಾಂಡ ಬಾಹದೆ ನಿಳಯಕ್ಕೆ ದೇವ
ಬ್ರಾಹ್ಮರಿಗ್ಯೋಗ್ಯವಹುದೆ
ಮಾನಿನಿಯೆಂದು ಸ್ನೇಹದಲೆನ್ನನುಳುಹಲು ಹಾನಿ
ಬರುವುದು ನಿಮ್ಮ ಕುಲಕೆ ೧೬೭

ಪುತ್ರಿಯೆಂದು ಸ್ನೇಹದಲೆನ್ನ ಉಳುಹದೆ ಕೆಟ್ಟ
ಪಾತಕಿಯೆಂದು ತಿಳಿದು
ಎತ್ತಿ ಕೊಂಡ್ಹೋಗಿ ತುಂಬಿದ ನದಿಯೊಳಗೆ ಬಿಟ್ಟು
ಬರುವುದೆ ಉಚಿತವು ೧೬೮

ಮದುವೆಯ ಮಾಡಲಿಲ್ಲವೆಂದು ಎನ್ನೊಳು
ಮುನಿದು ಅರಣ್ಯಕ್ಹೋಗುವರೆ
ವರಿಸು ನಿನಗೆ ಉತ್ತುಮವುಳ್ಳ ಪುರಷಗೆ ಧಾರೆಯನೆರೆವೆನು ೧೬೯

ಪಕ್ವವಾಯಿತು ಎನ್ನ ಪಾತಕ ಇಂದಿಗೆ ಹೊತ್ತೆನು
ಬರಿದೆ ನಿಂದ್ಯವನು (ಅ)
ಸತ್ಯವಾಗದು ಎನ್ನ ಆಡಿದ ವಾಕ್ಯವು ಮೃತ್ಯು
ಬಂದೊದಗಿದ ಮೇಲೆ ೧೨೦

ದೃಷ್ಟಿಸಿ ನೋಡಲು ದೃಷ್ಟಿತಾಕೀತೆಂದು ಎತ್ತಿ
ತೂಪಿರಿದು ಮಂತರಿಸಿ
ಇಷ್ಟು ಪರಿಯಿಂದಲೆಸಲಹಿದ ಮಗಳನು ಇತ್ತೆ ನಾ
ಘೋರ ಕಾನನಕೆ ೧೨೧

ಕಾರುಣ್ಯದಿಂದಲೆ ಸಲಹಿದ ಮಗಳನು ಅರಣ್ಯಕೆ
ಗುರಿಮಾಡಿ ನಾರಿ
ನಿನ್ನನಗಲಿ ನಾನೆಂತು ಜೀವಿಪೆನೆಂದು ತಾಯಿ
ಕಂಬನಿದುಂಬಿದಳು ೧೨೨

ಮಿಸುನಿಯ ಅಲಗೆಂದು ಬಸಿರೊಳಗಿಡುವರೆ
ವಶವಲ್ಲದಂಥ ಮೂಗುತಿಯ
ಹಸನಾಯಿತೆಂದು ಇಟ್ಟರೆ ನಾಸಿಕ್ಕರಿವೋದು
ಬಿಸುಸುಯ್ವದೇತಕೆ ತಾಯೆ ೧೨೩

ಏಳುತ್ತಲೊಮ್ಮೆ ಬಿಮ್ಮನೆ ತಾ ಮರುಗಿದಳು
ಕುಮಾರಿಯ ಮೇಲೆ ಸ್ನೇಹದಲಿ
ಆಲೋಚನೆ ಮಾಡುವ ಹಿರಿಯರ ಕಾಣೆನು ಹಾ
ವಿಧಿಯೆಂದ್ಹೊರಳಿದಳು ೧೨೪

ಉಲುಹ ಕೇಳಿದರೆ ಎಚ್ಚರ 'ವಹರು' ಜನರೆಲ್ಲ
ಅಳುವುದೇತಕೆ ತಾಯೆ ನೀನು
ಅರುಣನ ಉದಯವಾಗದ ಮುನ್ನ ಕಳುಹಿಸು
ಕಲ್ಮಾಡು ನಿನ್ನ ದೇಹವನು ೧೨೫

ರಾಯನು ಕರೆಸಿದ ತನ್ನ ಊಳಿಗದವರನು
ಹೇಳಿದನೇಕಾಂತದಲಿ
ಬಾಲೆಯನೊಯ್ದು ಅರಣ್ಯದಿ ಶಿರವರಿದುನಾಳೆ
ಉದಯಕೆ ಬನ್ನಿರೆಂದ ೧೭೬

ಕರೆಸಿದನಾಗ ಕಿಂಕರರ ಪ್ರಧಾನಿಯು ತರಿಸಿದನೊಜ್ರದಂದಣವ
ಅರಸನ ಮಗಳನು ಅರಣ್ಯದೊಳಗಿಟ್ಟು ಮರೆಸಿ
ಬನ್ನಿರಿ ಶೀಘ್ರದಿಂದ ೧೭೭

ರಾಯನ ಮಗಳನು ಅರಣ್ಯದೊಳಗಿಟ್ಟು
ಮಾಡಿರಿಮನಕೆ ಬಂದುದನು
ಬಾಲೆಯ ಮುದ್ರೆಯುಂಗುರ ತನ್ನಿ ಗುರುತಿಗೆ
ನಾನಿಡುವೆ ರಾಯನ ಮುಂದೆ ೧೭೮

ಏರಿದಳೊಜ್ರದಂದಣವ ಕುಮಾರಿಯು
ಮೇಲೆ ಪನ್ನಂಗ ಕವಿದವು
ವ್ಯಾಘ್ರ ಬಂದು ಹರಿಣನ ಕಚ್ಚಿ ಒಯಿದಂತೆ
ಶೀಘ್ರದಿ ಪೊತ್ತು ನಡೆದರು ೧೭೯

ಶಶಿಮುಖಿ ಮನದಲಿ ನಸುಬೆದುರಿಡುತಲೆ
ಬಸವಳಿದಳು ಶ್ರೀ ಹರಿಯ
ಅರಸುಮರ್ದನ ಗೋವಿಂದನೆ ಸಲಹೆಂದು
ಸ್ತುತಿಸುತಿರ್ದಳೆ ತನ್ನ ಮನದಿ ೧೮೦

ನೋಡದೆ ಎನ್ನವಗುಣವ ಪಾತಕಿಯೆಂದು
ಕಾಲನ ವಶಕೆ ಒಪ್ಪಿಸದೆ
ಕ್ಷೀರಾಬ್ಧಿಶಯನ ನಾರಾಯಣ ಹರಿ ನಿಮ್ಮ
ಪಾದಾರವಿಂದೊಳಿರಿಸು ೧೮೧

ಭಾರವನ್ಹೊತ್ತು ಬಳಲಿ ಬಾಯಾರುತ್ತ ಏರುತ್ತ ಘಟ್ಟ ಬೆಟ್ಟಗಳ
ಹಾದಿ ತಪ್ಪಿ ಹಳ್ಳಕೊಳ್ಳ ಕಾನನದೊಳು
ಬಾಲೆಯ ತಂದಿಳುಹಿದರು ೧೮೨

ಅಂದಣ ಇಳುಹಿ ಕೆಂದಳಿರ್ಹಾಸಿದರಾಗ ತಂಗಿ
ಬಾ ಬಳಲಿದೆಯೆನುತ
ಕುಂದಣಗಿಂಡೀಲಿ ತುಂಬಿಟ್ಟರುದಕವ
ರಂಭೆಯನುಪಚರಿಸಿದರು ೧೮೩

ಪುಷ್ಪ ಸೋಕಿದರೆ ಬಾಡುವ ಕೋಮಲಾಂಗವ
ತೊಪ್ಪಲ ಮೇಲ್ಹರಹಿದರು
ಅಚ್ಯುತಾನಂತ ಶ್ರೀ ಕೃಷ್ಣನೆ ಗತಿಯೆಂದು
ಕತ್ತಿಗೆ ಮಯ್ಯನಿಕ್ಕಿದಳು ೧೮೪

ಕಂಬುಚಕ್ರಧಾರಿ ವೈಕುಂಠವಾಸಗೆ ವಂದಿಸಿದಳು ತನ್ನ ಮನದಿ
ಅಂಬುಜಮಿತ್ರ ಗೋವಿಂದನೆ ಗತಿಯೆಂದು ರಂಭೆ ತಾ
ಸ್ತುತಿಯ ಮಾಡಿದಳು ೧೮೫

ಅರಣ್ಯದಲ್ಲಿ ತನ್ನ ನೆನೆವ ಕುಮಾರಿಗೆ ಕಾರುಣ್ಯದಿಂದೊದಗಿದನು
ಪ್ರಹಲ್ಲಾದವರದ ಪಾಲಿಸಿದನು ಹಸುಳೆಗೆ ಮಾಯದ
ನಿದ್ರೆ ಕವಿದವು ೧೮೬

ಕಾಮಧೇನು ಕಲ್ಪವೃಕ್ಷ ಚಿಂತಾಮಣಿ ಭಕ್ತರಿಗೊಜ್ರಪಂಜರನೆ
ನಿತ್ಯ ನಿರ್ಮಳ ಅಚ್ಯುತಾನಂತ ನರಹರಿ ಪೊಕ್ಕನೆ
ದೂತರ ಮನವ ೧೮೭

ಎತ್ತಿದರು ಕೊಲೆಘಾಟಿಕರಾಯುಧವನ್ನು ಮತ್ತೆ
ಯೋಚಿಸಿ ತಮ್ಮ ಮನದಿ
ಪುತ್ರಿಯ ಕೊಂದ ಪಾತಕ ತಮಗೆನುತಲೆ
ಎತ್ತಿದಾಯುಧವನಿಳುಹಿದರು ೧೮೮

ಗರ್ಭಾಂಗಿಯ ಕೊಂದರೆ ಪಾಪ ತಮಗೆಂದು
ಒಬ್ಬರೊಬ್ಬರು ಮಾತನಾಡಿ
ಕೊಬ್ಬಿದ ಮೃಗವ ಕಡಿದು ಶೋಣಿತವನ್ನು
ಉರ್ವೀಶಗೊಯ್ದು ಒಪ್ಪಿಸುವ ೧೮೯

ವ್ಯಾಘ್ರ ಕಾಡು ಕೋಣ ಮೃಗವಿದ್ದಯಡೆಯಲ್ಲಿ
ವಾರಿಜಗಂಧಿಯ ಬಿಟ್ಟು
ಜೀವಗಳಳಿದು ಅಯೋಧ್ಯಕ್ಕೆ ಬಂದರು
ರಾಯಗೆ ಗುರುತ ತೋರಿದರು ೧೯೦

ಕಪ್ಪೋಡಲಿನ ಪುಳಿಂದರು ಬಂದರು
ತಪ್ಪದೆ ರಾಯನೋಲಗಕೆ
ಹತ್ಯಮಾಡಿ ಬಂದೆವು ನಿನ್ನ ಕುಮಾರಿಯ
ಚಿತ್ತೈಸು ಜೀಯವಧಾನ ೧೯೧

ಕೊಂದು ಬಂದೆವು ನಿನ್ನ ಆತ್ಮಸಂಭವೆಯನ್ನು
ತಂದೆವು ಮುದ್ರೆಯುಂಗುರವ
ಕೊಂಡಿಳುಹಿದರು ನೆತ್ತರು ಪೂಸಿದಲಗನು ಕಂಡು
ಮನದಲಿ ಮರುಗಿದನು ೧೯೨

ಕುಂ(ಜವ)ಗಿಣಿಯನು ಪಂಜರದೊಳಗಿಟ್ಟು
ಅಂಜೂರ ಕೊಯ್ದು ಕೊಟ್ಟಂತೆ
ಕುಂಜರಗಮನೆಯ ಕೈಯಿಂದ ಕೊಲಿಸಿದೆ
ಬೆಂದೊಡಲನೆಂತು ಪೊರೆಯಲಿ ೧೯೩

ತುಂಬೂರಗೊಳ್ಳಿಯ ಒಲೆಯೊಳಗಿಟ್ಟಂತೆ
ಕೆಂಡದೊಳಾಜ್ಯ ಬಿದ್ದಂತೆ
ತಂದೆ ತಾಯಿ ಪ್ರಧಾನಿಪರಿವಾರವು
ಬೆಂದರು ಶೋಕಾಗ್ನಿಯಿಂದ ೧೯೪

ಇತ್ತಲಾರಾಯ ಹಂಬಲಿಸಿ ತಾನಳುತಿರೆ ಪುತ್ರಿಯ
ಮೇಲೆ ಸ್ನೇಹದಲಿ
ಹಕ್ಕಿ ಪಕ್ಷಿಯು ನಲಿದವು ಮೂಢರಾತ್ರೇಲಿ
ತಲೆಯೆತ್ತಿದವಬ್ಜ ಬಂಧುಗಳು ೧೯೫

ಎಚ್ಚೆತ್ತು ನೋಡಿದಳಾಗ ಚಂದ್ರಾವತಿ ಸುತ್ತಲ
ಮೃಗದ ಸಂಚರವ
ಬಿಟ್ಟುಹೋದರು ಪಾತಕರೆನ್ನ ಅಡವೀಲಿ ತುತ್ತಾದೆ
ಹಸಿದ ಹೆಬ್ಬುಲಿಗೆ ೧೯೬

ಘುಡುಘುಡಿಸುವ ಸಿಂಹನಾದಕ್ಕೆ ಅಂಜುವಳು
ಬೆದರುವಳು ವ್ಯಾಘ್ರದಟ್ಟುಳಿಗೆ
ಮೊರೆವ ಸರ್ಪವ ಕಂಡು ನಯನವ ಮುಚ್ಚುವಳು
ಮರಳಿ ಧೈರ್ಯವನೆ ಮಾಡುವಳು ೧೯೭

ನಾನ್ಯಾರೊ ತಾಯಿ ತಂದ್ಯಾರೊ ಭಾವಿಸಿದರೆ
ಮಾಯಪಾಶಕೆ ಗುರಿಮಾಡಿ
ಮಾರಜನಕ ದಾನವಾರಿಯ ನೆನೆದರೆ ಅಹುದು
ಮುಕ್ತಿ ಸಾಧನವು ೧೯೮

ಜಲವ ಪೊಕ್ಕು ದೈತ್ಯನ ಸಂಹರಿಸಿದೆ ಅಜಗೆ
ವೇದವನೆ ತಂದಿತ್ತೆ
ಧರೆ ಕುಸಿಯಲು ಕೂರ್ಮನಾಗಿ ಜನಿಸಿದೆ
ಪರಬ್ರಹ್ಮ ಸಲಹಬೇಕೆನ್ನ ೧೯೯

ಧಾರುಣಿ ಕದ್ದೊಯ್ದ ದೈತ್ಯನ ಸೀಳಿದೆ ಮೇಲೆ
ಹರವಿದೆ ಮುನ್ನಿನಂತೆ
ಬಾಧೆ ಪಡುವ ಪ್ರಹ್ಲಾದಗೆ ವರವಿತ್ತೆ
ಕಾರುಣ್ಯನಿಧಿ ಸಲಹೆನ್ನ ೨೦೦

ಗರುವದ ಬಲಿಯ ಪಾತಾಳಲೋಕದಲಿಟ್ಟೆ
ಜನನಿಯ ಶಿರವ ಛೇದಿಸಿದೆ
ಮಲತಾಯ ಮಾತಿಗೆ ವನವಾಸ ಕೈದಿದೆ
ರಘುರಾಮ ನೀ ಸಲಹೆನ್ನ ೨೦೧

ಪುಟ್ಟ ಶಿಶುವಾಗಿ ಗೋಪಿಗೆ ಮುದ್ದು ತೋರಿದೆ
ಬೆಟ್ಟಲ್ಲಿ ಗಿರಿಯ ನೆಗಹಿದೆ
ಮಿತ್ರೇರ ವ್ರತಭಂಗ ಚರಿಸಿದೆ ಜಗದಲಿ
ಕರ್ತೃಪಾವನ ಸಲಹೆನ್ನ ೨೦೨

ತುರಗವನೇರಿ ಚರಿಸಿದೆ ಜಗದಲಿ ಉಳುಹಿದೆ
ಧರ್ಮಬೀಜವನು
ನೆಗಳ ಕತ್ತರಿಸಿ ಗಜೇಂದ್ರಗೆ ವರವಿತ್ತೆ
ಗರುಡವಾಹನ ಸಲಹೆನ್ನ ೨೦೩

ಕಾಲೆಮದೂತರ ಕಂಡಜಾಮಿಳ ತನ್ನ ಬಾಲನ ನಾರಗನೆನಲು
ಕೇಳಿ ವೈಕುಂಠವನಿತ್ತ ನಾರಾಯಣ ಪಾಲಿಸು
ಎನ್ನವಾಕ್ಯಗಳ ೨೦೪

ಸ್ನಾನ ಸಂಧ್ಯಾವನೆ ಮಾಡೆ ಮುನಿ ಬಂದ
ಭಾನುಮಧ್ಯಾಹ್ನಕಾಲದಲಿ
ಹೋಮ ನೇಮ ಆದಿತ್ಯಗರ್ಘ್ಯವ
ಕೊಟ್ಟು ಅರಣ್ಯಕ್ಕಾಗಿ ಚರಿಸಿದ ೨೦೫

ಭಾರವ ಕಟ್ಟಿದ ಆ ಕುಶ ದರ್ಭೆಯ ಏರಿದಶ್ವತ್ಥವೃಕ್ಷವನು
ನಾರಾಯಣನ ಧ್ಯಾನದಲಿ ರೋದಿಸುತಿಪ್ಪ ಆ ಮಾನಿನಿ
ಧ್ವನಿಯ ಕೇಳಿದನು ೨೦೬

ತರ್ಕ ವೇದಾಂತ ಪುರಾಣಕ್ಕೆ ಸಿಲುಕದ
ಅಚ್ಯುತಾನಂತ ಮೂರುತಿಯೆ
ಇತ್ತ ಬಂದರೆ ಎನ್ನ ಸಲಹಬೇಕೆನುತಲೆ ಬಿಟ್ಟಳೆ
ಮನದ ಭೀತಿಯನು ೨೦೭

ಇಷ್ಟು ಪರಿಯಿಂದ ಚಂದ್ರಾವತಿ ಸ್ತುತಿಸಲು
ಆಕೆಯ ದನಿಗಳ ಕೇಳಿ
ಸುತ್ತಿ ಬಂದನೆ ಘನವಿಪಿನದೊಳಾ ಮುನಿ
ಮಿತ್ರೆಯ ಕಂಡ ದೂರದಲಿ ೨೦೮

ನಿತ್ಯದಾರಿದ್ರಿನಿ ಧನವ ಕಂಡಂತೆ ದೃಷ್ಟಿ ಬಂದಂತೆ ಅಂಧಕಗೆ
ಹುಟ್ಟುಬಂಜೆ ಕುಮಾರನ ಪಡೆದಂತೆ ಉಕ್ಕಿದಳ್ ಹರುಷಾಬ್ಧಿಯಲಿ ೨೦೯

ಹಸಿದು ಬಂದವರು ಮೃಷ್ಟಾನ್ನವ ಕಂಡಂತೆ ಶಿಶುವಿಗೆ
ತಾಯಿ ಬಂದಂತೆ
ತೃಷುವಿನಿಂದಲಿ ಬಂದು ಸುರನದಿ ಕಂಡಂತೆ ಶಶಿಮುಖಿ
ಕಂಡಳಾ ಮುನಿಯ ೨೧೦

ಮತ್ತ ಗಜಗಮನೆ ಮೆಲ್ಲಡಿಗಳ ಇಡುತಲೆ
ಒತ್ತುತ್ತ ಕಂಗಳ ಜಲವ
ಉತ್ತಮ ಮುನಿಯ ಚರಣದ ಮೇಲಿಟ್ಟಳು
ಮುತ್ತಿನಬಟ್ಟಿನ ಪಣೆಯ ೨೧೧

ಮುತ್ತೈದೆ ಆಗು ಪುತ್ರನ ಪಡೆ ನಿನಗೊಬ್ಬ
ಉತ್ತಮಪತಿಯಾಗಲೆಂದು
ಅಷ್ಟಸೌಭಾಗ್ಯವಂತೆ ಆಗೆಂದು ಹರಸುತ ಎತ್ತಿದ
ಬಲದ ಹಸ್ತದಲಿ ೨೧೨

ಇಕ್ಕಿದ ಯಜ್ಞೋಪವೀತ ತುಳಸಿದಂಡೆ ಒಪ್ಪುವ
ಜಪದ ಮಾಲಿಕೆಯು
ಒಪ್ಪುವ ಸುಳಿಪಲ್ಲು ತಳಿಲಗಾವಿಯನುಟ್ಟು
ಒಪ್ಪಿದ ಮೃಡಹರನಂತೆ ೨೧೩

ಇಂದುಧರನೆಂಬೆನೆ ನಂದಿವಾಹನವಿಲ್ಲ
ಅಂಬುಜೋದ್ಭವ ನೀನಲ್ಲ
ಗೋವಿಂದನೆಂಬೆನೆ ಶಂಖಚಕ್ರ ಗರುಡನಿಲ್ಲ ತಂದೆ
ನೀನಾರು ಹೇಳೆಂದು ೨೧೪

ಪರಿಪರಿ ವಿಧದಲಿ ವಂದನೆಗಳ ಮಾಡಿ ಬಾಲೆಯು
ಬೆಸಗೊಂಡಳಾಗ
ಬಾಲೆಯು ಬೆಸಗೊಳೆ ಮನದಿ ಹರುಷ ತಾಳಿ ಹೇಳತೊಡಗಿದ
ಮುನಿಪಾಲ ೨೧೫

ಮುನಿಗಳು ನಾವಿಪ್ಪ ಸ್ಥಳವು ಕಾಂತಾರವು
ಸಮಿತಿಗೋಸ್ಕರ ಇತ್ತ ಬಂದೆ
ಅಡವಿಯೊಳಗೆ ಒಬ್ಬಳೇತಕ್ಕೆ ಚರಿಸುವೆ ನುಡಿ ನಿನ್ನ
ಮನದ ಸಂದೇಹ ೨೧೬

ನಾರಿ ನೀನಾರೊಬ್ಬಳು ಸ್ತ್ರೀಯೊ ಸಾರಂಗವೊ
ಮಾನಿನಿಸ್ತ್ರೀಯೊ ರಾಕ್ಷಸಿಯೊ
ಅರಣ್ಯದೊಳಗೊಬ್ಬಳೇತಕ್ಕೆ ಚರಿಸುವೆ ಮಾಜಬೇಡವೆ ಚಪಳಾಂಗಿ ೨೧೭

ರಕ್ಕಸಿ ನಾನಲ್ಲ ರಘುಮಹರಾಯನ
ಪಟ್ಟದರಸಿಯ ಕುಮಾರಿ
ಒಪ್ಪಿಸಿಕೊಟ್ಟನು ಕೊಲೆಘಾಟಿಕರಿಗೆನ್ನನು ಬಿಟ್ಟು
ಹೋದರು ಪ್ರಾಣವನು ೨೧೮

ಪುತ್ರಿಯ ಕೊಲುವರೆ ಕ್ಷತ್ರಿಯಮತದಲಿ
ಹತ್ಯೆಮಾಡುವರೆ ಸ್ತ್ರೀಯರನು
ಹೆತ್ತ ಮಕ್ಕಳ ಕೊಲ್ಲುವರುಂಟೆ ಧರೆ ಮೇಲೆ
ತಪ್ಪೇನಾಯ್ತು ನಿನ್ನಿಂದ ೨೧೯

ನಡೆವಲ್ಲಿ ನುಡಿವಲ್ಲಿ ಸ್ವಪ್ನಜಾಗರದಲ್ಲಿ
ನುಡಿದಲ್ಲಿ ಉದಕಪಾನದಲಿ
ಮಗಳೆ ನಿನಗೆ ಸಂದೇಹವೇನಾಯ್ತೆಂದು ಮುನಿ
ಗೌತಮರು ಕೇಳಿದರು ೨೨೦

ಮದುವೆಯ ಮಾಡಲಿಲ್ಲವು ನಮ್ಮಯ್ಯನು
ಕೊಡಗೂಸಾಗಿದ್ದೆ ಆಲಯದಿ
ವಿಧಿವಶದಿಂದ ಉದ್ಭವಿಸಿತು ಗರ್ಭವು ಅಡವಿಗೀಡಾಗಿ
ಅಟ್ಟಿದರು ೨೨೧

ಏಳುನೆಲೆಯ ಮಣಿಮಾಡಲಿದ್ದೆನು ಗಾಳಿ
ಬೀಸಲು ಸೋಂಕದ್ಹಾಗೆ
ನಾನೊಂದಿವಸ ನೀರಾಟಕ್ಕೆ ನಡೆದೆನು ನಾರೀರನೆ
ಒಡಗೊಂಡು ೨೨೨

ಗಂಗೇಲಿ ನೀರಾಟವಾಡುವಸಮಯದಿ ಹಿಂದಣ
ಪೂರ್ವಕಲ್ಪನೆಯು
ಕೆಂದಾವರೆಯಾಗಿ ಬಂದೆನ್ನ ಸೋಂಕಲು ನಿಂದವು ಗರ್ಭ ಸ್ಥಿರವಾಗಿ ೨೨೩

ಅಂದೆ ಆಗಲೆ ಮನಕೆ ಸಂದೇಹದೋರಿತು
ನಿಂದವು ಗರ್ಭ ಸ್ಥಿರವಾಗಿ
ತಂದೆ ತಾಯಿ ನಿಂದ್ಯವನಿಟ್ಟು ಎನ್ನಮೇಲೆ
ಕೊಂದುಬಾರೆಂದು ಅಟ್ಟಿದರು ೨೨೪

ಕೇಳಿ ಸೈರಿಸಲಾರದೆ ನಮ್ಮಯ್ಯನು ಊಳಿಗದವರ ಕರೆಸಿದನು
ಸೀಳಿ ಬನ್ನಿವಳನು ಎನುತಲೆ ಕಳುಹಿದ
ಖೂಳರು ಎನ್ನುಳುಹಿದರು ೨೨೪

ಎಚ್ಚೆತ್ತು ಬೆಚ್ಚಿ ತಲ್ಲಣಿಸಿದೆ ಪಂಕಜಪತ್ರದೊಳಿಪ್ಪ ನೀರಂತೆ
ಲಕ್ಷ್ಮಿಯ ಪತಿಯ ಧ್ಯಾನದಲಿದ್ದೆ ನಿಮ್ಮಂಥ
ಉತ್ತಮರನು ಕಂಡೆನೆಂದು ೨೨೫

ಧ್ಯಾನಿಸಿ ನೋಡಿದ ಬಾಲೆಯ ಮುಖವನು
ಊನಗಳಿಲ್ಲ ಈಕೆಯಲಿ
ಆರೈದು ಸಲಹುವೆ ನಮ್ಮಾಶ್ರಮದಲಿ
ಪೂರ್ಣಗರ್ಭಿಣಿಯೆಂದು ತಿಳಿದ ೨೨೬

ವಿವರಿಸಿ ನೋಡಿದ ಅಬಲೆಯ ಮುಖವನು
ಮುನಿಯಿಟ್ಟ ಗರ್ಭವೆಂದೆನುತ
ಕರೆದೊಯ್ದು ಸಲಹುವೆ ನಮ್ಮಾಶ್ರಮದಲಿ ಹೆಗಲ
ಮೇಲಿಟ್ಟ ನಾ ಮುನಿಯು ೨೨೭

ನಾರಿಯ ಹೆಗಲ ಮೇಲಿಟ್ಟನು ದರ್ಭೆಯ
ಭಾರವ ಬಗಲಲ್ಲೊಂಚಿದನು
ದೂರದಿಂದಲೆ ಕಂಡನು ತನ್ನ ಸತಿಯಳ
ಭಾರವನಿಳುಹು ಬಾರೆಂದ ೨೨೮

ನವನಾರಿಕುಂಜರ ಪಂಚತುರಂಗವು ನವಪರಿಯಾದ ಕರ್ನಿಕೆಯ
ಹೆಗಲ ಮೇಲಿಟ್ಟು ಬಂದಾಮುನಿಯ ಕಂಡಳು ಬೆರಗಾಗಿ
ನಿಂತು ನೋಡಿದಳು ೨೨೯

ಎತ್ತಣಿಂದಲೆ ತಂದಿರಿ ಕೋಮಲಾಂಗಿಯ
ಕಕ್ಕಸಕುಚದ ಬಾಲೆಯನು
ಸೊಕ್ಕುಜವ್ವನೆಯನಿತ್ತವರಾರು ಎನುತಲೆ
ಬೆಕ್ಕಸಬೆರಗಾಗಿ ನಿಂತು ೨೩೦

ಹುಲಿಚರ್ಮದ್ವಾಸಿಗೆ ತರಗೆಲೆಮಂದಿರ
ಉಡುವುದು ನಾರಿನೊಸ್ತ್ರವನು
ಇಡುವಾಭರಣ ವಿಭೂತಿ ರುದ್ರಾಕ್ಷಿಗೆ ಮಡದಿರಿಬ್ಬರು
ಯಾತಕೆಂದು ೨೩೨

ವಿವರಿಸಿ ತಿಳಿಯದೆ ಅನಿರುದ್ಧ ನುಡಿವರೆ ಮಗಳ
ತಂದೆನು ನಿನಗೊಬ್ಬಳ
ಶ್ರೀಹರಿ ಕರುಣಿಸಿದ ಅರಣ್ಯದ ಕುಮಾರಿಯ
ಭ್ರಮರಕುಂತಳೆಯ ನಿಳುಹೆಂದ ೨೩೩

ಮಗಳೆಂಬ ಮಾತಿಗೆ ಮಿಗೆ ಹರುಷವ ತಾಳಿ
ಕರವಿಡಿದು ಕರೆತಂದಳಾಗ
ಬಳಲಿ ಬಂದಳೆಂದು ಚರಣವ ತೊಳೆದಳು ಮೇಲುಕಟ್ಟಿ
ತನುವು ಹೊಂಬಣ್ಣ ೨೩೪

ಕಮ್ಮೆಣ್ಣೆ ಕಸ್ತೂರಿ ಒತ್ತಿ ನೀರೆರೆದಳು ಹೊಂಬಟ್ಟೆ
ದೇವಾಂಗವನುಡಿಸಿ
ನಕ್ಷತ್ರ ಮಧ್ಯದಿ ಇಪ್ಪ ಚಂದ್ರಮನಂತೆ ಒಪ್ಪಿದಳಾ
ಚಂದ್ರಾವತಿಯು ೨೩೫

ಸುತ್ತಲಿದ್ದ ಋಷಿಪತ್ನಿಯರೆಲ್ಲರು ಮೃಷ್ಟಾನ್ನವನುಣಿಸಿದರು
ಪಟ್ಟು ಪಟ್ಟಾವಳಿ ಉಡಕೊಟ್ಟವರೆಲ್ಲರು
ಹೆತ್ತವರಂತೆ ಸಲಹಿದರು ೨೩೬

ಬಾಲಕಿ ಗೃಹದೊಳು ಒಬ್ಬಳೆ ಇರುವಳು ಏನು
ಅರಿಯದ ಹಸುಮಗಳು
ಬೇರೊಂದು ಪರ್ಣಶಾಲೆಯ ಕಟ್ಟಿಕೊಟ್ಟರು
ಬಾಲೆಯನಲ್ಲಿರಿಸಿದರು ೨೩೭

ಏನು ಅರಿಯದ ಬಾಲೆ ಒಬ್ಬಳೆ ಇರುವಳು ಯಾರು
ಇಲ್ಲದ ಗೃಹದೊಳಗೆ
ಆರೈದು ಸಲಹಿ ಪಾಲನೆ ಮಾಡೆಂದು ಹೇಳಿದ
ಮುನಿ ತನ್ನ ಸತಿಗೆ ೨೩೮

ಇರುಳೆದ್ದು ನೋಡುವಳು ಕರೆದು ಮಾತಾಡುವಳು
ಬೆದರಬೇಡೆಂದು ಹೇಳುವಳು
ಶರಣುರಕ್ಷಕ ತನ್ನ ನೆನೆವ ಕುಮಾರಿಗೆ ಮರೆಸಿದ
ತಾಯಿತಂದೆಯರ ೨೩೯

ನಾರಿಗೆ ನಡುವಿರುಳು ವೇದನೆ ತೊಡಗಿತು ಹೇಳದೆ
ಮಗಳು ನಾಚುವಳು
ಆಲೀಲಿ ಜಲವ ತುಂಬುವಳು ದುಗುಡದಿಂದ ಆಗ
ಅತ್ತಳೆ ಋಷಿ ಪತ್ನಿ ೨೪೦

ಸುತ್ತಲಿದ್ದ ಋಷಿ ಪತ್ನಿಯರೆಲ್ಲರುಪುತ್ರನ ಪಡೆವೆ ಎಂದೆನುತ
ಅಚ್ಯುತಾನಂತ ಶ್ರೀ ಕೃಷ್ಣನ ನೆನೆಯೆಂದು
ಮಿತ್ರೆಗುಪದೇಶ ಮಾಡಿದರು ೨೪೧

ಸಾರೆ ಷೋಡಶರೂಪ ಜೀವ ಪರಮನೊಳು
ಕೂಡಿಸಿ ನಲಿದಾಡುವಂಥ
ಮೀರಿದ ಗರ್ಭವಾಸವ ಬಿಟ್ಟು ಮುನಿಸುತ ಏರಿದ
ಹೃದಯ ಮಂಟಪವ ೨೪೨

ಸಾರೆಷೋಡಶರೂಪದಳವಿಪ್ಪ ಎಡೆಯಲ್ಲಿ
ಕೂಡಿದ ಭ್ರೂಮಧ್ಯದಲಿ
ಧಾರುಣಿಯೊಳಗವತರಿಸುವೆ ಎನುತಲೆ ಘ್ರಾಣೇಂದ್ರಿಯದಿಂ
ದುದಿಸಿದನು ೨೪೩

ನೆರೆದಿದ್ದ ಜನರೆಲ್ಲಾಹರಿದೋಡಿ ಹೋದರು
ಮುನಿಗಳ ಕರೆದು ಹೇಳಿದರು
ಧರೆಯೊಳು ಶಿಶುವಲ್ಲ ಅದ್ಭುತವಾಗಿದೆ ಮರಳಿ
ನೋಡುವರೆ ಅಂಜುವೆವು ೨೪೪

ಜಾತಿ ಸೂತಕವಿಲ್ಲ ಆ ತಪಮುನಿಸುತ ನಾಸಿಕದಿಂದುದಿಸಿದನು
ಭೂತಳದೊಳಗಿದು ಆಶ್ಚರ್ಯವೆನುತಲೆ ಕಾಂತೇರ್
ವಿಸ್ಮಯವಾದರಲ್ಲಿ ೨೪೫

ಮಲತಿದ್ದ ರತ್ನ ಮಾಣಿಕವು ಶೋಭಿಸುವಂತೆ
ಕತ್ತಲೆಗೆ ದೀವಿಗೆಯನಿತ್ತಂತೆ
ಪ್ರಜ್ವಲಿಸುವ ಯಜ್ಞಪುರುಷನಂತೆ ಮುನಿಸುತ
ಉದಿಸಿದ ಬಾಲಕನಂತೆ ೨೪೬

ನಾಲ್ಕು ವೇದಗಳ ಆಚರಿಸುವ ಅಜನಂತೆ
ಶಾಂತತ್ವದಲಿ ಶಿವನಂತೆ
ರೂಪುಲಾವಣ್ಯದಿ ಲಕ್ಷ್ಮಿಯ ಪತಿಯಂತೆ
ನಾಶಿಕೇತವತರಿಸಿದನು ೨೪೭

ಗುಡಿಯ ಕಟ್ಟಿದರುದ್ದಾಳಿಕನ ಪಿತೃಗಳು
ಸುರಿದವು ಪುಷ್ಪವಂಬರದಿ
ಸೆರೆ ಹಿಂಗಿದವು ಯಮಲೋಕವೆಂದೆನುತಲೆ ಪರಮ
ಹರುಷದಲಿ ಹಿಗ್ಗಿದರು ೨೪೮

ಹೆಚ್ಚಿ ಹಿಗ್ಗಿ ನಲಿದರು ಉದ್ದಾಳಿಕನ ಹೆತ್ತ
ತಾಯಿ ಪಿತಾಮಹರು
ಪುತ್ರ ಹುಟ್ಟಿದ ನಮ್ಮ ಕುಲದೊಳಗೆನುತಲೆ ಹೊಕ್ಕರೆ
ಸ್ವರ್ಗಲೋಕವನು ೨೪೯

ಬಂದು ಹೊಕ್ಕಳೆ ತಿಳಿಗೊಳನ ಚಂದ್ರಾವತಿ
ಕಂದಗೆ ಎರೆದರು ನೀರ
ಜಂಬೀರರಸ ಜೇನುತುಪ್ಪವನೆ [ಊ]ಡಿ
ಮಂದಿರದಲಿ ಮಲಗಿಸಿದರ್ ೨೫೦

ಕಟ್ಟಿದರು ಮಂಡೆಯ ಪಾವುಡೆಯಲಿ ಕೊಟ್ಟರೆ
ಖಾರ ಚರ್ವಣೆಯ
ಇಟ್ಟರೆ ಅಷ್ಟದಿಕ್ಕಿಗೆ ಎಂಟು ರಕ್ಷೆಯ ಹರಸಿ ಆರತಿಯನೆತ್ತಿದರು ೨೫೧

ಅಂಧಕಾರವು ಕವಿದವು ಚಂದ್ರ ಮುಳುಗಿದ
ಮಂದಿಯ ಉಲುಹು ತಗ್ಗಿದವು
ಕಂದನ ಮುಂದಿಟ್ಟು ನೊಂದಳೆ ಮನದಲಿ ಮುಂದೇನು
ಇದಕೆ ಉಪಾಯ ೨೫೨

ಈತನಾದರೆ ತನ್ನ ತಾತನ ತೋರೆಂಬ
ಲೋಕದೊಳಗೆ ಪರಿಹಾಸ್ಯ
ಮಾತಾಪಿತರು ಎಲ್ಲಿಪ್ಪರೆಂದರಿಯೆನು ಕ್ಷತಿಯಾಯಿತು
ಎನ್ನ ಬದುಕು ೨೫೩

ಪುತ್ರನೆಂದುಳುಹಿಕೊಂಬೆನೆ ಲೋಕ ನಗುವುದು
ಒತ್ತಿಕೊಂದರೆ ಪಾತಕವು
ಎತ್ತಿಕೊಂಡ್ಹೋಗಿ ತುಂಬಿದ ನದಿಯಲ್ಲಿ ಬಿಟ್ಟು
ಬರುವುದೆ ಉಚಿತವು ೨೫೪

ಕತ್ತಲೆಯಲಿ ಕಂದನ ಎತ್ತಿ ತಾ ನಡೆದಳು
ಮತ್ತಗಮನೆ ನೀರ ತಡಿಗೆ
ಕೊಟ್ಟಳೆ ಸ್ತನ್ಯಪಾನ್ಯವ ತನ್ನ ಕಂದಗೆ ಸ್ತೋತ್ರ
ಮಾಡಿದಳೆ ಆ ನದಿಯ ೨೫೫

ರಕ್ಷಿಸವ್ವಾ ತಾಯೆ ಎನ್ನ ಕುಮಾರನ ಇತ್ತೆ
ನಾನಿನ್ನ ಕೈಯೊಳಗೆ
ಕರ್ತೃ ಪಾವನೆಯ ಕಾರುಣ್ಯದಿ ಸಲಹೆಂದು ಸ್ತೋತ್ರ
ಮಾಡಿದಳೆ ಆ ನದಿಯ ೨೫೬

ಪಾಲಿಸವ್ವಾ ತಾಯೆ ಎನ್ನ ಕುಮಾರನ ಮೀನು
ಮೊಸಳೆ ಮುಟ್ಟದ್ಹಾಂಗೆ
ಲಾಲಿಸಿ ಕೇಳು ಅನಾಥೆಯ ನುಡಿಯನ್ನು ಪಾಲಿಸು
ಎನ್ನ ಆತ್ಮಜನ ೨೫೭

ಕಟ್ಟಿದಳು ಕುರುಂಬಾಳೆ ತೊಟ್ಟಿಲವ ಕೊಟ್ಟಳೆ ಕಂದಗೆ ಮೊಲೆಯ
ಇಟ್ಟರೆ ಮರದೊಟ್ಟಿಲೊಳಗೆ ಕುಮಾರನ ಬಿಟ್ಟಳೆ
ಹರಿವ ನೀರೊಳಗೆ ೨೫೮

ಎಡಬಲಕೊಲಿಯದೆ ಗಿಡಗಂಟೆ ಸೋಂಕದೆ ತಡಿಗೆ
ಸೇರಿಸು ಎನ್ನ ಮಗುವ
ಕಡಲಶಯನ ನಿನ್ನ ಕೈಯೊಳಗಿತ್ತೆನು 'ಕೊಲಲು
ಕಾಯಲು ನಿನ್ನ ಭಾರ' ೨೫೯

ದೃಢ ಬುದ್ಧಿಯಲಿ ತನ್ನ ಮಗುವ ನೀರೊಳಗಿಟ್ಟು ನಡೆದಳೆ
ಮತ್ತೊಂದು ಕಾನನಕೆ
ತರಗೆಲೆ ಮೆದ್ದು ತುಂಬಿಸುವಳು ಹಸಿವನು ಮೃಗದಂತೆ
ಸಂಚರಿಸುವಳು ೨೬೦

ಅರುಣನ ಉದಯವಾಗದ ಮುನ್ನ ಸತಿಯರು
ತೆಗೆದು ಬಾಗಿಲ ನೋಡಿದರು
ತರಳ ಸಹಿತ ಚಂದ್ರಾವತಿಯಿಲ್ಲವೆನುತಲೆ ಮುನಿಗಳ
ಕರೆದು ಹೇಳಿದರು ೨೬೧

ಕಂದ ಸಹಿತ ಚಂದ್ರಾವತಿಯಿಲ್ಲವೆನುತಲೆ
ಸಂದಿಗೊಂದಿಯನರಸಿದರು
ಕಂದ ಸಹಿತವಾಗಿ ಮೃಗಕಚ್ಚಿ ಒಯಿದವೊ
ನೊಂದರಕಟಾ ವಿಧಿಯೆನುತ ೨೬೨

ಮೇಲುಗಿರಿಯ ತುದಿಯಲಿ ಸೂರ್ಯನುದಿಸಿದ
ತಾವರೆಕಮಲ ಅರಳಿದವು
ಆ ಮುನಿಯೆದ್ದು ನದಿಯ ತೀರಕೆ ಬಂದು ನೀರೊಳು
ತೊಟ್ಟಿಲ ಕಂಡ ೨೬೩

ಸಣ್ಣ ಬೆರಳು ತನ್ನ ಬಾಯೊಳಗಿರಿಸಿದೆ ಕಣ್ಣ
ಮುಚ್ಚುತ ತೆರವುತಲೆ
ಪೊನ್ನಪುತ್ಥಳಿಯಂತೆ ಥಳಥಳಿಸುವ ಪುಟ್ಟ
ಚಿಣ್ಣನ ತೊಟ್ಟಿಲ ಕಂಡ ೨೬೪

ಭೋರ್ಗರೆಯುತ ಬರುವ ನೀರ ಸೆಳವಿನಲಿ
ಆನಂದದಿಂದೆಲೆ ಕಂಡ
ತಾವರೆಸುತನ ಕಟ್ಟಳೆ ಮೀರಬಲ್ಲದೆ ಸೇರಿತು
ಮುನಿಯ ಕೈಯೊಳಗೆ ೨೬೫

ಉಬ್ಬಿದ ಶಿಶುವ ಕಾಣುತ ಉದ್ದಾಳಿಕನು
ತಬ್ಬಿದ ತನ್ನ ಆತ್ಮಜನ
ಉದ್ದಾರವಾದರಿಂದಿಗೆ ಎನ್ನ ಪಿತೃಗಳು
ಪದ್ಮನಾಭನ ಕೃಪೆಯಿಂದ ೨೬೬

ಇಂದು ಎನ್ನವರಿಗಾಯಿತು ಸ್ವರ್ಗಲೋಕವು
ಹೊಂದಿ ಹೋದರು ಪುಣ್ಯಗತಿಗೆ
ಚಂದದಿ ಜಾತಕರ್ಮವ ಮಾಡಿ ಮಧುವಿಟ್ಟು
ಕಂದಗೆ ಮೈದೊಳಸಿದನು ೨೬೭

ದಶರಾತ್ರೆ ಕಳೆದವು ಋಷಿಯ ಕುಮಾರಗೆ
ಶಿಶುವಿನ ನಾಮವೆಂದೆನುತ
ಅಶರೀರ ವಾಕ್ಯವು ಆದವಂಬರದಲಿ
ಹೆಸರಿಡು ನಾಶಿಕೇತೆನುತ ೨೬೮

ಕಟ್ಟಿದ ಪರ್ಣಶಾಲೆಯಲಿ ಕಂದಗೆ ಕೃಷ್ಣಾಜಿನದ ತೊಟ್ಟಿಲನು
ಎತ್ತಿಕೊಂಡು ಹೋಗಿ ಮಲಗಿಸಿ ಹೆಸರನು
ಇಟ್ಟನು ನಾಶಿಕೇತೆನುತ ೨೬೯

ಅತ್ತರೆ ಜೇನುತುಪ್ಪವ ತಂದು ಉಣಿಸುವ ತೊಟ್ಟಿಲ
ಹಿಡಿದು ತೂಗುವನು
ಅತ್ತಿತ್ತ ನೋಡದೆ ಆಲಂಬದಿಂದಲೆ ಹೊತ್ತು
ಗಳೆಯುತಲಿದ್ದ ಮುನಿಯು ೨೭೦

ಬಿಚ್ಚಿ ಆಡುವ ಕೈಕಾಲಳುತ ತಾನಗುತಲೆ ಮತ್ತೊಮ್ಮೆ
ಹೊಡೆ ಮಗುಚುವನು
ಹೊಟ್ಟೆಯಲೆಳೆದು ತಲೆಯೆತ್ತುವ ಭುಜಂಗನಂತಿಕ್ಕುವ
ಅಂಬೆಗಾಲುಗಳ ೨೭೧

ಬಿಂಬಾಧರ ಮೊಳೆಹಲ್ಲು ಸುರಿವ ಜೊಲ್ಲು ಕಂಗಳು
ಕುಡಿನೋಟವೆಸೆಯೆ
ಉಂಗು ಉಕ್ಕುಯೆಂಬ ಸುತನ ಲಾವಣ್ಯವ ಕಂಡು
ಹಿಗ್ಗುತಲಿದ್ದ ಮುನಿಯು ೨೭೨

ಕುಳ್ಳಿರಿಸೊಮ್ಮೆ ಅಲ್ಲಲ್ಲೆ ಸಾಗಿಸುವನು ನಿಲ್ಲಿರಿಸೊಮ್ಮೆ
ನೋಡುವೆನು
ಮೆಲ್ಲನೆ ತೊದಲ್ ನುಡಿಗಳ ಕೇಳಿ ಹಿಗ್ಗುವ
ಗಲ್ಲಕ್ಕೆ ಮುತ್ತನಿಡುವನು ೨೭೩

ಆಡುವ ಮೃಗದ ಬೆನ್ನಟ್ಟಿ ತೀವ್ರದಿಂದ ಓಡುವ
ಹರಿಣನ ಕೂಡೆ
ಓರೆಗಣ್ಣಲಿ ನೋಡುವ ತಮ್ಮಯ್ಯನ ಕಾಡುವ
ಕೈ ಬಿಡದಂತೆ ೨೭೪

ನದಿಯ ತೀರಕೆ ಕಂದನೊಡಗೊಂಡು ಹೋಗುವ
ಆ ಬದಿಯಲಿ ಕುಳ್ಳಿರಿಸುವನು
ಅಡವಿಯಲಿದ್ದ ಫಲಂಗಳ ಕೊಯ್ತಂದು ಒಡನೆ
ಭೋಜನವ ಮಾಡುವನು ೨೭೫

ಮಗ್ಗುಲೊಳಗೆ ಇಟ್ಟು ಮಲಗಿದ್ದ ತರುಳನ
ಎಬ್ಬಿಸಿ ಮೈದಡುಹುವನು
ಉಗ್ರತಪಗಳೆತ್ತ ಹೋದವೊ ಮುನಿಪನ ಹೊದ್ದಿದ
ಮಾಯಪಾಶದಲಿ ೨೭೬

ಮಗನೆಂಬ ಮಮತೆಯಿಂದಲೆ ಹೊತ್ತಗಳೆದನು
ಐದು ವರುಷದ ಪರಿಯಂತ
ಜಡಿದು ಝೇಂಕರಿಸಿ ಅಂಜಿಸಿ ಭಯ ಪಡಿಸುವ
ಬಡಿದು ಬುದ್ಧಿಯ ಕಲಿಸುವನು ೨೭೭

ಅಕ್ಷರಾಭ್ಯಾಸವ ಮಾಡಬೇಕೆಂದು ಗಂಧಾಕ್ಷತೆ ಫಲಪುಷ್ಪದಿಂದ
ಇಕ್ಷುದಂಡವು ಕದಳಿ ಭಕ್ಷ್ಯ ಮೋದಕ ಚಿಗುಳಿ ಸಾಕ್ಷಾತ್
ಗಣಪಗೊಂದಿಸಿದ ೨೭೮

ಸರಸ್ವತಿ ಗಣಪಗೆರಗಿ ತಾನು [ತಂಡುಲ] ಹರವಿದ
ಹಲಗೆಯ ಮೇಲೆ
ಓನ್ನಮೋ ನಾರಾಯಣೆನುತಲೆ ಬರೆದನು
ತನಯನಕೈಲಿ ಓದಿಸಿದ ೨೭೯

ತಪ್ಪಿದರೆ [ತಾ]ಡನೆಯನ್ನು ಹಾಕುವ ಕಟ್ಟುವ ತೋಳ್ತೆಕ್ಕೆಗಳ
ಬಿಚ್ಚುವ ಕರುಣದಿಂದಲೆ ಬಿಗಿಯಪ್ಪುವ
ಅಕ್ಷರಾಭ್ಯಾಸವ ಮಾಡಿಸಿದ ೨೮೦

ನೂತನವಾಗಿ ಬಂದಿತು ದಂತಪಂಕ್ತಿಯು ಕಾಂತಿ
ಹೆಚ್ಚಿತು ಕುಮಾರಕಗೆ
ಅಂತರಂಗದಿ ಗುಡಿಗಟ್ಟಿದ ಮುನಿಪನು
ಸಂತೋಷಕಡಲಲುಬ್ಬಿದನು ೨೮೧

ಉದಯದಲೆದ್ದು ಆಶ್ರಮವನ್ನೆ ಹುಡುಕುವ ಚಳೆಯವ
ಕೊಟ್ಟು ಸಾರಿಸುವ
ಅಡವಿಯಲಿದ್ದ ಪುಷ್ಪಂಗಳ ಕೊಯ್ತಂದು
ಗುರುಭಾವದಿಂದ ವಂದಿಸುವ ೨೮೨

ಗಿರಿಗಹ್ವರೆನ್ನದೆ ಗುಡ್ಡಕಾನನದೊಳು ಬಿಡದೆ
ಏಳೊರುಷ ಸಂಚರಿಸಿ
ಅರುಣನ ಉದಯವಾಗದ ಮುನ್ನ ಬಂದಳು
ಮುನಿಯಿದ್ದ ಕಾಂತಾರಕಾಗಿ ೨೮೩

ಬತ್ತಿಗಟ್ಟಿದ ಮಂಡೆ ಬಾಡಿದ ನಯನವು
ಉಟ್ಟಿದ ಮಲಿನದೊಸ್ತ್ರಗಳು
ಅಸ್ತಿಚರ್ಮವು ನೆರೆ ಬತ್ತಿದ ಕಾಯವು
ಹೊಕ್ಕಳೆ ಮುನಿಯಾಶ್ರಮವ ೨೮೪

ಎದ್ದು ಹೋದನೆ ಮುನಿಯು ನದಿಯ ಸ್ನಾನವ
ಮಾಡಲಿದ್ದನೆ ನಾಶಿಕೇತೊಬ್ಬ
ಮುದ್ದು ಬಾಲಕನ ಕಾಣುತಲೆ ಮೊಲೆದೊರೆದವು
ಹೊದ್ದಿನಿಂದಳೆ ರಾಜವದನೆ ೨೮೫

ನಾನಾರೊ ಇವನ ಕಾಣುತ ಮೊಲೆದೊರೆದವು
ನೀರಿನೊಳಿಟ್ಟ ಬಾಲಕನೊ
ತೇಲಿಸಿ ಕಡೆಗೆ ತಂದಿಟ್ಟಳೊ ನದಿಯೀಗ ಪಾಲಿಸಿದರೊ
ಮುನೀಶ್ವರರು ೨೮೬

ಬೆನ್ನ ತಡವಿ ತನ್ನ ಚೆಣ್ಣನ ನುಡಿಸಿದಳ್ ಕಣ್ಣಲಿ
ಜಲವ ತುಂಬಿದಳು
ನಿನ್ನ ಸಂತೈಸುವರಿಲ್ಲವೆಂದೆನುತಲೆ ಕನ್ನೆ ತಾ
ಶಿರವ ಬಾಗಿದಳು ೨೮೭

ಬೆಂಬಲವಾಗಿ ಸಂಗಾತಲೆ ತಿರುಗುವಳು
ರಂಗವಾಲೆಗಳನಿಕ್ಕುವಳು
ಬೇಡ ನಮ್ಮಯ್ಯ ಕಂಡರೆ ನಿನ್ನ ಬೈದಾನು ಹೋಗು
ಮತ್ತೊಂದು ಕಾನನಕೆ ೨೮೮

ಸಾರಿಸಿ ರಂಗವಾಲೆಯನಿಕ್ಕಿ ಮುನಿಪಗೆ
ಪೂಜೆಗನುಕೂಲವ ಮಾಡುವಳು
ಈಗ ನಮ್ಮಯ್ಯ ಕಂಡರೆ ನಿನ್ನ ಬೈದಾನು ಹೋಗು
ಮತ್ತೊಂದು ಕಾನನಕೆ ೨೮೯

ಮುಂದಕ್ಕೆ ಹೆಜ್ಜೆನಿಡುವರೆ ಕಾಲೇಳವು ನಿಂದು
ನಿಂದೊಮ್ಮೆ ನೋಡುವಳು
ಬಂದಳೆ ಮತ್ತೊಂದು ವೃಕ್ಷದ ನೆಳಲಿಗೆ ನಿಂದಳೆ
ನೀರ ತಡಿಯಲಿ ೨೯೦

ಸ್ನಾನ ಜಪವ ಮಾಡಿ ಆಮುನೀಶ್ವರ ಬಂದ ಭಾನು
ಮಧ್ಯಾಹ್ನ ಕಾಲದಲಿ
ಬಾಲನ ಕೈವಾಡವಲ್ಲ ನೂತನವಾದ ನಾರಿಯ ಕೈವಾಡವೆಂದ ೨೯೧

ಬೆಚ್ಚಿದ ಮುನಿಯ ಮಾತಿಗೆ ನಾಶಿಕೇತಾಗ
ಮುಚ್ಚಿದನೆರಡು ಕಣ್ಗಳನು
ಇತ್ತ ಬಾರೈ ನಾಶಿಕೇತು ಅಂಜುವದ್ಯಾಕೆ
ತಪ್ಪದೆ ಹೇಳೆನ್ನ ಕೂಡೆ ೨೯೨

ಶಿರದ ಮೇಲಣ ಜಡೆ ಹಳೆಚರ್ಮ ಉಡಿಗೆಯು
ಕರುಳಿಲ್ಲ ಅಸ್ಥಿಪಂಜರವು
ಕಡು ತಪಸಿ ಬಂದೆನ್ನ ನುಡಿಸಲಾಗ ಮೊಲೆ ತೊರೆದು
ಚಿಮ್ಮಿದವೆನ್ನ ಮೇಲೆ ೨೯೩

ಕಂದನ ತಂದು ಇಂದಿಗೆ ಏಳೊರುಷವು ರಂಭೆ
ಬಂದಳೆ ನಮ್ಮ ಮಠಕೆ
ಅಂಬುಜನಾಭನು ಹೇಳಿದ ವಾಕ್ಯವು ಕಂದ
ನೀನೊಡಗೊಂಡು ಬಾರೈ ೨೯೪

ಹೆತ್ತ ತಾಯ ಅರಸುತ್ತಲಾಗ ವಟುಗಳ
ಮತ್ತೆಲ್ಲರೊಡಗೂಡಿಕೊಂಡು
ಮತ್ಸ್ಯಲೋಚನೆಯಿಪ್ಪ ಆ ವನಕೆ ಬಂದನು ಪುತ್ರನ
ಕಂಡು ದೂರದಲಿ ೨೯೫

ನಡೆಯವ್ವ ತಾಯೆ ನಾನಿನ್ನ ಕುಮಾರನು
ಅಡವಿಯಲ್ಲೊತ್ತ ಕಳೆವರೆ
ಒಡಗೊಂಡು ಬಾರೆಂದು ಕಳುಹಿದ ನಮ್ಮಯ್ಯ
ತಡಮಾಡದೇಳು ಆಶ್ರಮಕೆ ೨೯೬

ನೀನ್ಯಾರು ನಿನಗೆ ನಿಮ್ಮಯ್ಯನೆಂತಾಗುವ ಕೂಡಿ
ಕೊಟ್ಟವರ್ಯಾರ ತನಗೆ
ಪಾಣಿಗ್ರಹಣವ ಮಾಡಿಕೊಂಡೆನೆ ನಿಮ್ಮಯ್ಯ ಬಾರೆಂದು
ಮನೆಗೆ ಕರೆವರೆ ೨೯೭

ಯತಿಗಳಾಗಿ ಪರಸತಿಗೆ ಕಣ್ಣಿಡುವರೆ ಪತಿಯು
ತಾನೆಂತಾದ '[ನ]'ನಗೆ
ಮತವೆ ಉತ್ತಮರಿಗೆ ಎನುತ ಗರ್ಜಿಸುತಲೆ ಸುತನ
ನೋಡಿದಳ್ ಕೋಪದಿಂದ ೨೯೮

ಯಾರೆಂದು ತಿಳಿದು ವಿಚಾರವ ಮಾಡದೆ
ಬಾರೆಂದು ಮನೆಗೆ ಕರೆವರೆ
ಏರಿತು ತಪದ ವಿಕಾರವು ತನಗೆಂದು ನಾರಿ ತಾ
ಘುಡುಘುಡಿಸಿದಳು ೨೯೯

ಅಪ್ಪ ಚಿತ್ತೈಸೊ ಒಪ್ಪಳು ಎನ್ನ ಮಾತಿಗೆ ಇಪ್ಪಳು
ಮರದ ಪೊಟರಿನೊಳ್
ಚಚ್ಚರದಿಂದ್ಹೋಗಿ ಒಡಗೊಂಡು ಬಾರೆಂದು ಪುತ್ರ
ಹೇಳಿದನೆ ಆ ಮುನಿಗೆ ೩೦೦

ಅತ್ರಿ ಭಾರದ್ವಾಜ ಆಂಗೀರಸ ಗೌತಮ
ಕಶ್ಯಪಗಸ್ತ್ಯ ಮಹಾಮುನಿಯು
ಇರ್ಪಯೆಡೆಗಾಗಿ ಬಂದನು ಮುನಿಪನು
ವಿಸ್ತರಿಸಿದನೀ ಕಥೆಯ ೩೦೧

ಹಿಂದಕ್ಕೆ ವನದಲ್ಲಿ ತಪವ ಮಾಡುತಲಿದ್ದೆ ಬಂದೊಬ್ಬ
ಮುನಿಯು ಹೇಳಿದನು
ತಂದೆತಾಯಿಗಳೆಮಲೋಕದೊಳಿಹರೆಂದು ಬಂದು
ಹೇಳಿದನೆ ಸುದ್ದಿಯನು ೩೦೨

ಆತನ ವಾಕ್ಯವ ಕೇಳಿ ನಾ ವನದಲ್ಲಿ ಆಚರಿಸಿದೆ ತಪಗಳನು
ಖೇಚರದಲಿ ಸುರಕನ್ನಿಕೆ ಸುಳಿಯಲು ಆಕ್ಷಣ
ಬಿಂದು ಸಡಿಲಿದವು ೩೦೩

ತಾವರೆ ಕಮಲದೊಳಿಟ್ಟು ನೀರೊಳು ಬಿಟ್ಟೆ
ಏನಾಯಿತೆಂದು ನಾನರಿಯೆ
ಕಾಲಾಂತರದಲಿ ತೇಲಿ ಬಂದನು ಕಂದ
ಪಾಲಿಸಿಕೊಂಡೆನು ತಂದು ೩೦೪

ಕಂದನ ತಂದು ಇಂದಿಗೆ ಏಳೊರುಷವು ರಂಭೆ
ಬಂದಳು ನಮ್ಮ ಮಠಕೆ
ಹೇಳ ಬಂದೆನು ನಿಮ್ಮ ಕೂಡೆ ಈ ವಾರ್ತೆಯ
ಮಾಡಿ ನಿಮ್ಮನಕೆ ಬಂದುದನು ೩೦೫

ಉತ್ತಮವೆನುತಲೆ ಬಂದರು ಮುನಿಗಳು
ಮತ್ಸ್ಯಲೋಚನೆ ಇಪ್ಪಯೆಡೆಗೆ
ಮತ್ತೊಬ್ಬ ಮುನಿಗಳು ಅರಸುತ್ತಲಿತ್ತ ಬಂದರು
ಅಕ್ಕಟ ವಿಧಿಯೆಂದಳಾಕೆ ೩೦೬

ಮುನಿಗಳ ಕಾಣುತ್ತ ಮುಂದಕ್ಕೆ ಬಂದಳು
ಚರಣದ ಮೇಲೆರಗಿದಳು
ಮುಡಿ ಹಿಡಿದೆತ್ತಿ ಕೊಡಹಿ ಮೈಯ ಧೂಳನು ಬಡವಾದೆ
ಮಗಳೆ ನೀನೆಂದು ೩೦೭

ಪತಿಸುತರಿಲ್ಲವೆ ಪಾಲಿಸುವರೆ ನಿನಗೆ
ಅತಿಉಗ್ರತಪವೇಕೆ ನಿನಗೆ
ಸಖಿಯರ ಸಹವಾಸಯಿಲ್ಲದೆ ಇರುವುದು ಮತವೆ
ಉತ್ತಮರಿಗ್ಹೇಳೆಂದ ೩೦೮

ಕಡುಕೋಮಲಾಂಗಿ ನೀ ಅಡವಿಯಲಿಪ್ಪರೆ
ಹಡೆದವರಿಲ್ಲ ನೀನ್ಯಾರು
ಒಡಯರೊಬ್ಬರು ಇಲ್ಲದಿರುವುದುಚಿತವಲ್ಲ ನುಡಿ
ನಿನ್ನ ಮನದ ಸಂದೇಹ ೩೦೯

ಸೂರ್ಯಕುಲದ ರಘುರಾಯ ನಮ್ಮಯ್ಯನು
ಆಳ್ವನಯೋಧ್ಯ ಪಟ್ಟಣವ
ಪೂರ್ವಾರ್ಜಿತದ ವಿಧಿ ಬಂದು ತುಡುಕಲು ಆಯಿತು
ಈ ವಿಧಿಯಾಗಿ ೩೧೦

ಭೂತಳಪತಿ ರಘುರಾಯ ನಿಮ್ಮಯ್ಯನು
ಖ್ಯಾತಿಪಡೆದ ಮೂರು ಜಗದಿ
ಕಾಂತೆ ನೀ ಮಾಡಿದ ತಪ್ಪೇನು ಮನೆಯಿಂದ
ಯಾತಕ್ಕೆ ಹೊರವಡಿಸಿದರು ೩೧೧

ಹೆತ್ತ ತಾಯಿ ತಂದೆ ಆಜ್ಞೇಲಿ ನಾನಿದ್ದೆ ಚಿತ್ತ
ಚಂಚಲವಾಗದ್ವಾಂಗೆ
ಮತ್ತೊಂದು ದಿವಸ ನೀರಾಟಕ್ಕೆ ಬಂದೆನು
ಮಿತ್ರೆಯರನೆ ಒಡಗೊಂಡು ೩೧೨

ಗಂಗೇಲಿ ನೀರಾಟವಾಡುವ ಸಮಯದಿ
ಹಿಂದಣ ಪೂರ್ವಕಲ್ಪನೆಯೊ
ಕೆಂದಾವರೆಯಾಗಿ ಬಂದೆನ್ನ ಸೋಂಕಲು ನಿಂದವು
ಗರ್ಭ ಸ್ಥಿರವಾಗಿ ೩೧೩

ಮೇಲುಭಾಗದಿಂದ ತೇಲಿಬಂದಿತು
ಪುಷ್ಪ ನೀರಾಟವಾಡುತ್ತಿದ್ದೆಡೆಗೆ
ಪಾವನ್ನಪಂಕಜ ಪರಿಮಳ ಪುಷ್ಪವ ಆಘ್ರಾಣಿಸಿದೆನು ಶೀಘ್ರದಲಿ ೩೧೪

ಕೇಳಿ ಸೈರಿಸಲಾರದೆ ನಮ್ಮಯ್ಯನು ಊಳಿಗದವರ ಕರೆಸಿದನು
ಸೀಳಿಬನ್ನಿವಳನು ಎನುತಲೆ ಕಳುಹಿದ ಖೂಳರು ಎನ್ನುಳುಹಿದರು ೩೧೫

ಅರಣ್ಯದೊಳಗೊಬ್ಬಳಳುತ ನಿಂತಿದ್ದೆನು ದೂರದಿ
ಕಂಡನೀ ಮುನಿಯು
ಕಾರುಣ್ಯದಿಂದಲೆ ತಾನು ಕರೆದು ಕೊಂಡ್ಹೋಗಿ
ನಾರಿಯ ಕೈಯೊಳಗಿತ್ತ ೩೧೬

ತಾಯಿ ತಂದೆ ಅಂದದಿ ಪಾಲಿಸುತ್ತಿದ್ದರು ಬಾಲ
ಹುಟ್ಟಿದ ಮೂಗಿನಿಂದ
ನಾನು ಅಂಜಿ ಮಾನವರಪವಾದಕ್ಕೆ ನೀರೊಳು
ಶಿಶುವ ನೂಕಿದೆನು ೩೧೭

ಭೂತ ಹುಟ್ಟಿತೆಂದು ಭೀತಿಯ ಪಡುವರು
ಮಾತನಾಡುವರು ಮೂಜಗದಿ
ಯಾತರೇ ಶಿಶುವೆಂದು ಜಲದೊಳು ನೂಕಿದೆ ಲೋಕ
ಲೋಕವ ಚರಿಸಿದೆನು ೩೧೮

ಘಟ್ಟ ಬೆಟ್ಟವ ತಿರುಗೆ ಏಳು ವರುಷವು
ಹೊತ್ತಾರೆಬಂದೆ ಈ ಮಠಕೆ
ಪುಟ್ಟ ಬಾಲಕ ಎನ್ನ ನಿಂದಿರಗೊಡಿಸದೆ ಅಟ್ಟಿದ
ಹೋಗು ಹೋಗೆನುತ ೩೧೯

ಪರಸತಿಯಾರೆಂದು ಬೈವನು ನಮ್ಮಯ್ಯನು
ಇರಬೇಡ ಹೋಗು ಹೋಗೆನುತ
ಹೊರವಡಿಸಿದ ಎನ್ನ ಈ ವನಕೆ ಬಂದೆನು ಮರಳಿ
ಬಂದೆನ್ನ ಕರೆಯುವಿರಿ ೩೨೦

ತಾಯೆ ನೀ ಪತಿವ್ರತೆ ಈ ಮುನಿ ವೀರ್ಯವ
ತಾವರೆಕಮಲದೊಳಿಟ್ಟು
ನೀರೊಳು ಬಿಟ್ಟನು ನಿನ್ನ ಕೈಸೇರಿತು ಬಾಲ
ಹುಟ್ಟಿದ ಮೂಗಿನಿಂದ ೩೨೧

ತಪ್ಪಿಲ್ಲ ತಾಯೆ ನೀ ಕರ್ಪೂರಗಂಧಿನಿ
ಒಪ್ಪಿಕೊ ಈ ಮುನಿವರನ
ಋಷಿಗಳೆಲ್ಲರು ಕೂಡಿ ಸಕಲ ಸಂಭ್ರಮದಿಂದ ಇತ್ತರೆ
ಮುನಿಯ ಕೈಯೊಳಗೆ ೩೨೨

ಬಂದಪನಿಂದ್ಯವ ಹಿಂದುಗಳೆಯದೆ ತಂದೆತಾಯಿಗಳುಲ್ಲಂಘಿಸಿ
ಇಂದು ಈತನ ಒಡಗೂಡುವುದುಚಿತವೆ
ಧರೆಯೊಳು ಜನಕೆ ಸಮ್ಮತವೆ ३.೨३

ಪರಿಹರಿಸಿಕೊಳ್ಳದೆ ಎನ್ನಪನಿಂದ್ಯವ
ಹಡೆದವರರಿಯದಂ[ದ]ದಲಿ
ಮರಳಿ ಈತನ ಒಡಗೂಡುವುದುಚಿತವೆ ಧರೆಯೊಳು
ಜನಕೆ ಸಮ್ಮತವೆ ३.೨೪

ಸತ್ಯವಾಡಿದಳು ಚಂದ್ರಾವತಿ ಎನುತಲೆ ಮತ್ತೆ
ಯೋಚಿಸಿ ತಮ್ಮ ಮನದಿ
ಹೆತ್ತವರರಿಕೇಲಿ ಮಾಡುವ ಮದುವೆಯ
ಕನ್ಯಾರ್ಥಿಗಳಾಗಿ ಹೋಗುವೆವು ३.೨೫

ತಾಯಿ ತಂದೆ[ಯ] ಕೇಳಿ ಬಾಹೆವು ನಾವ್ ಹೋಗಿ
ಬಾಲಕನೊಡಗೊಂಡು ಹೋಗು
ನಾರಿಯತ್ತ ಕಳುಹಿ ತಾವ್ಇತ್ತ ಬಂದರು
ಭೋರನಯೋಧ್ಯಾಪಟ್ಟಣಕೆ ३.೨೬

ಬಿಗಿದು ಕಟ್ಟಿದ ಜಡೆ ಕೈಲಿ ಕೃಷ್ಣಾಜಿನ
ಮೃಡನಂತೆ ಮೈಗೆ ಶ್ರೀಗಂಧ
ಗಡಿ ಮಿತಿಯಿಲ್ಲದೆ ಬಂದರು ಮುನಿಗಳು
ಒಡನೆ ಅಯೋಧ್ಯಾಪಟ್ಟಣಕೆ ३.೨೭

ಬತ್ತಿಗಟ್ಟಿದ ಜಡೆ ಬಾಡಿದ ನಯನವು ಎತ್ತಿದ
ಊರ್ಧ್ವ ಬಾಹುಗಳು
ಕೃಷ್ಣಾಜಿನವನು ಕರದಿ ಪಿಡಿದು ಮುನಿಶ್ರೇಷ್ಠರೆಲ್ಲರು
ನಡೆತರಲು ३.೨೮

ಎತ್ತಲಿಂದಲೆ ಬಂದಿತೀಋಷಿಗಳ ಸ್ತೋಮ
ನೃಪೋತ್ತಮ ನಿಮ್ಮ ಪಟ್ಟಣಕೆ
ಮುತ್ತಿಗೆ ಹಾಕುವಂದದಿ ಬಂದು ನಿಂದವೆ ಮತ್ತೇನು
ಇದಕೆ ಉಪಾಯ ೩೨೯

ಮುನಿಗಳ ಕಾಣುತ ಮುಂದಕ್ಕೆ ಬಂದನು ಚರಣದ
ಮೇಲೆ ಎರಗಿದನು
ಒಡಗೊಂಡು ಬಂದು ಗದ್ದುಗೆ ಮೇಲೆ ಕುಳ್ಳಿರಿಸಿ ಮಡದಿ
ಸಹವಾಗಿ ಪೂಜಿಸಿದ ೩೩೦

ದಾರಿತಪ್ಪಿ ದಯವಿಟ್ಟು ಬಂದಿರಿ ಎನ್ನ ಗೃಹವು
ಪಾವನವಾಯಿತೆಂದು
ಷೋಡಶೋಪಚಾರವ ಮಾಡಿದ ರಾಯನು ಬಹಳ
ಪರಿಯಿಂದಲೊಂದಿಸಿದ ೩೩೧

ಬೇಡ ಬಂದೆವು ನಿನ್ನ ಮಗಳ ಉದ್ದಾಳಿಕಗೆ
ಮಾಡದೆ ಎರಡು ಮನಸನು
ಕಾಲತೊಳೆದು ಕನ್ಯಾದಾನವ ಮಾಡಿದರೆ ಮೇಲೆ
ಬಹುದು ಪುಣ್ಯ ನಿನಗೆ ೩೩೨

ಕನ್ಯಾರ್ಥಿಯಾಗಿ ಬಂದೆವು ನಿನ್ನ ಮಗಳಿಗೆ
ಚೆನ್ನಾಗಿ ನೋಡು ಈವರನ
ಮನ್ನಿಸಿ ಕಾಲತೊಳೆದು ಧಾರೆಯೆರೆದರೆ
ನಿನ್ನ ಸುಕೃತಕೆಣೆಯುಂಟೆ ೩೩೩

ಹೆಣ್ಣೆಂಬೊ ಮಾತಿಗೆ ಮನದಲ್ಲಿ ನೊಂದನು
ಕಣ್ಣಲ್ಲಿ ಜಲವ ತುಂಬಿದನು
ಹೊನ್ನು ಹಣವು ಬೇಡಿದೊಸ್ತುವ ಕೊಡುವೆನು
ಕನ್ನಿಕಿಲ್ಲೆನ್ನ ಮನೆಯಲಿ ೩೩೪

ಹಣಹೊನ್ನು ನಮ್ಮಗೇಕೆ ಅಡವಿಯಲಿರ್ಪೆವು
ಕೊಡು ನಿನ್ನ ಮಗಳ ಶೀಘ್ರದಲಿ
ಸಿಡಿಮಿಡಿಗೊಂಡರೆ ಬಿಡುವ್ರೋರು ನಾವಲ್ಲ ತಡೆಯದೆ
ಕೊಡು ನಿನ್ನ ಮಗಳ ೩೩೫

ಹಿಂದಕ್ಕೆ ಕನ್ನಿಕಿದ್ದಳು ಎನ್ನ ಮನೆಯಲ್ಲಿ ಕೊಂದು
ಬಂದೆನು ಅಡವಿಯಲಿ
ಇಂದುಶೇಖರನಾಣೆ ಇಟ್ಟುಕೊಂಡಿದ್ದರೆ ಎಂದು
ಚರಣವನೆ ಮುಟ್ಟಿದನು ೩೩೬

ಮಗಳ ತೋರಿಸಿದರೆ ಕೊಡುವದು ಸತ್ಯವೆ
ಬಡಮುನಿಯೆಂದು ಯೋಚಿಸದೆ
ನುಡಿನಿನ್ನ ಮನದ ಸಂಕಲ್ಪವನೆಂದಿನ್ನು
ಒಡಂಬಡಿಸಿದರು ಭೂಪತಿಯ ೩೩೭

ಅರಣ್ಯದಲಿ ಕೊಂದು ಬಂದ ಕುಮಾರಿಯ
ತೋರುವದಗಣಿತಾಶ್ಚರ್ಯ
ಧಾರೆಯನೆರೆದು ಕೊಡುವೆ ಈ ಕ್ಷಣದಲಿ
ದೇವಾಬ್ರಾಹ್ಮರು ಮೆಚ್ಚುವಂತೆ ೩೩೮

ಮರೆತು ಮಲಗಿದ್ದಾಗ ಸುರರಡ್ಡ ಸುಳಿದರೊ.
ಸುರರೊ ನರರೊ ಕಿನ್ನರರೊ
ಅರಿಯದೆ ಕಳುಹಿದೆ ಅಜ್ಞಾನತನದಲಿ
ಹಿರಿಯರಿಲ್ಲವೆ ನಿನ್ನ ಮನೆಯ ೩೩೯

ಪುತ್ರಿಯ ಕೊಲುವರೆ ಕ್ಷತ್ರಿಯ ಮತದಲಿ ಹತ್ಯಾ
ಮಾಡುವರೆ ಸ್ತ್ರೀಯರನು
ಅತ್ಯಂತ ಬಲ್ಲ ಮಂತ್ರಿಗಳಿಲ್ಲ ನಿನ್ನಲ್ಲಿ
ತತ್ತ್ವಭೋಧನೆಯ ಮಾಡುವರೆ ೩೪೦

ಕೊರಳ ಕೊಯ್ಯೆಂದು ನೀ ಕಳುಹಿದೆ ಮಗಳನು
ಉಳುಹೆ ಹೋದರು ಅಡವಿಯಲಿ
ಸಮಿಧೆಗೋಸ್ಕರ ಇತ್ತ ಬಂದು ನಾಕಂಡೆನು
ಕರೆದೊಯ್ದೆ ಎನ್ನ ಆಶ್ರಮಕೆ ೩೪೧

ನಾರಿಗೆ ನವಮಾಸ ತುಂಬಲು ಆಕ್ಷಣ ಮೇಲೆ
ಬಂದಿತು ಪ್ರಸವ ಕಾಲ
ನಾಲ್ಕು ವೇದಗಳನು ಸ್ವರದಿಂದಲಳುತಲೆ ಬಾಲ
ಪುಟ್ಟಿದ ಮೂಗಿನಿಂದ ೩೪೨

ಕಾರಣಿಕದ ಶಿಶುವೆಂದು ನಾವರಿತೆವು ನೀರನೆರೆದು ಸಲಹಿದೆವು
ಬೇರೊಂದು ಪರ್ಣಶಾಲೆಯಲಿ ಇಟ್ಟಿದ್ದೆವು ನಾರಿ
ತಾನರ್ಧರಾತ್ರೆಯಲಿ ೩೪೩

ಬಾಲಸಹಿತ ಚಂದ್ರಾವತಿಯಿಲ್ಲವೆನುತಲೆ
ಚಾಲುವರಿದೆವು ಮನದೊಳಗೆ
ನೀರೊಳು ಕಂದ ಬಂದನೆ ಸೂರ್ಯೋದಯಕ್ಕೆ
ಸ್ನಾನವ ಮಾಡುತಿದ್ದೆಡೆಗೆ ೩೪೪

ತಂದೇಳುವರುಷ ಪರಿಯಂತರ ಸಲಹಿದ
ಇಂದು ಸತಿಯ ಕಂಡನೀತ
ಒಂದಾಯಿತಿದಕೇನು ಮನದ ಸಂಶಯಗಳು
ಬಂದಳು ನಿನ್ನ ಕುಮಾರಿ ೩೪೫

ಮುನಿಗಳ ಮಾತನೆಲ್ಲವ ಕೇಳಿ ರಾಯನು
ಮನದಲ್ಲಿ ಸಂತೋಷ ತಾಳಿ
ತನುಜೆಯ ಕರೆದೊಯ್ದು ದೂತರೆಲ್ಲರ ಕರೆಸಿ
ಅನುನಯದಿಂದ ಕೇಳಿದನು ೩೪೬

ಹಿಂದಕೆ ಸಿಟ್ಟಿನಿಂದಲೆ ಕೋಮಲಾಂಗಿಯ
ಕೊಂದು ಬಾರೆಂದು ಅಟ್ಟಿದೆನು
ಇಂದು ಪ್ರಸ್ತಾಪ ಬಂದರೆ ನಿಮ್ಮ ಕರೆಸಿದೆ
ಸಂದೇಹವಿಲ್ಲದುಸುರೆಂದ ೩೪೭

ಜೀಯ ಹಸಾದ ನಿಮ್ಮಪ್ಪಣೆ ಪ್ರಕಾರ ಒಯ್ದೆವು ಬಾಯಾರುತಲೆ
ನ್ಯಾಯವೊ ಅನ್ಯಾಯವೊ ಎನುತಲಿ ತಂಗಿ
ಒಡಗೊಂಡು ತೆರಳಿದೆವು ೩೪೮

ತಳಿಲ ಹಾಸಿಗೆ ಮೇಲೆ ಮಲಗಿಸಲಾಕೆಗೆ ಥಳಿಲನೆ
ನಿದ್ರೆ ಬಂದೊದಗೆ
ತನುಜೆಯ ಶಿರವರಿಯಲು ಖಡ್ಗ ನೆಗಹಿದೊ ಗೌಳಿ
ನುಡಿಯಿತು ಬೇಡವೆಂದು ೩೪೯

ಮತ್ತೆ ಹೋದೆವು ಶಿರವರಿಯಬೇಕೆನುತಲೆ
ಜೊತ್ಯಾಗಿ ಎರಡುಲುಹು ಮಾಡೆ
ಎತ್ತಲಿಂದೆತ್ತ ಬರುವುದು ಮಾತು ಆಕೆಯ
ಪ್ರಾಪ್ತಿಯಿದ್ದುದ್ದು ಆಗಲೆಂದು ೩೫೦

ಬಿಟ್ಟುಬಂದೆವು ಜೀಯಾ ಮರೆಮಾಡಿ ಮೃಗವನು
ಕುಟ್ಟಿ [ನೆತ್ತರು ಪೂಸಿ]ದಲಗ
ತಟ್ಟನೆ ತಂದೆವು ನಮ್ಮಪರಾಧವು
ತಲೆಕುಟ್ಟಿಸು ಪಾಲಿಸೆಂದೆನುತ ೩೫೧

ಎರಗಿದ ದೂತರಿಗೆ ಕರುಣದಿ ರಾಯನು
ತರಿಸಿಕೊಟ್ಟನು ವೀಳ್ಯವಸ್ತ್ರ
ಮುನಿಗಳನೆಲ್ಲರ ಮನ್ನಿಸಿ ರಾಯನು ಚರರ
ಮಾತಿಗೆ ಅಂತರವಿಲ್ಲ ೩೫೨

ಭೇರಿ ದುಂದುಭಿಗಳ ಹೊಯ್ಸಿದ ರಾಯನು
ಬೀರಿಸಿದನು ಸಕ್ಕರೆಯ
ಜೋಡಿಲ್ಲ ತನ್ನ ಸುಕೃತಕೆಣೆಯೆನುತಲೆ ಆನಂದಭರಿತನಾಗಿದ್ದ ೩೫೩

ಮಡಿದ ಮಗಳ ಮರಳಿ ಪಡೆದನೆ ರಾಯನು
ಹೊಡೆಸಿದ ಭೇರಿದುಂದುಭಿಯ
ಕಡಲುಬ್ಬಿದಂತೆ ಉಲ್ಲಾಸದಿ ರಾಯನು ಕಳೆದನೆ
ಉದಯ ಕಾಲವನು ೩೫೪

ಗಿಡಿಬಿಡಿವಾದ್ಯ ತಮ್ಮಟ ಭೇರಿ ನಿಸ್ಸಾಳ ಒಡನೆ
ಚೀರ್ವ ಚಿನ್ನ ಕಹಳೆ
ಗಡಿಮಿತಿಯಿಲ್ಲದೆ ಹಿಡಿದವು ಬಿಳಿಗೊಡೆ ಮಗಳ
ಅರಸುತ ಬಂದರಾಗ ೩೫೫

ಏರಿದರಂದಣಂಗಳ ರಾಣಿವಾಸೀರು ಮೇಲೆ ಪನ್ನಂಗ ಕವಿದವು
ಭೋರನೆ ಬಂದರು ಪುರದಂಗನೆಯರು ನಾರಿಯ
ನೋಡಬೇಕೆಂದು ೩೫೬

ತಂದೆ ತಾಯಿ ಅರಸುತ್ತಲಿತ್ತ ಬಂದರು
ಬೆಂದವು ತನ್ನ ಬಾಳುವೆಯು
ನಿಂದಿರಲಾರೆ ಅವರ ಎದುರಿಗೆ ಎನುತಲೆ
ನೊಂದಿಕೊಂಡಳೆ ಮನದೊಳಗೆ ೩೫೭

ಮಡಿದು ಹೋದಳೆಂದು ಮರೆದುಕೊಂಡಿದ್ದರು
ವಿಧಿಯೆನ್ನ ಬಿಡದೆ ಬೆನ್ನಟ್ಟಿ
ಕಡುಪಾತಕಿಯೆಂದು [ತಡೆದು] ಕೊಂಡಿದ್ದವು
ಅಡವಿಯ ಕರಡಿ ಹೆಬ್ಬುಲಿಯು ೩೫೮

ನಿಡಿಗೇಶ ಜಡೆಗಟ್ಟಿ ಬಡವಾಗಿ ದೇಹವು
ಕಳೆಗುಂದಿ ನಳಿನವದನವು
ತಲೆಬಾಗಿ ನೆಲನ ಬರೆಯುತಲಿದ್ದ ಮಗಳನು
ಸೆಳೆವಿಡಿದೆತ್ತಿದ ರಾಯ ೩೫೯

ನಿಂದ್ಯವನಿಟ್ಟೆನೆ ನಿನ್ನ ಮೇಲರಿಯದೆ ಬಂಧನಕೊಳಗುಮಾಡಿದೆನೆ
ಕೊಂದು ಬಾರೆಂದು ಕೊಟ್ಟೆನೆ ಕೊಲೆಘಟಿಕಗೆ ತಂದ್ಯಲ್ಲ
ವೈರಿ ಕೇಳೆಂದ ೩೬೦

ಯಾರೇನು ಮಾಡುವಿರೆನ್ನ ಪೂರ್ವಾರ್ಜಿತ
ತೀರುವುದೆ ಉಣ್ಣದನಕ
ಮಾಡಿದ ಫಲವ ಭೋಗಿಸುವೆನೆಂದೆನುತಲೆ ನಾರಿ
ನುಡಿದಳೆ ದುಃಖದಿಂದ ೩೬೧

ಹಗರಣವಾಯಿತು ಜಗಮೂರರೊಳಗೆಲ್ಲ ಹೊಗೆನು
ಅಯೋಧ್ಯಾಪಟ್ಟಣವ
ಹಗರಣವಾಯಿತು ಸರಿಯ ನಾರಿಯರೊಳು
ದುಗುಡದಿಂದಿದ್ದಳ್ ಕುಮಾರಿ ೩೬೨

ಗಾಡಿಕಾತಿಯರು ಮೈಯನೆ ತೊಳೆದರು ಜಲದಲಿ
ತೀಡಿ ತೆಗೆದರು ಮೈಯಧೂಳಿ
ಮೋಡದೊಳಡಗಿಕೊಂಡಿಪ್ಪ ಚಂದ್ರಮನಂತೆ
ನೋಡೋರ ಕಣ್ಗೆ ರಂಜಿಸಿತು ೩೬೩

ಬಿಡಿಸಿದರತ್ಯಂತ ಜೀರ್ಣದೊಸ್ತ್ರಗಳನ್ನು
ಉಡಿಸಿದ[ರ್] ಹೊಸ ದುಕೂಲವನು
ತೊಡಿಸಿದರುತ್ತಮವಾದ ಕಂಚುಕವನ್ನು
ಹೊಡಚಿದರೆ ಮಂಡೆಸಿಕ್ಕ ೩೬೪

ನಡೆದು ಬಂದರೆ ರಾಯ ಮುನಿಯು ಇದ್ದಲ್ಲಿಗೆ
ನುಡಿದನೆ ಮಧುರವಾಕ್ಯದಲಿ
ಒಡಗೊಂಡು ಹೋಗುವೆನು ನಾನು ಕುಮಾರಿಯ
ತಡೆಯದೆ ಶೀಘ್ರ ಬನ್ನೆಂದ ೩೬೫

ಕಂದ ಸಹಿತ ಇಂದುಮುಖಿಯನು ಕರೆದೊಯ್ವೆನೆಂದು
ಬಿನ್ನೈಸಿದ ರಾಯ
ಸಂಭ್ರಮದಿಂದ ಸಮಸ್ತರನೊಡಗೊಂಡು ಮುಂಜಾನೆ
ಬನ್ನಿ ನೀವೆಂದ ೩೬೬

ರಾಯನ ಅತ್ತ ಕಳುಹಿ ಉದ್ದಾಳಿಕನು ಕಾಮಿಸಿ
ಮಾಡಿದ ತಪವ
ನಾರಾಯಣ ರುದ್ರ ಕಮಲಜ ಬಂದರು ಬೇಡು
ನೀ ವರವನೆಂದೆನುತ ೩೬೭

ನಿಮ್ಮ ಕಾಣ್ಬೆನೆಂದು ಉನ್ನಂತ ತಪವಿದ್ದೆ
ಅನ್ಯತ್ರ ತಪವೇಕೆಯೆನಗೆ
ಪ್ರಸನ್ನರಾದಿರಿ ನೀವು ಧನ್ಯನಾದೆನು ನಾನು
ಇನ್ಯಾಕೆ ತಪದ ವಿಚಾರ ೩೬೮

ಹೊಂದುವೆ ನಾನಿಮ್ಮ ಚರಣದೊಳುವೆನುತಲೆ
ಇಂದು ಏಕಾಗ್ರ ಚಿತ್ತದೊಳು
ಇಂದ್ರಿಯನಿಗ್ರಹ ಮಾಡಿಕೊಂಡಿದ್ದೆನು
ಬಂಧನಕೊಳಗು ಮಾಡಿದಿರಿ ೩೬೯

ಎತ್ತಣ ಸಂಸಾರಕೊಳಗು ಮಾಡಿದಿರೆನ್ನ
ವ್ಯರ್ಥವಾಯಿತು ಎನ್ನ ತಪಸು
ಪುತ್ರ ಮಿತ್ರ ಕಳತ್ರೆಯ ಕೂಡಲು ಉತ್ತಮಗತಿಯುಂಟೆ ಎನಗೆ ೩೭೦

ನಿನ್ನಂಥ ತಪಸಿಗಳಿನ್ನುಂಟೆ ಧರೆ ಮೇಲೆ
ಕನ್ನೆಯನೊಡಗೂಡಿ ಬಂದು
ಚೆನ್ನಾಗಿ ಸ್ಥಿರಂಜೀವಿ ಆಗಿ ನೀ ಬಾಳೆಂದು ನಮ್ಮ
ಧ್ಯಾನವು ಮರೆಯದಂತೆ ೩೭೧

ಹರಿಹರಕಮಲಜ ವರಗಳ ಕೊಟ್ಟರು
ಸ್ಥಿರಂಜೀವಿಯಾಗುಯೆಂದೆನುತ
ಜರೆ ಅಡಗಿ ನಿನಗೆ ಯೌವನ ಪ್ರಾಪ್ತಿಯಾಗಲಿ
ಅರವಿಂದಮುಖಿ ಒಲಿವಂತೆ ೩೭೨

ವರವ ಕೊಟ್ಟತ್ತ ತೆರಳಲು ಉದ್ದಾಳಿಕಗೆ ಸಿರಿಬಂದು
ತುಂಬಿತಾಶ್ರಮವ
ಸ್ಮರಿಸಿದ ಕಾಮಧೇನುವ ತನ್ನ ಮನದಲಿ ಪರಿಪರಿ
ಭರಣ ಭೂಷಣವ ೩೭೩

ಅಗಣಿತವಾದ ದುಕೂಲ ದೇವಾಂಗವು
ಬಗೆಬಗೆ ನಗನಾಣ್ಯಗಳನು
ಮೃಗಮದಗಂಧಿಯ ಮದುವೆಯ ಸಮಯಕ್ಕೆ
ಒದಗಿತು ತನ್ನಿಂದ ತಾನೆ ೩೭೪

ಭೇರಿ ದುಂದುಭಿಗಳ ಹೊಯ್ಸಿದ ರಾಯನು
ಬೀರಿಸಿದನು ಸಕ್ಕರೆಯ
ಜೋಡಿಲ್ಲ ತನ್ನ ಸುಕೃತಕ್ಕೆಣೆಯೆನುತಲೆ ಆನಂದಭರಿತನಾಗಿದ್ದ ೩೭೫

ಮಡಿದ ಮಗಳ ಮರಳಿ ಪಡೆದನೆ ರಾಯನೆಂದ್ಹೊಡಸಿದ
ಭೇರಿ ದುಂದುಭಿಯ
ಕಡಲುಬ್ಬಿದಂತೆ ಉಲ್ಲಾಸದಿ ರಾಯನು ಒಡಗೊಂಡು
ಬಂದ ಬಾಲಕಿಯ ೩೭೬

ಬಗೆಬಗೆಯಾದ ಗೂಳಿಗವ [ಗುಳಿಗೆಯ?] ನೀವಾಳಿಸಿ
ಅಗಣಿತ ದಾನವ ಕೊಟ್ಟ
ಮುಗುದೇರು ಉಪ್ಪು ಬೇವನೆ ತಂದು
ಸುಳಿಯಲು ಮಗಸಹಿತ್ಲೊಕ್ಕಳರಮನೆಯ ೩೭೭

ಬ್ರಾಹ್ಮರ ಕರಸಿ ಗದ್ದುಗೆ ಮೇಲೆ ಕುಳ್ಳಿರಿಸಿ
ಕಾಣಿಕೆಯಿತ್ತ ರತ್ನವನು
ಬಾಲೆಯ ಕೊಡುವೆ ಪ್ರವರ್ತಿಸಿ ಮುನಿಪಗೆ
ಹೇಳೆಂದ ರಾಶಿಕೂಟವನು ೩೭೮

ಉತ್ತಮವಾಗಿ ಬಂದಿತು ರಾಶಿಕೂಟವು
ಪುತ್ರಿಗುಂಟಾ ಗುರುಬಲವು
ಈ ಕ್ಷಣದಲಿ ಮದುವೆಯ ಮಾಡಬಹುದೆನುತ
ಬುಧೋತ್ತಮರ್ಹೇಳಿದರಾಗ ೩೭೯

ಕಾರ್ತೀಕ ಶುದ್ಧ ಪಂಚಮಿ ಸೋಮವಾರವು
ಕಾಂತೆಯ ಲಗ್ನವೆಂದೆನುತ
ಭೂಪತಿಗಳಿಗೋಲೆ ಬರೆದನೆ ರಾಯನು ಈ ಕ್ಷಣಕೆ
ತೆರಳಿ ಬನ್ನೈನುತ ೩೮೦

ಹಚ್ಚೆಯ ಸಾರಣಿ ಹವಳದ ಕಾರಣಿ ಚಪ್ಪರ ಮೇಲುಕಟ್ಟುಗಳು
ಮುತ್ತು ಮಾಣಿಕ ಅಡಚಿದ ಭೋರುಜಗಲಿಯ
ಕಟ್ಟಿದರೆ ಚಿತ್ರದಿಂದ ೩೮೧

ತೋರಣಂಗಳ ಕಟ್ಟಿದರು ನಾಲ್ಕುದಿಕ್ಕಿಗೆ
ಕೇರಿಕೇರಿಯ ರಚಿಸಿದರು
ನಾರಿಯರೆಲ್ಲರು ಶೃಂಗಾರವಾಗಿರೆ ಬೀಗರನಿದಿರುಗೊಂಬುದಕೆ ೩೮೨

ಸರಸಿಜಮುಖಿಯರು ಬರೆದರೆ ಹಸೆಗಳ
ಇರಿಸಿದರ್ ವಜ್ರದ ಮಣಿಯ
ಹರಹಿದರು ಹಸೆಮೇಲೆ ದೇವಾಂಗವ ಮುನಿಯನು
ಕರೆದರೆ ಹಸೆಗೆ ३೮३

ರುಂದ್ಯದಿ ತಪಸಿದ್ದು ಕಂದಿದ ದೇಹವು
ಇಂದುಶೇಖರನೊಲವಿನಲಿ
ಬಂಗಾರಕೆ ಪುಟವಿಟ್ಟ ಚಿನ್ನದಂತೆ ಬಂದು ಒಪ್ಪಿದ ಹಸೆಮೇಲೆ ३೮೪

ಉತ್ತಮ ಮುನಿಯ ಸಂಗಡ ಮೀಯಬೇಕಲ್ಲ
ಮತ್ತ್ಯಾರು ಕಳಸಗಿತ್ತೇರು
ಹೆತ್ತ ತಾಯ್ ಯಾರು ಹಸೆಮೇಲೆ ಕುಳ್ಳಿರುವೋರು
ಇತ್ತೆವು ವೀಳ್ಯಾಕ್ಷತೆಯ ३೮೫

ಹೊಕ್ಕಳಮಗನ ಪಟ್ಟದರಾಣಿ ಸರಸ್ವತಿ ಹೆತ್ತ
ತಾಯಾದಳಾ ಮುನಿಗೆ
ಸರ್ಪಭೂಷಣನ ಜಡೆಯಲಿಪ್ಪ ಗಂಗೆಯು
ಒಪ್ಪಿದಳ್ ಕಳಸಗಿತ್ತಾಗಿ ३೮೬

ಸರಸಿಜಮುಖಿ ಪಾರ್ವತಿ ಲಕ್ಷ್ಮೀದೇವಿಯರು
ಹರಸಿ ಅಕ್ಷತೆಗಳನಿಟ್ಟು
ಅರಸಿಯನೊಡಗೂಡು ಶೀಘ್ರದಿಂದೆನುತಲೆ
ಅರಸಿನೆಣ್ಣೆಯ ತಿಗುರಿದರು ३೮೭

ಇಟ್ಟರು ನಾಲ್ಕು ದಿಕ್ಕಿಗೆ ಹೊನ್ನ ಕಳಸವ
ಸುತ್ತಿದರು ತಂದು ನೂಲ
ಇಟ್ಟರೆ ಮಧ್ಯದಿ ರತ್ನದ ಮಣಿಯನ್ನು ಒಪ್ಪಿ
ಕುಳ್ಳಿದ್ದನೆ ಮುನಿಪ ३೮೮

ಬಿಸಿನೀರ ಮಜ್ಜನವ ಮಾಡಿಸಿ ಮುನಿಪಗೆ
ಎಸೆವ ಓಕುಳಿಯನ್ನೆ ತುಂಬಿ
ಮಿಸುನಿಯ ಹರಿವಾಣ ಹಿಡಿದು ತಾವೆರೆದರು
ಹಸನಾದ ಕಳಸ ನೀರುಗಳ ೩೮೯

ಮಿಂದು ನಿಂತಿದ್ದ ಮುನಿಗೆ ತಂದುಕೊಟ್ಟರೆ ಛಂದ
ಛಂದದ ಉಡುಗೊರೆಯ
ಬಂದವರೊಡಗೂಡಿ ಭೋಜನವನೆ ಮಾಡಿ ಮುಂದೆ
ನಿಬ್ಬಣಕೆ ತೆರಳಿದರು ೩೯೦

ಅತ್ರಿಯ ಸತಿ ಅನುಸೂಯದೇವಿ ಅಹಲ್ಯೆ ಅಗಸ್ತ್ಯನ
ಸತಿ ಲೋಪಾಮುದ್ರೆ
ಸುತ್ತಲಿದ್ದ ಋಷಿಪತ್ನೀರು ಬಂದರು ಮತ್ತಾಗ
ಮುನಿಯ ನಿಬ್ಬಣಕೆ ೩೯೧

ಸಂಧ್ಯಾವಳಿ ಸರಸ್ವತಿ ಮಹಲಕ್ಷ್ಮಿಯು
ಇಂದ್ರಲೋಕದ ಕರ್ನಿಕೆಯರು
ಚಂದ್ರಶೇಖರನ ಜಡೆಯಲಿಪ್ಪ ಗಂಗೆಯು
ಬಂದಳೆ ಕಳಸಗಿತ್ತ್ಯಾಗಿ ೩೯೨

ಆ ಮುನಿನಿಬ್ಬಣ ಇಳಿದವೆ ನದಿಯಲಿ ಭಾನು
ಮಧ್ಯಾಹ್ನ ಕಾಲದಲಿ
ಸ್ನಾನ ಸಂಧ್ಯಾನ ನಿತ್ಯವ ಮಾಡಿ ಮೃಷ್ಟಾನ್ನ
ಭೋಜನವನೆ ಮಾಡಿದರು ೩೯೩

ಬಂದರು ನಿನ್ನ ಬೀಗರುಯೆಂದು ರಾಯಗೆ
ಬಂದೊಬ್ಬ ಮುನಿಯು ಹೇಳಿದನು
ಬಂದವರೊಡಗೂಡಿ ಭೋಜನವನೆ ಮಾಡಿ
ಸಂಭ್ರಮ ಪಟ್ಟನೆ ರಾಯ ೩೯೪

ಚಿತ್ರದ ಹಸೆಯ ಬರೆದರು ಗಾಡಿಕಾತಿಯರು
ಇಟ್ಟರೆ ವಜ್ರದ ಮಣೆಯ
ಕಸ್ತೂರಿಗಂಧ ಕದಂಬದ ತೈಲವ ತಂದಿಟ್ಟರೆ
ಪೊಂಬಟ್ಟಲೊಳಗೆ ೩೯೫

ಮುಡಿಯ ಬಿಡವ್ವ ಮಜ್ಜನವ ಮಾಡೇಳೆಂದು
ಬಿಡು ನಿನ್ನ ವ್ರತಗಳನೆಂದು
ಮಡದಿಯರೆಣ್ಣೆಯ ಒತ್ತಿ ಅರಸಿನವನು
ತೊಡೆದರೆ ಸರ್ವಾಂಗಕೆಲ್ಲ ೩೯೬

ಹೂಡಿದರು ನಾಲ್ಕು ದಿಕ್ಕಿಗೆ ಕಳಸವ
ತೋಡಿ ಬೆರಸಿದರುದಕವನು
ತಾಯಿ ಮಕ್ಕಳು ಒಂದಾಗೆ ಕುಳಿತರು ನಾನಾ ವಾದ್ಯಗಳಿಂದ ೩೯೭

ಬಳಗ ಸಹಿತ ತಾಯಿಮಕ್ಕಳು ಮಿಂದರು
ಬಗೆಬಗೆ ವಾದ್ಯಗಳಿಂದ
ಮುಗುದೇರು ಉಪ್ಪು ಬೇವನೆ ತಂದು ಸುಳಿಯಲು
ಮಗಸಹಿತ್ವೊಕ್ಕಳರಮನೆಯ ೩೯೮

ಹೊನ್ನಗಿಂಡಿಯಲಿ ಓಕುಳಿಯನೆ ತುಂಬಿ ರನ್ನದುಟಿಯ
ಚಪಳೆಯರು
ಚೆನ್ನಾಗಿ ಅಷ್ಟಕಳೆಯ ಹಚ್ಚಿ ಬೆರಸಿ ಬೆನ್ನಲೋಕುಳಿಯ
ಎರೆದರು ೩೯೯

ತಾಯಿ ಮಕ್ಕಳಿಗುಡಕೊಟ್ಟರು ಮಿಗಿಲಾದ
ಸಾರಾವಳಿಯ ಪಟ್ಟೆಯನು
ಬ್ರಾಹ್ಮರನೊಡಗೂಡಿ ಭಕ್ಷ್ಯಪಾಯಸವನು
ಭೋಜನವನೆ ಮಾಡಿದರು ೪೦೦

ಬಂದರು ನಿನ್ನ ಬೀಗರುಯೆಂದು ರಾಯಗೆ ಬಂದೊಬ್ಬ
ಮುನಿಯ ಹೇಳಿದನು
ಬಂದವರಿಗೆ ಮನ್ನಿಸಿ ಉಡುಗೊರೆಯಿತ್ತು
ಸಂಭ್ರಮಬಟ್ಟನೆ ರಾಯ ೪೦೧

ಬೀಗರಿಗುಲುಪು ಬಂದಿತು ಅಕ್ಕಿ ಕಣಿಕವು
ಬೇಳೆ ಬೆಲ್ಲವು ಮೊದಲಾಗಿ
ಹಾಲು ಮೊಸರು ತುಪ್ಪ ಕಾಯಿ ಮೇಲೋಗರ
ಸಾಲುಸಾಲಾಗಿ ನಡೆದವು ೪೦೨

ಎಳನೀರು ತೆಂಗಿನಕಾಯಿ ಸಕ್ಕರೆಯು ಕರಿಯ
ಕಬ್ಬಿನ ಹೊರೆಗಳನು
ಒಡಗೊಂಡು ಬಂದು ನಿಬ್ಬಣದ ವಿಸ್ತಾರದ
ವನದಲ್ಲಿ ತಂದಿಳುಹಿದರು ೪೦೩

ನರ್ತನ ಗೀತದ ಸತಿಯರು ಬಂದರು
ಉತ್ತಮವಾದ ಪಾಠಕರು
ಅತ್ಯಂತ ವೇದ ಬಲ್ಲ ಜೋಯಿಸರೆಲ್ಲರು
ಅರ್ತಿಯಿಂದ ಸಾಗಿ ನಡೆದರು ೪೦೪

ಎಳನೀರು ತೆಂಗಿನಕಾಯಿ ಸಕ್ಕರೆಯು ಕಡಲೆಯು
ಬಂಡಿ ಪಾನಕವು
ಒಡಗೊಂಡು ಬಂದು ನಿಬ್ಬಣಕೆಲ್ಲ ಕೊಡಿಸಿದ
ಬಿಡಿಸಿದ ಬಿಡದಿಯ ಮನೆಯ ೪೦೫

ಬಳಲಿ ಬಂದಿರಿ ಬೇಸಿಗೆ ಬಿಸಿಲೊಳಗೆನುತಲೆ
ಚರಣವ ತೊಳೆದು ಭಕ್ತಿಯಲಿ
ಉಡುಗೊರೆ ಉಲುಪೆಯ ಒಪ್ಪಿಸಿ ರಾಯನು
ನಡೆದನು ತನ್ನರಮನೆಗೆ ೪೦೬

ನಾಳೆ ಉದಯಕ್ಕೆ ಅಬ್ದಿಕವೆನುತಲೆ ಬೀರಿದರರಿಸಿನೆಣ್ಣೆಯನು
ರಾಯ ಮಾಡಿದ ಮಂಗಳ ಮಜ್ಜನವನು ನಾಂದಿ
ಶೋಭನ ಮುಗಿಸಿದರು ೪೦೭

ಮುನಿಯು ಮಜ್ಜನ ಮಾಡಿ ಹವನ ಹೋಮಂಗಳ
ಮುಗಿಸಿ ಮೌಂಜಿಗಳ ಬಿಡಿಸಿ
ಹೆಗಲ ಮೇಲಿಟ್ಟರಕ್ಕಿ ಕಣಿಕದ ಗಂಟ ಕೊಡೆ ಹಿಡಿದು
ನಿಂತನೆ ಮುನಿಯು ೪೦೮

ಹಾವಿಗೆ ಮೆಟ್ಟಿ ನಿಂತನೆ ವಾರಣಾಸಿಗೆ
ಹೋಗುವ ಪಯಣವೆಂದೆನುತ
ಬ್ರಾಹ್ಮರ ಒಡಗೊಂಡು ಬಂದನೆ ರಾಯನು
ನಾರಿಕೇಳವ ಕೈಲಿಕೊಟ್ಟ ೪೦೯

ಬಾಲೆಯ ಕೊಡುವೆನು ಆಲಯ ನಿನಗೆಂದು
ನಾಲ್ಕುದಿನ ಹೋದ ಮೇಲೆ
ನಾರಿಸಹಿತ ವಾರಣಾಸಿಗೆ ಹೋಗೆಂದು
ಹೇಳಿದ ಮುನಿಗೆ ಭೂಪಾಲ ೪೧೦

ಒಪ್ಪಿಕೊಂಡನೆ ಮುನಿಯು ಮಾವನ ಮಾತಿಗೆ
ಅಕ್ಕಿ ಕಣಿಕದ ಗಂಟನಿಳುಹಿ
ಮುತ್ತೈದೆರೆಲ್ಲರು ಹರಸಿ ಅಕ್ಷತೆಯಿಟ್ಟು
ಮುತ್ತಿನಾರತಿಯನೆತ್ತಿದರು ೪೧೧

ಸಾದರ ಮಾಡಿಸಿದ ರಾಯ ಚಪ್ಪರದೊಳಗೆಲ್ಲ
ದೊರೆದೊರೆಗಳ ಕುಳ್ಳಿರಿಸಿ
ಕುದುರೆ ಕಾಲಾಳು ದಂಡಿಗೆಗಳು ಬಂದವು
ಅಳಿಯನ ಕರೆಯಬೇಕೆನುತ ೪೧೨

ಭೇರಿಯ ಮೇಲೆ ಪಡುವಿಟ್ಟು ಸಾರಿದರಾ
ಕೇರಿಕೇರಿಯ ಹೊಕ್ಕು ಕರೆದು
ನಾರಿಯರೆಲ್ಲರು ಶೃಂಗಾರವಾಗಿರೆ ಧಾರೆಯ
ನೋಡುವ ಬನ್ನಿ ೪೧೩

ಆನೆಯನೇರಿದ ನಾನಾ ವಾದ್ಯಗಳಿಂದ
ನಾರೀರು ಧವಳಾವ ಪಾಡೆ
ಭೋರನೆ ಬಂದರು ಪುರಂದರರಂಗನೆಯರು
ಧಾರೆಯ ನೋಡಬೇಕೆಂದು ೪೧೪

ಇಟ್ಟಾಡಿದರು [ತಂಡು]ಲನು ಬೀಗಿತ್ತಿಯರು
ತಕ್ಕೈಸಿ ತಮ್ಮೊಳು ತಾವೆ
ಕಸ್ತೂರಿ ಗಂಧ ವೀಳ್ಯವ ಪರಿಮಳ ಕೊಡಿಸಿ
ಅರ್ತಿಂದ ನಡೆತಂದರಾಗ ೪೧೫

ಹಸ್ತಿಯನಿಳಿದು ಬಂದನೆ ಉದ್ದಾಳಿಕನು
ಒಪ್ಪಿದ ಹಸೆಯ ಪೀಠದಲಿ
ಮುತ್ತೈದೆರೆಲ್ಲರು ಹರಸಿ ಅಕ್ಷತೆಯಿಟ್ಟು
ಮುತ್ತಿನಾರತಿಯನೆತ್ತಿದರು ೪೧೬

ನಿಕ್ಷಕೆ ಬಂದೆವು ಮಿತ್ರೆಯ ಕರೆತನ್ನಿ ಇತ್ತೆವು ತಂದ ಭೂಷಣವ
ಮುತ್ತಿನ ಮುಡಿಯ ಓಸರಿಸಿ ಚಂದ್ರಾವತಿ ಒಪ್ಪಿದಳ್
ಮುನಿಯ ಕೆಲದಲಿ ೪೧೭

ಮಂಗಳ ಜವಳಿಯ ಉಡಿಸಿ ಕಾಲಂದಿಗೆ
ಉಂಗುರ ಸಲಿಗೆಯನಿಟ್ಟು
ರಂಭೆಯರೆಲ್ಲರು ಹರಸಿ ಅಕ್ಷತೆಯಿಟ್ಟು
ಮಂಗಳಾರತಿಯನೆತ್ತಿದರು ೪೧೮

ಬ್ರಾಹ್ಮರು ಹೊನ್ನ ಪೂಜೆಯಲಿ ತಂದಿಟ್ಟರು
ದೇವಗಂಗೆಯ ಉದಕವನು
ಪಾದವತೊಳೆಯಲು ಯೋಗಿ ತಾನಳಿಯನ
ಪೂಜೆಗನುಕೂಲ ಮಾಡಿದರು ೪೧೯

ದಧಿ ಮಧು ಆಜ್ಯ ಗಂಧಾಕ್ಷತೆ ಪುಷ್ಪವು
ಅಳಿಯಗೆ ಉಡುಗೊರೆಗಳನು
ಹರಿವಾಣದೊಳಗೆ ತಂದಿಳುಹಲು ರಾಯನು ಚರಣವ
ತೊಳೆದು ಭಕ್ತಿಯಲಿ ೪೨೦

ಚರಣವ ತೊಳೆದು ಶ್ರೀಗಂಧವ ಲೇಪಿಸಿ
ಉಡುಕೊಟ್ಟ ಪಟ್ಟಾವಳಿಗಳ
ಮರುಗ ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ
ಸರವ ಹಾಕಿದ ಕೊರಳೊಳಗೆ ೪೨೧

ಅಕ್ಷತೆ ಗಂಧವ ಇಡುವರು ನೊಸಲಿಗೆ
ಒಪ್ಪುವ ಅಗರು ಚಂದನವು
ಅರ್ತಿಯಿಂದಲಿ ಪೂಜಿಸಿ ತನ್ನ ಅಳಿಯಗೆ
ಮಧುಪರ್ಕದ ಕ್ರಮವ ನಡೆಸಿದನು ೪೨೨

ಕಾಮಧೇನು ಭೂಮಿದಾನ ಸಾಲಿಗ್ರಾಮ
ಆಮಹಾ ಕನ್ಯಾದಾನಗಳು
ಕಾಮಿನಿ ಕನ್ಯಾದಾನದ ಸಮಯದಿ ಕೊಟ್ಟ
ಸ್ವಾಮಿಗರ್ಪಿತವಾಗಲೆಂದು ೪೨೩

ಪನ್ನಂಗಧರಗೆ ಅರ್ಪಿತವಾಗಲೆನುತಲೆ
ಕನ್ಯಾದಾನದ ಸಮಯದಲಿ
ಹೊನ್ನುಂಗುರ ಚೌಕುಳಿ ಕಿವಿಗಿಟ್ಟರು ಹಿಡಿಹೊನ್ನ
ಕಟ್ಟಿದರು ಸೆರಗಿನಲಿ ೪೨೪

ಹಚ್ಚಡದ ತೆರೆಯ ಹಿಡಿದರು ದಂಪತಿಗಳ ಇಕ್ಕೆಲದಲ್ಲಿ ನಿಲ್ಲಿರಿಸಿ
ಉಚ್ಚರಿಸಿದರು ಗೋತ್ರ ಪ್ರವರಂಗಳ ಎತ್ತಿ ಧಾರೆಗಳನೆರೆದರು ೪೨೫

ಕನ್ಯಾಕ್ಷತೆ ಮುಂಚೆ ಬಿದ್ದವೆ ಮುನಿಪನ
ಉನ್ನಂತ ಉತ್ತಮಾಂಗದಲಿ
ಸೊನ್ನೆದಾಮನ ಗಡಿಬಿಡಿ ವಾದ್ಯವೆಸೆದವು
ಚಿನ್ನಗಾಳೆಗಳು ಚೀರಿದವು ೪೨೬

ಬಡನಡುವಿನ ಭಾವಕಿಯರಿಬ್ಬರು ನಿಂದು
ಹಿಡಿದರೆ ಶಕುನವ ಸೊಡಲ
ಅಡಕುವ ಮಿಂಚಿನಂದದ ನೋಟದಬಲೆಯರು
ಪಿಡಿದರು ಇಕ್ಕೆಲದಲ್ಲಿ ೪೨೭

ಬ್ರಾಹ್ಮರು ವೇದಮಂತ್ರವನ್ನೇಳಿ ಕಂಕಣ ದಾರವ ಕೈಗೆ ಕಟ್ಟಿದರು
ಮಾನಿನಿ ಕೊರಳಿಗೆ ಮಾಂಗಲ್ಯ ಸೂತ್ರವ
ತಾನಾಗ ಕಟ್ಟಿದ ಮುನಿಯು ೪೨೮

ಇಟ್ಟರು ಸಕಲಾಭರಣವ ಸತಿಯರು ಅಷ್ಟಪತ್ರಿಕೆ ನುಡಿಸಿದರು
ಕಟ್ಟಿದರು ಗಂಟಿಕ್ಕಿ ಸೆರಗ ದಂಪತಿಗಳು ಹೊಕ್ಕರೆ
ದೇವರ ಮನೆಯ ೪೨೯

ಹಾಲು ತುಪ್ಪವ ಕುಡಿದರು ಚಟ್ಟಿ ಬಡಿದರು
ಬಾಗಿನಂಗಳ ಕೊಡಿಸಿದರು
ಮಾಣಿಕದ ಹಸೆಮೇಲೆ ಬಂದು ಕುಳ್ಳಿದ್ದರೆ
ಹೋಮಗನುಕೂಲ ಮಾಡಿದರು ೪೩೦

ಎಳಸು ಗಣ್ಗಳ ಭಾವಕಿಯರಿಬ್ಬರು ಬಂದು
ಮಿಸುನಿಯ ಹರಿವಾಣ ಹಿಡಿದು
ನಸುಬೆಮರಿಡುತ ತಂದಿಳುಹಲು ಅಗ್ನಿಯ
ಹೊಸ ಪಟ್ಟಾವಳಿ ಉಡುಗೊಟ್ಟರು ೪೩೧

ಆಜ್ಯ [ತಂಡುಲ] ಸಮಿತ್ತುಗಳನೆ ತಂದರು
ಪೂಜಿಸಿದರು ಯಜ್ಞೇಶ್ವರನ
ಲಾಜ ಹವನವ ಮಾಡಿ ಸತಿಯಳ
ನೊಸಲಿಗೆ ಮೇಧಾವಿಯನಿಟ್ಟ ಮುನಿಯು ೪೩೨

ಸಪ್ತಋಷಿಗಳು ನಡೆತಂದು ಮದುಮಕ್ಕಳಿಗೆ ಕೈಯೆತ್ತಿ
ತೋರಿದರಾನಂದ್ಯತಿಯ
ಮುತ್ತೈದೆರೆಲ್ಲರು ಹರಸಿ ಅಕ್ಷತೆಯಿಟ್ಟು
ಮುತ್ತಿನಾರತಿಯೆತ್ತಿದರು ೪೩೩

ಸತಿಪತಿ ಅರಸಿನೆಣ್ಣೆಯ ಮಾಡಿ ಮಂಗಳಾರತಿ-
ಯನೆತ್ತಿದರು ಸಂಭ್ರಮದಿ
ಅತಿ ಹರುಷದಿಂದ ಅಡಿಗೆಯ ಮಾಡುವ
ಯತನವ ಮಾಡುತಲಿದ್ದರು ೪೩೪

ಸೋಮಶಾಲೆಯೊಳಗೆ ಬ್ರಾಹ್ಮರಿಗೆಮಾಡಿ
ಠಾಣ ದೀವಿಗೆಗಳನಿರಿಸಿ
ನಾರಿಯರೆಲ್ಲರು ರಂಗವಾಲೆಯನಿಕ್ಕಿ
ಭೂಮಕನುಕೂಲ ಮಾಡಿದರು ೪೩೫

ಹಪ್ಪಳ ಸಂಡಿಗೆ ಹಲವು ಶಾಕಂಗಳು
ಒಪ್ಪುವ ಪರಮಾನ್ನಘೃತವು
ಒಪ್ಪದಿ ಸತಿಯರು ಹರಿವಾಣದಲಿ ತಂದು
ಚಪ್ಪರದಲಿ ಬಡಿಸಿದರು ೪೩೬

ಹೊಂಬಟ್ಟಲಲಿ ತಿಳಿತುಪ್ಪ ಸಕ್ಕರೆಯನು
ತಂದಿಳುಹಿದರು ಭೂಮವನು
ಅಂಬುಜಮುಖಿ ಆಪೋಷಣಕ್ಕೊರೆಯಲು ಅಂದು
ಭೋಜನವ ಮಾಡಿದರು ೪೩೭

ಉಂಡು ಕೈ ತೊಳೆದರು ಕೊಂಡು ತಾಂಬೂಲವ
ರಂಭೇರು ವಿಶ್ರಮಿಸಿದರು
ಇಂದೆನ್ನ ಜನ್ಮ ಸಾಫಲ್ಯವಾಯಿತು ಎಂದು ಬಂದು
ಮಂಚದಿ ಮಲಗಿದರು ೪೩೮

ವಿವಾಹವಾದ ನಾಲ್ಕನೆಯ ದಿನದಲ್ಲಿ
ನಾಗವೋಲೆಗಳನ್ನೆ ಮುಗಿಸಿ
ನಾರಿಯರೆಲ್ಲರು ಹೊಳಲ ಪ್ರದಕ್ಷಿಣೆ
ಮಾಡುತಬಲಿಯ ಚೆಲ್ಲಿದರು ೪೩೯

ಅಕ್ಕಿಯಾನೆ ಉಪ್ಪಿನಾನೆ ಬೇಡಿದ ಮಕ್ಕಳು
ಸುತ್ತಿ ಪ್ರದಕ್ಷಿಣೆ ಬರಲು
ಮುತ್ತೈದೆಯರಿಗೆ ಮರದ ಬಾಗಿನ ಕೊಟ್ಟು
ಮುತ್ತಿನಾರತಿಯನೆತ್ತಿದರು ೪೪೦

ಅಳಿಯಗೆ ಕೊಟ್ಟನು ಬಗೆಬಗೆ ಉಡುಗೊರೆ
ಬೆಲೆಯಿಲ್ಲದಂತ ಹಚ್ಚಡವ
ಮುನಿಗಳಿಗಿತ್ತನು ಬಳಗ ಜವುಳಿಗಳ
ಮಗಳಿಗುಡಿಸಿದ ಪಟ್ಟಾವಳಿಯ ೪೪೧

ಬಂಡಿ ಬಂಡೀಲಿ ಹೇರಿದರು ಸಾಮಗ್ರಿಯ
ತಂಡತಂಡದಿ ಉಡುಗೊರೆಯ
ತಾಂಬೂಲದಾನವ ಕೊಟ್ಟು ದಂಪತಿಗಳು
ಬಂದು ಏರಿದರಾಗ ಗಜವ ೪೪೨

ಒಪ್ಪಿಸಿದನು ರಾಯ ಮುನಿಗೆ ಕುಮಾರಿಯ
ರಕ್ಷಣೆ ಮಾಡಬೇಕೆನುತ
ಪುತ್ರಿ ಏನು ಒಂದರಿಯಳು ಎನುತಲೆ ಒತ್ತಿದ ಕಣ್ಗಳ ಜಲವ ೪೪೩

ಮೇಲಾದ ಶುಭ ಮಹೂರ್ತವ ನೋಡಿ ಹೊಕ್ಕರು
ಬಾಲಸಹಿತಲಾಶ್ರಮವ
ನೀಲಾಚಲ ನಿತ್ಯಾನಂದನ ಕೃಪೆಯಿಂದ
ಕೂಡಿದರಾ ಸತಿಪತಿಯು ೪೪೪

ಸತಿಪತಿ ಒಂದಾಗಿ ಹಸೆ ಮೇಲೆ ಕುಳಿತರು
ಸುತಗೆ ಮೌಂಜಿಯನ್ನೆ ಕಟ್ಟಿ
ಅತಿಶಯದಲಿ ಅಗ್ನಿಕಾರ್ಯವನೆ ಮಾಡಿ
ಆರತಿಯನತ್ತಿದರು ಸಂಭ್ರಮದಿ ೪೪೫

ವೇದಾಂತ ವೇದ್ಯ ತತ್ವಜ್ಞಾನ ಕಥೆಯನು
ಪಾದಪಂಕಜಯುಗಳದಲಿ
ನೋಡಿ ಮಾಡಿದೆನು ಕಾವ್ಯದಲಿ ಕುಂದಿದ್ದರೆ
ನೋಡಿ ತಿದ್ದುವುದು ಸುಜನರು ೪೪೬

ಅನ್ವಯ ಅರ್ಥ ಚಾತುರ್ಯ ಬಲ್ಲವಳಲ್ಲ
ಹೆಣ್ಣು ಬಾಲಕಿ ಹೆಚ್ಚಾಗರಿಯೆ
ಚೆನ್ನಾಗಿ ವಾಲ್ಮೀಕರು ಬಾಲರಿಗೆ ಬೋಧಿಸಿದಂತೆ
ಬೋಧಿಸಿದನು ಹೆಳವನಕಟ್ಟೆಯ ರಂಗ ೪೪೭

ಪ್ರಾತಃ ಕಾಲದೊಳೆದ್ದು ಉದ್ದಾಳಿಕನ ಕಥೆಯನು
ಭಕ್ತಿಯಿಂದ ಹೇಳಿ ಕೇಳಿದರಿಗೆ
ಇಷ್ಟಾರ್ಥವು ಸಿದ್ಧಿ ಆಗೋದು ಎಂದು ಕೊಟ್ಟರೆ
ಹರಿಹರ ವರವ ೪೪೮

## ಶಂಕರ ಗಂಡನ ಹಾಡು

ಗಿರಿಜೆಯ ವರಸುತ ಕರಿಮುಖಗೊಂದಿಸಿ
ಸರಸ್ವತಿಗಭಿವಂದಿಸುವೆ
ಪರಮದಯಾಳು ಹೆಳವನಕಟ್ಟೆರಂಗಯ್ಯ
ಒಡೆಯನು ಎನ್ನ ಮನದೊಡೆಯ ೧

ತಾನಾಗಿ ಶಿವ ಶಂಕರಗಂಡ ತಂಗಿಗೆ ವಿವಾಹಮಾಡೋ
ಸಂಭ್ರಮ[ದಾ]
ಭಾವ ಮೈದುನರ ಕಥೆಯ ನಾಪೇಳುವೆ ನೀವೆಲ್ಲ
ಕೇಳಿ ಸಜ್ಜನರು ೨

ದ್ವಾರಾವತಿಯ ಸೀಮೆಯಲ್ಲಿ ರಂಜಿಸುವೊ
ವಿಶಾಲ ವಿಲಾಸ ಪಟ್ಟಣದಿ
ನಾರಾಯಣ ಕುಮಾರ ಒಪ್ಪಿದನೊಂದು ಚಾರುಮಣಿ
ಖಚಿತ ಮಂದಿರದಿ ೩

ಚಂದ್ರಸೂರ್ಯರು ಎಡಬಲದಿ ಒಪ್ಪಿರಲು
ಮಂದಮಾರುತ ತಂಪೆಸೆಯೆ
ಗಂಧ ಕಸ್ತೂರಿ ಕದಂಬವನೇರಿಸಿ ಆನಂದವಾಗಿದ್ದ ಮನ್ಮಥನು ೪

ಗಿಳಿವಿಂಡು ನವಿಲು ಹಂಸವು ರಂಜಿಸುವಂಥ ನವಿಲ
ಮಯೂರ ಪಕ್ಷಿಗಳು
ಅಳಿಗಳು ಝೇಂಕರಿಸುತಲಿ ಹಾಡುತಲಿರೆ ನಳಿನ
ನಾಭನ ಓಲಗವು ೫

ಕೈಲಾಸಪುರದ ರಾಜ್ಯದೊಳಗೊಪ್ಪುವ
ನಿರ್ಭಯದಲಿನಲ್ಕಾವತಿಯು
ತ್ರೈಲೋಕ್ಯವಂದ್ಯ ಶಂಕರಗಂಡನಿಹ ಒಮ್ಮನದಿಂದನುಜೆಯ
ಪಾಲಿಸುತ್ತ ೬

ಅರಗಿಳಿಯಾಡಿಸುವಳು ಕೆಂಧೂಳಿಯಲಿ
ಮರಿಹಾವುಗಳ ನೆರೆಹುವಳು
ತರಳಾಕ್ಷಿತನ್ನ ಸಂಪತ್ತುಗಳೆಲ್ಲವ ಬಿಟ್ಟು
ಗೊಂಬೆಯಾಟವನೆ ಆಡುವಳು ೭

ಆಡೋಳು ಪಂಚ ಪಗಡಿ ಚಿನ್ನದಮಣೆಯೊಳು
ಕೂಡಿದ್ದ ಗೆಳತಿಯರ ಒಡನೆ
ಪಾಡೋಳು ಮರಿಕೋಗಿಲೆಯಂತೆ ತಂಗಿಯ
ನೋಡಿದ ನವಯೌವನೆಯನು ೮

ನಿತ್ಯ ನಿತ್ಯದಿ ಯೌವನವು ಹೆಗ್ಗಳಿಸಲು ಬಟ್ಟ
ಕುಚವು ತೋರಿದವು
ಮಿತ್ರೆ ತಂಗಿಗೆ ವರವದಾವುದೆನುತಲಿ
ಚಿತ್ತದೊಳಗೆ ಚಿಂತಿಸುತ್ತಿದ್ದ ೯

ಪುಷ್ಪಬಾಣನು ತಂಗಿಗೆ ತಕ್ಕ ವರನೆಂದು ಚದುರ
ಚೆನ್ನಿಗನು ಮನ್ಮಥನು
ತವಕದಿ ಬುದ್ಧಿವಂತರ ಕಳುಹಿಸಿ ನಾಳೆ
ಉದಯಕ್ಕೆ ಕರೆತನ್ನಿರೆಂದ ೧೦

ಬಂದು ವಿಲಾಸ ಪಟ್ಟಣದೊಳು ಮದನಗೆ ಪ್ರೀತಿಲಿ
ನಿಂದು ಕೈ ಮುಗಿದರು ಹೋ
ಗೈಂದು ಶಂಕರಗಂಡ ಕಳುಹಿದ ನಿಮ್ಮನೆಗೈತಂದೆವೆನಲು ೧೧

ಬಂದ ಬಿಡಾರವ ತಂಡ ತಂಡದಲಿಳಿಸಿ ವಂದಿಸಿ
ಮಾತಾಡಿ ನಗುತ ಭೂ
ಮಂಡಲದೊಳು ಕ್ಷೇಮವೆ ಎನುತ ಶಂಕರಗಂಡ
ಕೇಳಿದ ಮನ್ಮಥನ ೧೨

ನಿಮ್ಮ ಕಾರುಣ್ಯ ಕೃಪೆಯಿಂದ [ಸ್ತುತ್ಯ]ವು ನಮ್ಮ
ರಾಜ್ಯವು ಕ್ಷೇಮವೆನ್ನಲು

ಸನ್ಮಾನದಿಂದ ಉಪಾಚಾರ[ಮಾ]ಡುತ್ತ
ಬ್ರಹ್ಮಾನಂದದಲಿದ್ದ ಶಂಕರಗಂಡನು ೧೩

ರುಕ್ಮಿಣೀ ತನುಜಗೆ ಎಮ್ಮನುಜೆಯ ಕೊಟ್ಟು
ವಿವಾಹ ಮಾಡಲಿಚ್ಛಿಸುವೆ
ಲಕ್ಷಣವಂತೆಯು ಕೈಪಿಡಿಯೆ ನಿಮ್ಮನಪೇಕ್ಷಿಸಿದಳು
ಚಂದ್ರಮುಖಿಯು ೧೪

ತಂದು ಗದ್ದುಗೆಯ ಚಾವಡಿಯಲ್ಲಿ ಹಾ[ಕಲು]
ಸಂಭ್ರಮದಿಂದ ಕುಳಿತರು
ಹೊಂಬಣ್ಣದ್ಹರಿವಾಣದೊಳಗೆ ತಾಂಬೂಲವ
ತಂದಿಡುವರು ಮನ್ಮಥಗೆ ೧೫

ಅಂಗಜ ಅತಿ ದೈನ್ಯ ಉಕ್ತಿಯಿಂದಲಿ ಬಹು
ಮಂಗಳ ಮೃದು ವಾಕ್ಯವನ್ನು ಪ್ರ
ಸಂಗ ಮಾಡುವನು ಶಂಕರಗಂಡ ನಿಮ್ಮ
ತಂಗಿಯನೆನಗೀಹುದೆಂದ ೧೬

ಬಲ್ಲಿದರು ನೀವು ಬಹು ಪರಾಕ್ರಮಿಗಳು
ಮಲ್ಲಿಗಿಸರ ಕಬ್ಬು ಬಿಲ್ಲು
ಸಲ್ಲದು ನಿಮ್ಮೊಳು ಸಲಿಗಿ ನಮಗೆಂದು ಬಲ್ಲ
ಹಿರಿಯರು ಹೇಳುವರು ೧೭

ಸರ್ವ ಲಕ್ಷಣವುಳ್ಳ ಸರಸಿಜನೇತ್ರೆಯು
ಒಬ್ಬಳೇ ರತಿ ನಮ್ಮ ತಂಗಿ
ಹಬ್ಬ ಹುಣ್ಣಿಮೆಗೆ ಕಳಿಸದೆ ನಮ್ಮನೆಗೆ ನಿರ್ಬಂಧ ಮಾಡುವಿರೆಂದ ೧೮

ನಡೆದರೆ ಬಡವಾಹಳು ನಮ್ಮ ತಂಗಿಯು
ಕಡುಮೋಹದಿಂದ ಸಾಕಿದೆನು
ಬಡಿವಾರ ನಿಮ್ಮೊಳು ಭರವಸೆ ನಮಗೇನು
ಕೊಡಲಾರೆ ತಂಗಿಯನೆಂದ ೧೯

ಅನುಮಾನ ಮಾಡುವುದೇಕೊ ನೀ ಇಷ್ಟೊಂದು
ಅವಳಿಗೆ ಸ್ವತಂತ್ರವಿಲ್ಲೇನು
ನೆನೆದಾಗ [ಕಳುಹುವೆ ನಿಮ್ಮ ಮನೆಗೆಂದು] ಮನಸಿಜ
ನುಡಿದ ದೈನ್ಯದಲ ೨೦

ಹಾಗಾದರಾಗಲಿ ಎನುತ ರಾಶಿಕೂಟ
ಭಾಗ್ಯದಿಂದಲಿ ನೋಡಿದರು
ಭಾಗೀರಥಿ ಮದನ ರತಿದೇವಿಗೆ ಆಗಲೆ
ನೇಮವನೆ ಮಾಡಿದರು ೨೧

ನಲ್ಲಾವತಿಯ ಶೃಂಗಾರ ಮಾಡಿದರು ದಿನಕರ
ಪ್ರತಿಬಿಂಬ[ದಂದ]ದಲಿ
ಕನಕ ತೋರಣಗಳನ್ನು ಕಟ್ಟಿ ತಾ ಕರೆಸಿದ
ಎಣಿಕೆಯಿಲ್ಲದ ಬಂಧು ಜನರ ೨೨

ಬಲ್ಲಿದ ಶುಭಲಗ್ನವ ನೋಡಿ ಬುಧಜನರು
ಎಲ್ಲರು ನೆರೆದು ಸಂಭ್ರಮದಿ
ಮಲ್ಲಿಗೆ ಸರದಿ ಮದನರತಿದೇವಿಗೆ ಕಲ್ಯಾಣವನೆ ಮಾಡಿದರು ೨೩

ಸೆಳೆಮಂಚ ಸುಪ್ಪತ್ತಿಗೆ ಸುವರ್ಣದ ತಳಿಗೆ
ಬಟ್ಟಲು ಗಿಂಡಿಗಳನ್ನು
ಬಳುವಳಿ ಮಾಡಿದ ಸ್ತುತಿಸುವೊ ಎಳೆದೇರ
ಬಳುವಳಿ ತಂಗಿಗೆ ಇತ್ತ ೨೪

ಸಾಸಿರ ಗೋವು ಗಜವು ತುರಗವು ಬ್ಯಾಸರಿಯದೆ ತಂಗಿಗಿತ್ತ
ಲೇಸಾದ ಊರು ಉಂಬಳಿಯ ಕೊಟ್ಟುರತಿಯ
ವಿಲಾಸಪಟ್ಟಣಕೆ ಕಳಿಸಿದ ೨೫

ಮನ್ಮಥ ರತಿದೇವಿ ವಿಲಾಸ ಪಟ್ಟಣದೊಳು ಉನ್ನಂತ
ದಿನ ಬಾಳುತಿರಲು
ಇನ್ನೊಮ್ಮೆ ನೋಡಬೇಕೆನುತ ಶಂಕರ ಗಂಡ ತನ್ನೊಳು
ತಾನೇ ಯೋಚಿಸಿದ ೨೬

ಬಿಗಿದು ಸುತ್ತಿದ ದೊಡ್ಡ[ಚೆಂ]ಡಿಯ ಬೆನ್ನಿಗೆ
ಬಿಗಿದ ನಾಡಗಂಬಳಿಯ
ಹೆಗಲ ಮೇಲಿನ ಬಾರಿಕೋಲು ಮನ್ಮಥರಾಯ
ನಗುವಂತೆ ಮಾಡಿ ರೂಪವನು ೨೭

ಹೆಗ್ಗಾಲು ಮರೆಯ ಮೆಟ್ಟಿದ್ದ ಕೈಯಲ್ಲಿ ದೊಡ್ಡ
ಕುಡಗೋಲು ಕವಣೆಯ ಪಿಡಿದು
ಶೀಘ್ರದಿ ತೆರಳಿ ಅಂಗಜನಹಂಕಾರವ ನಿಗ್ರಹ
ಮಾಡುವೆನೆನುತ ೨೮

ನೋಡೆಲೆ ರತಿ ನಿನ್ನ ಒಡಹುಟ್ಟಿದಣ್ಣನು
ರೂಢಿಯೊಳಗೆ ಅತಿಚೆಲುವ
ಗಂಡು ಕೆರವ ಮೆಟ್ಟಿ ಗಮಕದಿಬರತಾನ ನೋಡೆಂದು
ಸತಿಗೆ ತೋರಿದನು ೨೯

ಬಡವನಲ್ಲವೋ ಆತ ಬಹು ಪರಾಕ್ರಮಿ
ಒಡಹುಟ್ಟಿದಣ್ಣ ತಾ ಮುನಿಯೆ
ಕೆಡುವುದೋ ನಮ್ಮ ಐಶ್ವರ್ಯ ಆತನಗೊಡವೆ
ನಮಗೆ ಬೇಡವೆಂದ್ಲು ೩೦

ಕಾಂತೆಯ ಮಾತನು ಕೇಳಿ ಅಂಗಜನು ದಾವ
ಕಾರಣವ ಹೇಳದಂತೆ ದಿನಕರ
ನಂತೆ ಹೊಳೆಯುತ ಸಭೆಯಲಿತವಕದಿಂದಲಿ ಬಂದು ಕುಳಿತು ೩೧

ತಲೆಯೆತ್ತಿ ನೋಡಲಿಲ್ಲವು ಆತನ ಕೂಡೆ
ಗೆಲುವಿನಿಂದ ಮಾತಾಡಲಿಲ್ಲ
ಎಲೆ ಕಾಮದೇವ ಎನ್ನನುಜೆಯ ಕಳಿಸೆಂದು
ಜುಲ್ಮಿಂದ ತಾನೆ ಕೇಳಿದನು ೩೨

ಹೂವಿನ ಮಂಚ ಪಂಚಭಕ್ಷ್ಯ ಪರಮಾನ್ನವುದಾವಾಗ
ನಮ್ಮನೆಯಲಿ
ಉಣ್ಣಲಾರಳು ಜೋಳದನ್ನವ ನಮ್ಮಾಕೆ
ನಾವೀಗ ಕಳಿಸುವ್ರೋರಲ್ಲ ೩೩

ಲಕ್ಷ್ಮಿದೇವಿ ಭಾರತಿದೇವಿ ಗೌರಿಯರು
ತೌರುಮನೆಯ ಹಾರೈಸುವರು
ನಮ್ಮ ಮನೆಯಲ್ಲಿದ್ದ ಅಂಬಲಿಯನ್ನೇ
ಉಂಡು ಸಂಭ್ರಮದಿಂದ ಬಾಹೋಳೆಂದ ೩೪

ಸಿರಿ ಮುಡಿಯ ಮೇಲೆ ಹುಲ್ಲು ಹೊರಿಸುವೆನು
ಕರುವ ಕಾಯಿ ನಮ್ಮ ಮನೆಯ
ಅರಿವೆ ಉಡಿಸಿ ಮೂರು ಬೊಗಸೆ ಅಂಬಲಿಯನ್ನು
ಮರೆಯದೆ ಹೊಯ್ಸುವೆಂನೆಂದ ೩೫

ಬಹಳ ಮಾತಾಡೋದು ಯಾಕೋ ನೀ ಇಷ್ಟೊಂದು
ಜೋಳವ ಕೊಂಡು ಹೋಗೆನಲು
ಬೇಡೆಲವೊ ಕಾಮ ನಿನ್ನ ಐಶ್ವರ್ಯವ ಹಾಳು
ಮಾಡುವೆನೊಂದು ಗಳಿಗೆಯಲಿ ೩೬

ಸಮರ್ಥ ನೀ ಹೌದು ಸಲಹುವ ಜೋಳವ
ಗಮಕದಿಂದಲಿ ಬೆಳೆವೆನೆಂದು
ಅಮೃತದ ಕಲಶವ ತಂಗಿ ಕೈಯೊಳಗಿಟ್ಟು
ಚಮತ್ಕಾರದಿಂದ ಮಾಯವಾದ ೩೭

ಹೊಟ್ಟೆ ಹಸಿದಿತು ಭೋಜನ ಮಾಡುವೆನೆಂದರೆ
ಅಟ್ಟ ಅಡಿಗೆ ಮನೆಯೊಳಿಲ್ಲ
ಕುಟ್ಟಿದ ಬತ್ತ ಮನೆಯೊಳಗಿಲ್ಲ ಬಿಟ್ಟು
ಹೋಯಿತು ಮಾರ್ಬಲವು ೩೮

ಸಣ್ಣ ಶಾಲ್ಯಕ್ಕಿ ಬೇಳೆ ಬೆಲ್ಲವು ಎಲ್ಲ ಮಣ್ಣುಗೂಡಿತು ಆಕ್ಷಣದಿ
ಎಣ್ಣೆ ತುಪ್ಪದ ಕೊಡ ಮಣ್ಣಾಗಿ ಉರುಳಿದವು
ಇನ್ನೇನೆನುತ ಚಿಂತಿಸುತ ೩೯

ಉಟ್ಟದುಕೂಲ ವಸ್ತ್ರಗಳೆಲ್ಲವು ಪುಡಿಪುಡಿಯಾಗಿ ಹರಿದವು
ಎಡಗೈಯಿಂದಲಿ ಮಡದಿಯ ಕರಕೊಂಡು
ನಡೆದನು ಪರದೇಶಿಯಂತೆ ೪೦

ಮಂದಗಮನೆ ಮೆಲ್ಲಡಿಯ ನಿಡುವಳಂದು ಕಂದಿತು
ವರನಗೆ ಮುಖವು
ಕಂದರ್ಪ ಬಾಹ ದಾರಿಯಲಿ ಶಂಕರ ಗಂಡ ಒಂದು
ಹೊಲವ ನಿರ್ಮಿಸಿದ ೪೧

ಪಲ್ಲವಿಸಿದ ಪೈರನೆ ಕಂಡು ಮನ್ಮಥ ಮೆಲ್ಲನೆ
ಕೈಯ [ತು]ಡುಕಿದನು
ನಿಲ್ಲೆಲೊ ನಮ್ಹೊಲ ಹೋಗದಿರೊ ಎನುತ
ಅಲ್ಲಿಂದ ಗದ್ದ[ರಿಸಿ] ಬೈದ ೪೨

ತಪ್ಪದೆ ಕವಣಿಯ ಕಲ್ಲಿಟ್ಟು ಮದನಗೆ ನಿಮ್ಮಪ್ಪನ
ಹೊಲವೊ ಹೇಳೆನುತ
ದರ್ಪದಿಂದಲಿ ಶಂಕರಗಂಡ ನಿಗ್ರಹಿಸೆ ಸೊಪ್ಪಿಯ
ಮರೆಯಲ್ಲಡಗಿದನು ೪೩

ಮೊಸರು ಯಾಲಕ್ಕಿ ಶುಂಠಿಯನಿಕ್ಕಿ ಬುತ್ತಿಯ
ಹಸನಾಗಿ ಕಟ್ಟಿ ನಾರಿಯರು
ಹೊಸ ಗಿಂಡಿಯನೆ ತುಂಬಿ ಬರುತಿರೆ
ಪರಿಮಳ ಎಸೆವೋದ ಕಂಡ ಅಂಗಜನು ೪೪

ತರಳೆ ರನ್ನಳೆ ಪೋಗಿ ತವಕದಿ ಬುತ್ತಿಯ
ತಿರಿದು ತಾ ಎ[ನ]ಲು ಹೋಗಿ
ತರವೆ ನನಗೆ ಚಿಕ್ಕ ಪ್ರಾಯ ಲಜ್ಜೆತೊರೆದು ತಿರಿದು
ತಾ ಎನುತ ಹೇಳುವುದ ೪೫

ರಮಣನಾಡಿದ ಮಾತು ಮೀರಲಾಗದು ಎಂದು
ಅವರುಂಬೊ ಸಮಯಕ್ಕೆ ಹೋಗಿ
ನನಗಿಷ್ಟು ಬುತ್ತಿಯ ಕೊಡು ತಾಯೆ ಎನುತಲಿ
ಕಮಲಾಕ್ಷಿ ಕೇಳಿದಳವರ ೪೬

ಉಂಬೋ ಸಮಯಕ್ಕೆ ಬಂದಿರೆಂದು ಕೊಟ್ಟರವರು
ನಿಂಬೆಹೋಳು ಬುತ್ತಿಯನ್ನು
ಶಂಕರಾರಿಗೆ ಅದು ಸವಿದುಂಡು ಸಾಲದು
ಹಂಬಲ ಸುತ್ತ ಬರುತಿಹನು ೪೭

ಬಾರೆಲೊ ಎಂದು ಕರೆಸಿ ತಾ ಹೊಯ್ಸಿದ
ಆಗ ಅಂಬಲಿ ಮೂರು ಬೊಗಸೆ
ದಾರ ಮಗನೊ ನಿನ್ನ ಹೆಸರೇನೆನುತ
ವಿಚಾರಿಸಿದನು ಶಂಕರನು ೪೮

ನೆರೆ ಹೊರೆಯವರ ಮನ್ಮಥನೆಂದು ಕರೆವೋರು
ಪರದೇಶಿ ತಾನೆಂದು ನುಡಿದ
ಕರುಗಳ ಕಾಯಿ ಮೂರು ಬೊಗಸೆ ಅಂಬಲಿಯನ್ನು
ಮರೆಯದೆ ಹೋಯ್ಸುವೆನೆಂದ ೨೯

ತಂದೆ ನೀನಿಟ್ಟ ಉಳಿಗದೊಳಿಪ್ಪೆನು ಹಾಕೆಂದು
ಕೈಮುಗಿದ ಮನ್ಮಥನು
ಕಂದರ್ಪನ ಗರ್ವ ಅಡಗಿತು ಕರುಗಳ ಹಿಂಡು
ಕಾಯಲು ಒಪ್ಪಿದನು ೩೦

ನಾಲ್ಕುವಾರ ಕರುಗಳ ಹಿಂಡನೆ ಕಾಯ್ದು
ಜೋಕೆಯಲಿ ತಂದೊಪ್ಪಿಸಿದ
ಏಕೆಲೊ ಕರುಗಳು ಬಡವಾದವೆನುತಲಿ
ಧಿಕ್ಕರಿಸಿದನು ಶಂಕರನು ೩೧

ಕಡಿಮೆ ಮಾಡಿದ ಒಂದು ಬೊಗಸೆ ಅಂಬಲಿಯನ್ನು
ಒಡಲಿಗೆ ಸಾಲದಂಗಜಗೆ
ಎರಡು ಕೈಯಿಂದಲಿ ಕೊಯ್ದನು ಹುಲ್ಲನು
ಎನ್ನೊಡೆಯ ಮೆಚ್ಚುವನೆನುತ ೩೨

ಬೆರಳು ಒಡೆದು ರಕ್ತಧಾರೆ ಸುರಿಯೆ ಹುಲ್ಲು
ಹೊರೆಯ ತಾಹೊತ್ತ ಮಸ್ತಕದಿ
ಕರುಗಳ ಹಿಂಡು ಮುಂದೊತ್ತಿ ಮನ್ಮಥರಾಯ
ಬರುವುದ ಕಂಡು ಭಾಮಿನಿಯು ೩೩

ತನ್ನ ವಲ್ಲಭನ ಶ್ರಮ ಕಂಡು ರತಿದೇವಿ
ಕಣ್ಣಲಿ ಉದಕವ ತುಂಬಿ
ಇನ್ನಾದರೂ ಬಿಡಿಸೆನುತ ಅಣ್ಣಗೆ ಬೇಡಿಕೊಂಡು
ಬಿನ್ನೈಸಿದಳಾಕೆ ೩೪

ಅಂಗಜನ ಮೃದುಪಾಣಿ ಮಧ್ಯದಿ ಭಾಳ
ಗಾಯವ ಕಂಡ ಶಂಕರನು
ಹೋಯಿತು ಕೋಪವು ಅಂತಃಕರಣವು
ಆಯಿತು ಪಂಚಬಾಣನಲಿ ೫೫

ಕಬ್ಬು ಬಿಲ್ಲನ ಕೃಪೆಯಿಂದ ಶಂಕರಗಂಡ
ಅಭ್ಯಂಗನವ ಮಾಡಿಸಿದ
ಶುಭ್ರವಸ್ತ್ರವ ಉಡಿಸಿ ಪಂಚ ಬಾಣನ
ನಿರ್ಬಂಧವನೆ ಬಿಡಿಸಿದನು ೫೬

ತಡವ ಮಾಡದೆ ಜೋಡು ಸಮೆಗಳನೆ ಹಚ್ಚಿ
ಎಡೆಮಾಡಿ ಅರಮನೆಯೊಳಗೆ
ಒಡನೆ ಪಾಯಸ ಪಂಚಭಕ್ಷ್ಯ ಭೋಜನವಿಕ್ಕಿ
ಪಿಡಿದಿದ್ದ ವೀಳ್ಯ ಮೈದುನಗೆ ೫೭

ಭಾವಮೈದುನತನದಲ್ಲೆ ನೋಡಿದರು
ವಿರೋಧವಿಲ್ಲವೆಂದೆನುತ
ಕಾಮ ದೇವಗೆ ಉಡುಗೊರೆ ವೀಳ್ಯವನಿತ್ತು ಮನ್ನಿಸಿದ
ಶಂಕರನು ಪ್ರೇಮದಲಿ ೫೮

ಉತ್ತಮವಸ್ತ್ರವ ತಂಗಿಗುಡಿಸಿ ಹೊಸಮುತ್ತನೆ
ಸೋಗಿಲು ತುಂಬಿ
ಚಿತ್ತಜ ಸಹಿತಾಗಿ ವಜ್ರದಂದಣವೇರಿ ರತಿದೇವಿ ತಾ ಹರುಷದಲ್ಲಿ ೫೯

ಪುಷ್ಪಶರನು ತನ್ನ ಪುರಕಾಗಿ ಬರುತಿರೆ ಎದುರಿಗೆ
ಬಂತು ಮಾರ್ಬಲವು
ಮೊದಲಿನಂದದಲಿ ಐಶ್ವರ್ಯ ಹೆಗ್ಗಳಿಸುತ
ಸದನದಲ್ಲಿದ್ದ ಮನ್ಮಥನು ೬೦

ಬರಡಾಕಳೀಯಲಿ ಬಂಜೆಗೆ ಮಕ್ಕಳಾಗಲಿ
ಕುರುಡಗೆ ಕಂಗಳು ಬರಲಿ
ಋಣ ಹರಿಯಲಿ ದಾರಿದ್ರ್ಯವು ಹಿಂಗಲಿ ಹರಿ
ಎಮ್ಮ ಹೃದಯದೊಳಿರಲಿ ೬೧

ಶಂಕರಗಂಡನ ಕಥೆಯನು ಪೇಳಿದ ಪನ್ನಂಗತಲ್ಪನ ದಯದಿ
ನಿರ್ಮಲ ಮೂರ್ತಿ ಹೆಳವನಕಟ್ಟೆ ರಂಗಯ್ಯ ಎನ್ನನು
ಸಲಹುವ ದಯದಿ ೬೨

## ಸೀತಾ ಕಲ್ಯಾಣ

ಪಾಕ ಶೇಷಾದ್ರಿ ಬ್ರಹ್ಮಕೆ ಶರಣು
ಲೋಕನಾಯಕ ಹೆಳವನಕಟ್ಟೆ ವೆಂಕಟ
ನೀ ಕರುಣಿಸಿ ಸಲಹುವುದೆನಗೆ ಜಯ ಜಯ ಪ.

ಮದುವೆಯ ನಾಲ್ಕು ದಿವಸದಲ್ಲಿ
ಮದುವಣಿಗನು ರಾಮ ಜಾನಕಿಗೆ
ಮುದದಿಂದ ಅರಿಷಿಣೆಣ್ಣೆಯ ಮಾಡೊ ಸಂಭ್ರಮ[ದ]
ಪದನ ಹೇಳುವೆ ಸುಜನರು ಕೇಳಿ ಜಯ ಜಯ ೧

ಚಿತ್ತಜಪಿತ ಶ್ರೀರಾಮರಿಗೆ
ಅರ್ತಿಯಿಂದರಿಷಿಣೆಣ್ಣೆಯ ಮಾಡ್ವ
ಮಿತ್ರೆ ಕೌಸಲ್ಯದೇವಿ ಕೇರಿ ಕೇರಿಯ ಗುಂಟ
ಮುತ್ತೈದೇರನು ಕರೆಸಿದಳು ಜಯ ಜಯ ೨

ಪೀತಾಂಬರದುಡುಗೆಯನುಟ್ಟು
ಜ್ಯೋತಿಯಂದದಿ ಥಳಥಳಿಸುತಲಿ
ಜಾತಿಮಾಣಿಕದಾಭರಣವಿಟ್ಟು ರಾಮರ
ಮಾತೆಯರೆಲ್ಲ ಶೃಂಗಾರವಾಗಿ ಜಯ ಜಯ ೩

ಚೀಣ ಚೀಣಾಂಬರಗಳನುಟ್ಟು
ವೇಣಿ ಕಸ್ತೂರಿಯ ಪಣೆಗಿಟ್ಟು
ಜಾಣೆಯರೆಲ್ಲ ಶೃಂಗಾರವಾಗಿ ಮಲ್ಲಿಗೆ
ಬಾಣನ ಪಟ್ಟದಾನೆಗಳಂತೆ ಜಯ ಜಯ ೪

ಪೊಂಬಣ್ಣದ ಹಳದಿಯ ಕಲೆಸಿ
ತುಂಬಿದ ಹರಿವಾಣದೊಳಗೆ
ಅಂಬುಜನಾಭಗೆ ಅರಿಷಿಣೆಣ್ಣೆಯ ಮಾಡ್ವ
ಸಂಭ್ರಮಕೆ ನಡೆತಂದರಾಗ ಜಯ ಜಯ ೫

ಗರುಡನ್ವಲ್ಲಭ ಸೌಂದರದೇವಿ
ವರುಣನ್ವಲ್ಲಭೆ ಕಾಳಕದೇವಿ
ಹರನ್ವಲ್ಲಭೆ ಪಾಪ[ನಾ] ಶಿಗಂಗೆ ಸಹಿತಲಿ
ಅರಿಷಿಣೆಣ್ಣೆಯ ಮಾಡಬಂದರಾಗ ಜಯ ಜಯ ೬

ಬ್ರಹ್ಮವಲ್ಲಭೆ ಶಾರದಾದೇವಿ ವಾ–
ಯುರಮಣಿ ಅಂಜನಾದೇವಿ
ಹರುಷದಿ ಕೌಸಲ್ಯೆ ಕೈಕೆಸೌಮಿತ್ರೆಯರು
ಅರಿಷಿಣೆಣ್ಣೆಯ ಮಾಡಬಂದರಾಗ ಜಯ ಜಯ ೭

ಅಲ್ಲಲ್ಲಿ ನಡೆವ ನಾಟಕಶಾಲೆ
ಬಿಲ್ಲಾಳು ಬೆತ್ತ ಕಾಟನವರು
ಸೊಲ್ಲುಸೊಲ್ಲಿಗೆ ಹಿಡಿಹೊನ್ನನು ತ್ಯಾಗವ
ಚೆಲ್ಲುತ ದಶರಥ ನಡೆದನಾಗ ಜಯ ಜಯ ೮

ಹೊಡೆವ ತಂಬಟೆ ಭೇರಿ ನಿಸ್ಸಾಳೆ
ಬಿಡದೆ ಚೀರುವ ಹೆಗ್ಗಾಳೆಗಳು
ಸಿಡಿಲು ಗರ್ಜಿಸುವಂತೆ ಪಂಚಮವಾದ್ಯದಿ
ನಡೆದರು ಜನಕರಾಯನ ಮನೆಗೆ ಜಯ ಜಯ ೯

ಕುಸುಮಬಾಣನ ಮಾರ್ಬಲದಂತೆ
ಹಸುರು ಪಚ್ಚೆಯ ಪಲ್ಲಕ್ಕಿಗಳು
ಮುಸುಕಿದ ಪರಿಮಳದೊಳಪ[ಸಾ]ತಕೆ
ದಶರಥ ಬಂದನೆಂದರೆ ಜನರು ಜಯ ಜಯ ೧೦

ಭರದಿಂದಲೆದ್ದು ಜನಕರಾಯ
ತರಿಸಿ ನಿವಾಳಿಗಳನು ಹಾಕಿ
ಹರುಷದಿ ಕೈಲಾಗವ ಕೊಟ್ಟಯೋಧ್ಯದ
ಅರಸ[ನ] ಮನ್ನಿಸಿ ಒಡಗೊಂಡನಾಗ ಜಯ ಜಯ ೧೧

ಬೇಗದಿ ಗದ್ದುಗೆಯನು ಹಾಸಿ
ಬೀಗನ ಉಪಚರಿಸಿದ ಜನಕ
ಭಾಗೀರಥಿ ಪಾರ್ವತಿ ಗಂಗೆ ಸಹಿತಲಿ
ನಾಗಭೂಷಣನು ಕುಳಿತನಾಗ ಜಯ ಜಯ ೧೨

ಸುತ್ತಣ ರಾಯರಾಯರಿಗೆಲ್ಲ
ರತ್ನಗಂಬಳಿಗಳ ಹರಹಿದರು
ಅರ್ತಿಯಿಂದಲಿ ಸುರರೆಲ್ಲರು ಕುಳಿತರು
ವಿಸ್ತರಿಸಿದ ಮಂಟಪದೊಳಗೆ ಜಯ ಜಯ ೧೩

ಮಣಿಮಂಟಪದೊಳು ಹಸೆಹಾಸಿ ಕನಕ
ಮಣಿಯ ತಂದಿಳುಹಿದರು
ದಿನಕರಕುಲರಾಮ ಹಸೆಗೇಳೆನುತಲಿ
ಗುಣಾವಳಿಗ[ಳ] ಕೊಂಡಾಡಿದರು ಜಯ ಜಯ ೧೪

ಪೊಕ್ಕಳೊಳಜನ ಪೆತ್ತವನೇಳು
ಅಕ್ರೂರಜನ ಪೆತ್ತವನೇಳು
ಮುಕ್ಕಣ್ಣನ ರಿಪುಬಲವ ಸಂಹರಿಸಿದ
ಭಕ್ತವತ್ಸಲ ಹಸೆಗೇಳೆಂದರು ಜಯ ಜಯ ೧೫

ದಶರಥರಾಜನಂದನನೇಳು
ಅಸುರಸಂಹಾರ ಕಾರಣನೇಳು
ವಸುಧೆಗೊಡೆಯ ರಾಮ ಹಸೆಗೇಳೆನುತಲಿ
ಋಷಿಗಳೆಲ್ಲರು ಶ್ರುತಿಗರೆದರಾಗ ಜಯ ಜಯ ೧೬

ಋಷಿವಾಲ್ಮೀಕಿ[ಯ]ರೆಲ್ಲರು ಕೂಡಿ
ಕುಶಲದ ಬಾಸಿಂಗವ ಪಿಡಿದು
ಅಸುರಾರಿಯ ಮಸ್ತಕಕಳವಡಿಸೋರು
ವಸುದೇವನಾಗೆಂದು ಹರಸುತಲಿ ಜಯ ಜಯ ೧೭

ತಂಡತಂಡದ ರತ್ನ ಅಡಸಿದಾಗ
ದುಂಡುಮುತ್ತಿನ ಮಣಿ ಬಿಗಿದಿದಾಗ
ತೊಂಡಿಲ ಮುತ್ತೈದೇರಳವಡಿಸೋರು ಕೋ-
ದಂಡ ಪಾಣಿಸತಿಜಾನಕಿಗೆ ಜಯ ಜಯ ೧೮

ಅರಳುಗಂಗಳಿಗೆ ಅಂಜನ ಹಚ್ಚಿ
ಬೆರಳಿಗೆ ಮುದ್ರೆ ಉಂಗುರವಿಟ್ಟು
ಕೊರಳಿಗೆ ಏಕಾವಳಿಯನೆ ಹಾಕೋರು
ತರಳಾಕ್ಷಿಯರಾ ಜಾನಕಿಗೆ ಜಯ ಜಯ ೧೯

ಬೊಂಬೆಯ ತೊಂಡಿಲ ಮುಡಿದಿರ್ದು
ಕುಂಭಿಣಿಸುತೆ ಕುಳ್ಳಿರಲಾಗಿ
ಅಂಬುಜಾಂಬಕ ರಘುರಾಮನ ಹರುಷದಿ
ರಂಭೆಯಿದ್ದೆಡೆಗೆ ಬಂದನೆ ನಗುತ [ಜಯ ಜಯ] ೨೦

ಬಂದನೆ ಭಾಗ್ಯಲಕ್ಷ್ಮೀರಮಣ
ಬಂದನೆ ಭಕ್ತವತ್ಸಲ ಸ್ವಾಮಿ
ಬಂದನೆ ಜಾನಕಿಯಡೆ ರಾಮನು ತಾ
ಬಂದನೆ ಮಣಿಮಂಟಪದೆಸೆಗೆ [ಜಯ ಜಯ] ೨೧

ನಿರ್ಜರನರನಾಗಸ್ತೋತ್ರ ಬಂದ
ಸಜ್ಜನಸಂತಾಪದೂರ ಬಂದ
ಧೂರ್ಜಟಿ ಜಪಿಸುವ ನಾಮವಿಗ್ರಹ ಬಂದ
ವಜ್ರಮಾಣಿಕದ್ವಸೆಯಿದ್ದೆಡೆಗೆ ಜಯ ಜಯ ೨೨

ಕೌಸಲ್ಯಸುತ ಕುಮಾರ ಬಂದ
ಹಂಸವಾಹನಪಿತ ರಾಮ ಬಂದ
ಕಂಸಾರಿ ದುಃಖವಿ [ನಾಶ] ರವಿಕುಲ
ವಂಶೋದ್ಧಾರಕ ಬಂದನಾಗ [ಜಯ ಜಯ] ೨೩

ಭಕ್ತವತ್ಸಲ ರಾಘವ ಬಂದ
ಮುಕ್ತಿದಾಯಕ ಶ್ರೀರಾಮ ಬಂದ
ಅರ್ಕನು ಶತಕೋಟಿತೇಜನು ಜಗಕತಿ–
ಶಕ್ತ ತಾ ಬಂದನೆಂದವೆ ಕಹಳೆ ಜಯ ಜಯ ೨೪

ಸಿಂಧುಬಂಧನ ರಾಘವ ಬಂದ ಪು–
ರಂದರವರದ ಶ್ರೀರಾಮ ಬಂದ
ಇಂದುವದನೆಪತಿ ರಾಮ ಬಂದನು ರಾಮ–
ಚಂದ್ರ ತಾ ಬಂದನೆಂದವೆ ಕಹಳೆ ಜಯ ಜಯ ೨೫

ಯಜ್ಞರಕ್ಷಕ ರಾಘವ ಬಂದ
ಯಜ್ಞಶಿಕ್ಷಾಮಿತ್ರ ರಾಮ ಬಂದ
ಸುಗ್ರೀವರಕ್ಷಕಾರಣ ಬಂದ ಲಕ್ಷ್ಮ–
ಣಾಗ್ರಜ ಬಂದನೆಂದವೆ ಕಹಳೆ ಜಯ ಜಯ ೨೬

ಯಂತ್ರವಾಹಕ ರಾಘವ ಬಂದ
ಮಂತ್ರಮೂರುತಿ ರಾಮ ಬಂದ
ಕಾಂತೆ ಶ್ರೀ ಜಾನಕಿರಮಣ ಬಂದನು ರಾಮ
ತಂತ್ರಿ ತಾ ಬಂದನೆಂದವೆ ಕಹಳೆ ಜಯ ಜಯ ೨೭

ದೂಷಕಹರಣ ಶ್ರೀರಾಮ ಬಂದ ವಿ–
ಭೀಷಣವರದ ರಾಘವ ಬಂದ
ಭಾಷೆ ಪಾಲಿಪ ರಾಮಚಂದ್ರ ಬಂದನು ಜಗ–
ದೀಶ ತಾ ಬಂದನೆಂದವೆ ಕಹಳೆ ಜಯ ಜಯ ೨೮

ತಾಟಕಪ್ರಾಣಾಪಹಾರ ಬಂದ
ಜಟಾಯುಮುಕ್ತಿಕಾರಣ ಬಂದ
[ತಾಟಂಕ] ಧರ ನಾರಾಯಣ ರವಿಕುಲ
ಕೋಟಿ ತಾ ಬಂದನೆಂದವೆ ಕಹಳೆ ಜಯ ಜಯ ೨೯

ವೀರ ವಿಕ್ರಮ ರಾಘವ ಬಂದ
ಮಾರೀಚಮರ್ದನ ರಾಮ ಬಂದ
ನಾರಿ ಶ್ರೀ ಜಾನಕಿರಮಣ ಬಂದನು
ಹರಿ ರಾಮ ತಾ ಬಂದನೆಂದವೆ ಕಹಳೆ ಜಯ ಜಯ ೩೦

ದೇವಕುಮಾರ ರಾಘವ ಬಂದ
ದೇವರ ದೇವನು ರಾಮ ಬಂದ
ಭಾವೆ ಶ್ರೀ ಜಾನಕಿರಮಣ ಬಂದನು
ರಾಮಚಂದ್ರ ತಾ ಬಂದನೆಂದವೆ ಕಹಳೆ ಜಯ ಜಯ ೩೧

ನಿರುಪಮಚರಿತ ರಾಘವ ಬಂದ
ದುರಿತದಲ್ಲಣ ರಾಮದೇವ ಬಂದ
ಭರತಶತ್ರುಘ್ನರ ಸಹೋದರಯೋಧ್ಯದ
ಸುರಪತಿ ಬಂದನೆಂದವೆ ಕಹಳೆ ಜಯ ಜಯ ೩೨

ಹೇಮಖಚಿತ ರತ್ನ ಪೀಠದಲಿ
ಭೂಮಿಜೆ ಸಹಿತ ಕುಳಿತ ರಾಮ
ವಾಮ ಭಾಗದಿ ಒಪ್ಪಿರ್ದಳು ಜಾನಕಿ
ಆ ಮಹಾಸಭೆಯನು ಬೆಳಗುತಲಿ ಜಯ ಜಯ ೩೩

ಕುಂದಣ ರತ್ನದಡ್ಡಿಕೆಯೊಳಗೆ
ಹೊಂದಿಸಿ ನವರತ್ನ ಇರುವಂತೆ
ಇಂದುವದನೆ ಜಾನಕಿ ಹರುಷದಿ ರಾಮ
ಚಂದ್ರನ ಮಧ್ಯದೊಳೊಪ್ಪಿದಳು ಜಯ ಜಯ ೩೪

ಹೇಮದ್ವರಿವಾಣದೊಳಗ್ನಿಯನು
ಕಾಮಿನಿಯರು ತಂದಿಳುಹಿದರು
ರಾಮ ಮನ್ನಿಸಿ ಉಡುಗೊರೆಯಿತ್ತು ಅವರಿಗೆ
ಹೇಮಾರ್ಚನೆಗಳ ತೊಡಗಿದನು ಜಯ ಜಯ ೩೫

ಲಾಜತೊಂಡಿ[ತಂಡು?]ಲ ಆಹುತಿಗೊಟ್ಟು
ಪೂಜಿಸಿದನೆ ವಿಘ್ನೇಶ್ವರನ
ರಾಜವದನೆಯ ಒಡಗೊಂಡು ರಾಘವ
ಪೂಜಿಸಿದನೆ ಋಷಿಮುನಿವರರ ಜಯ ಜಯ ೩೬

ಇಂದ್ರಾದಿ ಮುನಿಗಳು ಕೈಹೊಡೆದು
ಚಂದ್ರ ಸೂರ್ಯರು ಉಘೇಉಘೇಯೆನಲು
ಮಂದಾರ ಮಲ್ಲಿಗೆ ಮಳೆಗಳ ಕರೆದರು
ಅಂದದಿ ಸುರಜನರೆಲ್ಲರಾಗ ಜಯ ಜಯ ೩೭

ಅರಳುವ ಕೆಂದಾವರೆ ಕುಸುಮ
ಪರಿಮಳ ಸುರಮ್ಯ ಕಣ್ಗೆಸೆಯೆ
ಎರಗುವ ಮರಿದುಂಬಿಗಳಂತೆ ರಾಘವ
ಕರಗಳ ಪಿಡಿದೆತ್ತಿದ ಸತಿಯ [ಜಯ ಜಯ] ೩೮

ಇಳೆಯ ಜಗಂಗಳನುದರದಲಿ
ಅಳವಡಿಸಿದ ಮಹಾತ್ಮಕನು
ಇಳೆಯ ಮಗಳನು ಎತ್ತಲಾರದೆ ರಾಮ
ಬಳಲಿದನೆಂದು ನಕ್ಕರು ಜನರು ಜಯ ಜಯ ೩೯

ಪಾದ ಎಚ್ಚರಿಕೆ ಪರಾಕು ಸ್ವಾಮಿ
ಪಾದ ಎಚ್ಚರಿಕೆ ಪರಾಕು ದೇವ
ಪಾದ ಎಚ್ಚರಿಕೆ ಸೀತಾಪತಿ ರಾಮನೆ
ಪಾದ ಎಚ್ಚರಿಕೆ ಪಾದಪದನ ಜಯ ಜಯ ೪೦

ಚರಣ ಎಚ್ಚರಿಕೆ ಪರಾಕುದೇವ
ಚರಣ ಎಚ್ಚರಿಕೆ ಪರಾಕು ಸ್ವಾಮಿ
ಚರಣ ಎಚ್ಚರಿಕೆ ಜಾನಕಿಪತಿ ರಾಮನೆ
ಚರಣ ಎಚ್ಚರಿಕೆ ಗರುಡಗಮನ ಜಯ ಜಯ ೪೧

ತಟ್ಟೆ ಬಟ್ಟಲೊಳಿರ್ದರಿಷಿಣವ
ಬೊಟ್ಟಲಿ ತೆಗದು ಕೌಸಲ್ಯದೇವಿ
ಸೃಷ್ಟಿಗೊಡೆಯ ಶ್ರೀರಾಮಗೆ ತೊಡೆಯೆಂದು
ಕೊಟ್ಟಳೆ ಸಿರಿದೇವಿ ಕೈಲಿ ಜಯ ಜಯ ೪೨

ನಳಿನನಾಭನು ಶ್ರೀ ರಾಘವನ
ಇಳೆಯ ಮಗಳು ಜಾನಕಿ ತಾನು
ಗಿಳಿನುಡಿಗಳ ನುಡಿಸುವ ಸಮಯದಿ
ಗುಳುಗುಳಿಸು[ವ] ಗಲಭೆಯ ನಿಲಿಸಿ ಜಯ ಜಯ ೪೩

ಗೆಜ್ಜೆ ಕಾಲಂದುಗೆ ಘಿಲಿರೆನುತಾ
ವಜ್ರಮಾಣಿಕದೋಲೆ ಪೊಳೆಯುತಲಿ
ಹೆಜ್ಜೆಯಿಂದಳುಕೆ ನಾಚುತ ನಿಂದು ಬೇಡಿದ-
ಳಜನಯ್ಯನ ಸಿರಿಪದನವನು ಜಯ ಜಯ ೪೪

ಅಚ್ಯುತಾನಂತ ಶ್ರೀ ಹರಿ ರಾಮ
ರಚ್ಚೆಗಿಕ್ಕಿದಳೆನ್ನಲಿ ಬೇಡ
ಹೆಚ್ಚಿನ ತಮನೆಂಬ ದೈತ್ಯನ ಗೆಲಿದಂಥ
ಮತ್ಸ್ಯರೂಪದ ಮುಖ ತಾರೆಂದಳು ಜಯ ಜಯ ೪೫

ನಿರ್ಮಳಾತ್ಮಕ ನಿತ್ಯ ರಾಮ ನಿಮ್ಮ
ಪೂರ್ವವನೆತ್ತಿದಳೆನ್ನ ಬೇಡ
ಕೂರ್ಮಪಕಾರದಿ ಸುರರಿಗೆ ಅಮೃತವ
ವರ್ಮದಿಂ ತಂದ ಮುಖ ತಾರೆಂದಳು ಜಯ ಜಯ ೪೬

ಸರ್ವದೇವೋತ್ತಮ ರಾಮ ನಿಮ್ಮ
ಪೂರ್ವವನೆತ್ತಿದಳೆನ್ನ ಬೇಡ
ಉರ್ವಿಯ ಕದ್ದ [ದೈತ್ಯ]ನಸು ಗೆಲಿದಂಥ
ದೇವ ನಿಮ್ಮಯ ಮುಖ ತಾರೆಂದಳು ಜಯ ಜಯ ೪೭

ಹಗಲು ಇರುಳು ನಿಮ್ಮ ಧ್ಯಾನದೊಳು
ಮಗುವು ಸ್ಮರಿಸೆ ನೀವು ಮರುಳಾಗಿ
ಜಗವರಿಯಲು ಕಂಬದಿ ಬಂದ ಮಾನಸ
ಮೃಗದ ಮುಖವನೊಮ್ಮೆ ತಾರೆಂದಳು ಜಯ ಜಯ ೪೮

ಮಂಗಳಾತ್ಮಕ ನಿತ್ಯ ರಾಮ ನಿಮ್ಮ ದಿ–
ವ್ಯಂಗಳ ಮರೆಸಿ ಕುಬುಜನಾಗಿ
ಪಂಗನಾಮವ ಸಿರಿನೊಸಲಿಗೆ ಧರಿಸಿದ
ಬಂಗಾರದ ಮುಖ ತಾರೆಂದಳು ಜಯ ಜಯ ೪೯

ತಂದೆಯ ಮಾತನು ಕೇಳುತಲಿ
ಕೊಂದೆ ತಾಯನು ಭಾರ್ಗವನಾಗಿ
ನಿಂದು ಕೊಡಲಿಯನು ಪಿಡಿದು ಚರಿಸುವ
ಬಂಗಾರದ ಮುಖ ತಾರೆಂದಳು ಜಯ ಜಯ ೫೦

ನಗೆನುಡಿ ಮಾತನಾಡಲು ಇಷ್ಟು
ದುಗುಡವ್ಯಾತಕೆ ದೇವೋತ್ತಮನೆ
ಜಗವನೆಲ್ಲವ ನಿಮ್ಮ ಹೃದಯದೊಳಿಂಬಿಟ್ಟ
ಸುಗುಣ ಶ್ರೀರಾಮ ಮುಖ ತಾರೆಂದಳು ಜಯ ಜಯ ೫೧

ನೀಲವರ್ಣನೆ ನಿತ್ಯಕಲ್ಯಾಣನೆ
ಬಾಲಭಾಸ್ಕರ ಅನಂತತೇಜ
ತೋಳಿಗೆ ಸಾಸಿರ ಗೋಪಿಯರಾಳಿದ
ಲೋಲಕೃಷ್ಣನೆ ಮುಖ ತಾರೆಂದಳು ಜಯ ಜಯ ೫೨

ಸುಂದರ ರೂಪಿನಿಂದಲಿ ಬಂದು
ಕಂದರ್ಪನ ಕೇಳಿಗೊಳಗಾಗಿ
ಇಂದುಮುಖಿಯರ ವ್ರತಗಳನಳಿದ ಆ-
ನಂದ ಮುಖನೊಮ್ಮೆ ತಾರೆಂದಳು ಜಯ ಜಯ ೫೩

ಕಾಯಜಕೋಟಿ ಲಾವಣ್ಯರೂಪ
ಹಯವಾಹನ ಮೂರ್ಲೋಕದೊಡೆಯ
ರಾಯ ರಾಘವ ರಾಜೀವಲೋಚನ ಎನ್ನ
ಜೀಯ ಪಾಲಿಸಿ ಮುಖ ತಾರೆಂದಳು ಜಯ ಜಯ ೫೪

ಸುಗುಣೆ ಆಡಿದ ನುಡಿಗೇಳಿ ಮೆಚ್ಚಿ
ಮಿಗೆ ಹರುಷದಿ ಶ್ರೀ ರಾಘವನು
ಮುಗುಳುನಗೆಯನು ನಗುತಲಿ
ನೆಗಹಿದ ಮುಖಪದ್ಮವ ಸತಿ ಜಾನಕಿಗೆ ಜಯ ಜಯ ೫೫

ನೀಡಿದ ನಿಡಿ ತೋಳ್ಗಳ ರಾಮ
ತೀಡಿದಳರಿಷಿಣವನು ಸೀತೆ
ಕಾಡದೆ ಚರಣವ ಕೊಡಬೇಕೆನುತಲಿ
ಬೇಡಿಕೊಂಡಳು ತನ್ನ ಪತಿಯೊಡನೆ ಜಯ ಜಯ ೫೬

ಕಲ್ಲೊಳು ಕಾಂತೆ[ಯ] ಮಾಡಿದ ಚರಣ
ಬಲ್ಲಿದ ಬಲಿಯ ಒತ್ತಿದ ಪಾದ
ಮಲ್ಲರ ಮರ್ದಿಸಿ ಮದನಾರಿಯ ಬಲ
ಅಲ್ಲಿ ಮುರಿದ ಪಾದ ತಾರೆಂದಳು ಜಯ ಜಯ ೫೭

ತಾವರೆ ಎಸಳ ಪೋಲುವ ಚರಣ
ಹಾವಿನ ಹೆಡೆಯಲಾಡುವ ಚರಣ
ಆವಾಗಲು ರಾಮನು ಭಕ್ತರ
ಜೀವ ಚರಣವ ತಾರೆಂದಳು ಜಯ ಜಯ ೫೮

ಶಂಖಚಕ್ರದ ರೇಖಿನ ಚರಣ
ಕುಂಕುಮರಾಗರಂಜಿತ ಚರಣ
ಶಂಕೆಯಿಲ್ಲದೆ ಶಕಟನ ಮರ್ದಿಸಿದ ಮೀ–
ನಾಂಕನ ಚರಣವ ತಾರೆಂದಳು ಜಯ ಜಯ ೫೯

ಪಿಡಿದರಿಷಿಣವ ಜಾನಕಿದೇವಿ ತ–
ನ್ನೊಡೆಯನ ಮುಖ ಚರಣಕೆ ತೊಡೆದು
ತಡವು ಮಾಡದೆ ಸ್ವಾಮಿ ಕೋದಂಡಪಾಣಿಯ ನೀವು
ಕೊಡಬೇಕೆಂದಳು ಪತಿಯೊಡನೆ ಜಯ ಜಯ ೬೦

ಮುದ್ದು ಮುಖದ ಶ್ರೀ ಜಾನಕಿಗೆ
ತಿದ್ದಿ ತಿಲಕವ ನೊಸಲಿಗಿಟ್ಟು
ಹೊದ್ದಿದ ಹೊದಿಕೆಯ ನಿವಾರಿಸಿ ಕುಶಲದಿ
ಭದ್ರ ಗಜಗಮನೆಯರೆಲ್ಲ ಜಯ ಜಯ ೬೧

ರಾಮನ ಚರಣಕೆ ಸಿರಿದೇವಿ
ಹೂವಿನಕ್ಷತೆಯಿಟ್ಟೆರಗಿದಳು
ಪ್ರೇಮದಿ ಎನ್ನನು ಅಗಲದೆನ್ನುರದೊಳು
ಸ್ವಾಮಿಯಾಗಿರು ಎಂದು ಹರಸಿದಳು ಜಯ ಜಯ ೬೨

ಹರಿವಾಣದೊಳಿರ್ದರಿಷಿಣವ
ಬೆರಳಲಿ ತೆಗೆದು ಪಾರ್ವತಿದೇವಿ
ಹರುಷದಿ ರಾಮನ ಕೈಯಲಿ ಕೊಟ್ಟಳು
ಸಿರಿದೇವಿಗೆ ನೀನು ತೊಡೆಯೆನುತ ಜಯ ಜಯ ೬೩

ಬಲ್ಲೆವೊ ದೇವೋತ್ತಮ ನಿನ್ನ
ಫುಲ್ಲಲೋಚನೆ ಜಾನಕಿಯೊಡನೆ
ಸಲ್ಲದು ಸಲಿಗೆಯು ರಾಘವನೀ
ನಿಲ್ಲಬೇಕೆನುತ ಪಾರ್ವತಿ ನುಡಿದೋರೆ ಜಯ ಜಯ ೬೪

ಎದ್ದು ನಿಂತನು ಅಗಜೆಯ ನುಡಿಗೆ
ಹೊದ್ದಿದ ಪೀತಾಂಬರವ ರಾಮ
ಮಧ್ಯದೊಳಳವಡಿಸುತ ಪಿಡಿದನು
ಶುದ್ಧ ಪತಿವ್ರತೆ ಜಾನಕಿಯ ಜಯ ಜಯ ೬೫

ಸರುವ ವೇದದ ತತ್ತ್ವದ ಸಾರೆ
ಧರೆಸುತೆ ಜನಕರಾಯನ ತನುಜೆ
ಅರಸಿ ನಿನ್ನಯ ಮುಖಕಮಲವ ತಾರೆಂದು
ಅರಿಷಿಣಗಳ ತಿಗುರಿ ಸತಿಗೆ ಜಯ ಜಯ ೬೬

ಲೋಕದೊಳಗೆಣೆಗಾಣೆ ನಿನಗೆಂದು
ಏಕಪತಿವ್ರತೆ ಕೈಗೊಂಡೆ
ನೀ ಕರುಣಿಸಿ ಮುಖಕಮಲವ ತಾರೆಂದು
ಕಾಕುತ್ಸ್ಥಧಿರಾಮ ನುಡಿಸಿದ ಸತಿಯ ಜಯ ಜಯ ೬೭

ಪರುಷದ ಕಣಿಯೆ ಪುತ್ಥಳಿಗೊಂಬೆ
ಸರಸಸದ್ಗುಣಿಕನ್ನೆ ಸಮಗಾತ್ರೆ
ಅರಸಿ ನಿನ್ನಯ ಮುಖಕಮಲವ
ತಾರೆಂದು ಅರಿಷಿಣಗಳ ತಿಗುರಿದ ಸತಿಗೆ ಜಯ ಜಯ ೬೮

ಸತಿಯಳ ಮುಖ ಮೈಗರಿಷಿಣವ
ಅತಿ ಹರುಷದಿ ರಾಮನು ತಿಗುರಿ
ಕ್ಷಿತಿಯೊಳು ರಾಮನ ಸತಿಯಾಗೀ ಜಗದೊಳು
ಶ್ರುತಿವಂತಳಾಗೆಂದು ಹರಸಿದನು ಜಯ ಜಯ ೬೯

ಕಪಟನಾಟಕ ಕಾರುಣ್ಯಸಿಂಧು
ಸುಪ[ರ್ಣ] ಗಮನ ಶೇಷಾದಿಬಂಧು ಎ–
ನ್ನಪರಾಧವ ಕ್ಷಮಿಸೆಂದು ಎರಗಿದೊ [ದಳು?]
ಚಪಲಾಕ್ಷಿ ರಘುಪತಿಗೆ ಜಯ ಜಯ ೭೦

ಜಾರಿದ ಬಾಸಿಂಗವ ಪಿಡಿದು
ಸೇರಿಸಿ ಮಸ್ತಕಕಳವಡಿಸಿ
ನಾರಿಯರು ಕುಳ್ಳಿರಿಸೋರು ಬೇಗದಿ
ವಾರಿಜಾಂಬಕ ಶ್ರೀ ರಾಘವನ ಜಯ ಜಯ ೭೧

ಒಂದು ಕೈಯಲ್ಲಿ ಮುತ್ತನೆ ಪಿಡಿದು ಮ–
ತ್ತೊಂದು ಕೈಯಲ್ಲಿ ರತ್ನವ ಪಿಡಿದು
ಗಂಧಸುಗಂಧಿ ಜಾನಕಿ ದೇವಿ ಹರುಷದಿ
ಚಂದದಿ ನಿವಾಳಿಸಿದೊ [ದಳು?]ಪತಿಗೆ ಜಯ ಜಯ ೭೨

ಸರಿಸಕಲಾಗಮಸನ್ನುತನು ನ–
ವರತ್ನವ ಕೈಯಲಿ ಪಿಡಿದು
ಯುವತಿ ಜಾನಕಿಗೆ ನಿವಾಳಿಯ ತೆಗೆದನು
ರವಿಕುಲೋದ್ಭವ ಶ್ರೀ ರಾಘವನು ಜಯ ಜಯ ೭೩

ಒಳ್ಳೆಯ ಕುಂಕುಮದೋಕುಳಿಯ
ಬೆಳ್ಳಿಯ ಬಟ್ಟಲೊಳಗೆ ತುಂಬಿ
ವೀಳ್ಯದ ಎಲೆಯ ತೆಗೆದು ಜಾನಕಿದೇವಿ
ಚೆಳ್ಳುಗುರ್ಗೊನೆಯಿಂದ ಚಿಮ್ಮಿದಳು ಜಯ ಜಯ ೭೪

ಮಂಗಳಗಾತ್ರೆ ಶ್ರೀ ಜಾನಕಿಯು ಆ–
ಯಂಗದೊಳೋಕುಳಿಯನು ತುಂಬಿ
ರಂಗರಾಯನ ಮಂಡೆ ಮೇಲೆ ತಾ ಚೆಲ್ಲಿದಳು
ಶೃಂಗಾರನಾಭ ನಾಭಯೆನುತ ಜಯ ಜಯ ೭೫

ಎಸೆವ ಕುಂಕುಮದೋಕುಳಿಯನ್ನು
ಮಿಸುನಿಯ ಬಟ್ಟಲೊಳಗೆ ತುಂಬಿ
ದಶರಥರಾಮನ ಕೈಯಲಿ ಕೊಟ್ಟರು
ಕುಸುಮಗಂಧಿಗೆ ನೀನು ತೊಡೆಯೆನುತ ಜಯ ಜಯ ೭೬

ಚೆನ್ನಿಗರಾಮ ಸಂತೋಷದಿಂದ
ತನ್ನ ವಲ್ಲಭೆ ಕೊಪ್ಪಿರಿಕೆಯನು
ಬಿನ್ನಾಣದಿ ಸಡಿಲಿಸಿ ಓಕುಳಿಯನ್ನು
ಬೆನ್ನಿಗೆ ಲೇಪಿಸಿದನೆ ಸತಿಯ ಜಯ ಜಯ ೭೭

ಸಂಪಿಗೆ ಸುರಗಿ ಶಾವಂತಿಗೆಯ
ಇಂಪು ಪುಷ್ಪಂಗಳ ಮುಡಿದು
ದಂಪತಿಗಳು ಹಸೆಮೇಲೆ ಕುಳ್ಳಿರ್ದರು
ಸಂಪತ್ತಿನ ಕಹಳೆ ಹಿಡಿದವಾಗ ಜಯ ಜಯ ೭೮

ಹೊಡೆವ ತಂಬಟೆ ಭೇರಿ ನಿಸ್ಸಾಳೆ
ಸಿಡಿಲು ಕದಡುವಂತಾರ್ಭಟದಿ
ಪಿಡಿದು ತಂದರು ಋಷಿಸತಿಯರು
ಪಾಡುತ ವೈಢೂರ್ಯದ ಆರತಿಗಳನು ಜಯ ಜಯ ೭೯

ಲಕ್ಷ್ಮೀಕಾಂತ ಶ್ರೀ ರಾಘವಗೆ
ಮುಕ್ತಿದಾಯಕಿ ಶ್ರೀ ಜಾನಕಿಗೆ
ಭಕ್ತರ ಸಲಹೆಂದು ಭಾಳ ಸಂತೋಷದಿ
ಅಕ್ಷತೆಯಿಟ್ಟರೆ ಐದೆಯರು ಜಯ ಜಯ ೮೦

ಅಂಬುಜನಾಭ ಶ್ರೀ ರಾಘವಗೆ
ಕುಂಭಿಣಿಸುತೆ ಶ್ರೀ ಜಾನಕಿಗೆ
ನಂಬಿದ ಭಕ್ತರ ಸಲಹೆಂದು ಹರಸುತ
ತಾಂಬೂಲ ಇತ್ತರೆ ಐದೆಯರು ಜಯ ಜಯ ೮೧

ನಳಿನನಾಭನು ಶ್ರೀ ರಾಘವಗೆ
ಇಳೆಯ ಮಗಳು ಜಾನಕಿದೇವಿ [ಗೆ]
ಥಳಥಳಿಸುತ ಆರತಿಗಳನೆ[ತ್ತಿದ]ರು
ಹೊಳೆಯುತ ಜನಕರಾಯನ ಸತಿಯರು ೮೨

ಸುರಪತ್ನಿಯರೆಲ್ಲ ಪಾಡುತಲಿ
ಪರಿಪರಿ ಆರತಿಗಳ ಪಿಡಿದು
ಹರಸಿ ಕೃಷ್ಣಗೆ ಹರಸುತ ಯೆ[ತ್ತಿದ]ರು
ತರಳಾಕ್ಷಿಯರೆಲ್ಲ ಪಾಡುತಲಿ ಜಯ ಜಯ ೮೩

ಬಗೆಬಗೆ ರತ್ನದಾರತಿಗಳನು
ಜಗದೋದ್ಧಾರಗೆ ಎತ್ತುತಲಿ
ಉಘೇ ಉಘೇಯೆನುತಲಿ ಸುಮನಸರೆಲ್ಲರು
ಮಿಗೆ ಪೂಮಳೆಗಳ ಕರೆದರಾಗ ಜಯ ಜಯ ೮೪

ಸಂತತದಿಂದ ಭಕ್ತರ ಮನದ
ಚಿಂತೆ ಪರಿಹರಿಸುವ ಸ್ವಾಮಿ
ಯಂತ್ರವಾಹಕ ರಾಮ ಸಲಹೆಂದು ಸುರಜನ
ಮಂತ್ರಾಕ್ಷತೆಗಳ ಸುರಿದರು ಜಯ ಜಯ ೮೫

ಕಮಲಜಸುತ ಸಂತೋಷದಿಂದ
ನಮೋನಮೊ ನಾರಾಯಣಯೆನುತ
ವಿಮಲಗೀತದಿ ವೀಣೆಯ ಶೃತಿಗೈಯುತ
ಅಮರನಗರಿಗೈದಿದನಾಗ ಜಯ ಜಯ ೮೬

ತುಂಗವಿಕ್ರಮ ರಾಮಜಾನಕಿಯರ
ಮಂಗಳುತ್ಸವ[ದು] ರುಟಣೆಯ ಪದವ
ಸಂಗೀತದಿ ಹೇಳಿ ಕೇಳಿದ ಜನರಿಗೆ ಹೆಳವನಕಟ್ಟೆ
ರಂಗಯ್ಯನೊಲಿದಿಹನು ಜಯ ಜಯ ೮೭

## ಚಂದ್ರಹಾಸನ ಕಥೆ

ಶ್ರೀರಮಣಿಯ ಮನೋಹರ ಸುಜನ ಮಂದಾರ
ತ್ರೈಭುವನೋದ್ಧಾರ
ಕಾರುಣ್ಯನಿಧಿ ಹೆಳವನಕಟ್ಟೆರಂಗಯ್ಯ ನಾರಾಯಣ ಶರಣೆಂಬೆ ೧

ಕಡಲಶಯನ ಕಲ್ಪತರುವೆ ಇಷ್ಟಾರ್ಥವ ಕೊಡುವ
ಭಕ್ತರ ಭಾಗ್ಯನಿಧಿಯೆ
ನಡೆಸುವೆ ನಿಮ್ಮ ತಂತ್ರದಲಿ ಈ ಕೃತಿಯನು
ನುಡಿಸಯ್ಯ ಎನ್ನ ಜಿಹ್ವೆಯಲಿ ೨

ಭುಜಗನ ಹಿಡಿದು ಗರ್ಭವ ಸುತ್ತಿದಾತನೆ
ಅಜಹರಿಸುರ ವಂದಿತನೆ
ಭಜನೆಗಿಷ್ಟಾರ್ಥವ ಕೊಡುವ ವಿಘ್ನೇಶ್ವರ
ನಿಜವಾಗೊ ಮತಿಗೆ ಮಂಗಳವ ೩

ಶೃಂಗಪುರದ ನೆಲವಾಸೆ ಸಜ್ಜನಪೋಷೆ
ಸಂಗೀತಲೋಲೆ ಸುಶೀಲೆ
ಮಂಗಳಗಾತ್ರೆ ಶಾರದೆ ಎನ್ನ ಜಿಹ್ವೆಯಲಿ
ಹಿಂಗದೆ ನೆಲಸೆನ್ನ ತಾಯೆ ೪

ನಿತ್ಯಾನಂದ ರಜತಾಚಲವಾಸನೆ ಭಕ್ತವತ್ಸಲ ಭಾಳನೇತ್ರ
ಹೆತ್ತೋರ ಮನೆದೈವ ಶ್ರೀ ಮೈಲಾರಗೆ ಹಸ್ತವ
ಮುಗಿದು ವಂದಿಸುವೆ ೫

ಪೃಥಿವಿ ಆಕಾಶ ಸೂರ್ಯ ಚಂದ್ರರಿಗೆರಗುವೆ
ಪತಿಯ ಚರಣವನ್ನು ನೆನೆವೆ
ಸ್ತುತಿಸುವೆ ಗುರುಹಿರಿಯರಿಗೇಕಚಿತ್ತದಿ ಮತಿಗೆ
ಮಂಗಳವಾಗಲೆಂದು ೬

ಸುರಪುರವಾಸ ಲಕ್ಷ್ಮಿಯಕಾಂತ ಭಕ್ತರ್ಗೆ
ಒರೆದಂಥ ಜೈಮಿನಿಯೊಳಗೆ
ಪರಮಭಕ್ತ ಚಂದ್ರಹಾಸನ ಕಥೆಯನು ಚರಿತೆಯ
ಮಾಡಿ ವರ್ಣಿಸುವೆ ೭

ಇಂದ್ರಜ ತುರಗವ ಕಾಣದೆ ಮನದಲ್ಲಿ
ಸಂದೇಹ ಮಾಡುತ್ತಿರಲು
ಚಂದ್ರಹಾಸನ ಕಥಾಮೃತಸಾರವನು ನಾರಂದ
ಪೇಳಿದ ಫಲುಗುಣಗೆ ೮

ಬಂದರು ಕೃಷ್ಣಾರ್ಜುನರು ತುರಂಗವ
ಮುಂದೊತ್ತಿ ರಥವ ಬೆಂಬತ್ತಿ
ಚಂದದಿ ದಿಗ್ದೇಶ ತಿರುಗಿದ ಹಯವ ತಾ
ನಿಂದಿರಿಸಿದ ಚಂದ್ರಹಾಸ ೯

ಕಟ್ಟಿದನೆರಡು ತುರಂಗವ ಲಿಖಿತವ
ಬಿಚ್ಚೋದಿಕೊಂಡು ನೋಡಿದನು
ವೈಷ್ಣವಕುಲ ಶಿರೋರನ್ನ ಪರಾಕ್ರಮ ದಿಟ್ಟರಿಗಿದು ನೀತವೆಂದು ೧೦

ಪಿಡಿಕೊಂಡು ಬಂದರು ತುರಗವ ಚರರು ತ
ನ್ನೊಡೆಯಗೆ ಪೇಳಿದರಾಗ
ಪಿಡಿದು ತುರಂಗವ ಕಟ್ಟಿದರಾರೆಂದು
ಕಡುಚಿಂತೆಯಲಿ ಪಾರ್ಥನಿದ್ದ ೧೧

ಮನದಲಿ ಆಲೋಚನೆಯ ಮಾಡುತಲಿರೆ
ದಿನಕರ ಪ್ರತಿಬಿಂಬದಂತೆ
ವನಜನಾಭ ಕೃಷ್ಣ ಶರಣೆನ್ನುತ ಸುರಮುನಿ ಇಳಿದಂಬರದಿಂದ ೧೨

ಇಟ್ಟಿಹ ಕರ್ಣಕುಂಡಲವ ಕೃಷ್ಣಾಜಿನ
ಉಟ್ಟಿಹ ಕರದಿ ವೇಣುವನು
ಮುಟ್ಟಿ ಬಾರಿಸುತ ಶ್ರೀಹರಿನಾಮ ಸ್ಮರಿಸುತ
ಶ್ರೇಷ್ಠ ಬಂದನು ಇವರೆಡೆಗೆ ೧೩

ಏನಿದು ಬಂದ ಕಾರಣ ಎನುತಲಿ ಇಂದ್ರಸೂನು
ಕೃಷ್ಣರು ಇದಿರೆದ್ದು
ಗಾನವಿನೋದಿಯಾಗಮನವಿದೇನೆಂದು
ಆನಂದದಿಂದ ಕೇಳಿದರು ೧೪

ಕುಳ್ಳಿರಿಸಿದರು ಗದ್ದುಗೆಯಿಟ್ಟು ಮುನಿಪಗೆ
ಎಲ್ಲ ವೃತ್ತಾಂತವನರುಹಿ
ಬಲ್ಲಿದ ತುರಗವ ಕಟ್ಟಿದ ಧೀರ ಅಲ್ಲಾರು ಎನುತ ಕೇಳಿದರು ೧೫

ಗಮನವಾಗಿದ್ದ ತುರಂಗವ ಕಟ್ಟಿದ
ಪ್ರಮುಖರಿಲ್ಲ್ಯಾರು ಪೇಳೆನುಲು
ನಿಮಗಿದ ವಿವರಿಸಿ ಪೇಳುವೆನೆಂದರೆ
ಸಮಯವಲ್ಲವು ಪೇಳೆನಲು ೧೬

ವ್ಯಾಸಾಂಬರೀಷ ವಿಭೀಷಣಕ್ರೂರ ಪರಾಶರ ಧ್ರುವ ಪ್ರಹಲ್ಲಾದ
ಈಸುಮಂದಿ ಭಕ್ತರಿಗಧಿಕನು ಚಂದ್ರಹಾಸನೆಂಬಾ ಹರಿಭಕ್ತ ೧೭

ಹೇಳಬೇಕೆನುತ ಮುನೀಶನೆಂದೆಂಬ ಕೇರಾಳದೇಶದ ರಾಜ್ಯವನು
ಆಳುವ ಪ್ರಭು ಧಾರ್ಮಿಕನೆಂಬಾತನ ಬಾಳನೆಂಬರು
ಪ್ರಧಾನಿಯನು ೧೮

ನೀತೀಲಿ ರಾಜ್ಯವನಾಳುತಿರಲು ಕಂದ
ಭೂತಮೂಲದಲಿ ಪುಟ್ಟಿದನು
ಜಾತಕರ್ಮನಾಮಕರಣ ಮಾಡದೆ ಅವನ
ತಾತ ಕಾಲವಾಗಿ ಪೋದ ೧೯

ನಾಯಕರಿಲ್ಲದ ಕಾಯವಿದೇಕೆಂದು
ಸಾಯಲಾದಳು ರಾಜಪತ್ನಿ
ಮಾಯವಾಯಿತು ಸಿರಿ ಮತ್ತೆ ರಾಜ್ಯವ
ಪರರಾಯರು ಬಂದು ಕಟ್ಟಿದರು ೨೦

ಪೋಷಣೆ ಮಾಡುವರಿಲ್ಲದಿರಲು ಪರದೇಶಿಯಂದದಿ
ಬಾಲನಿರಲು
ದಾಸಿಯೊಬ್ಬಳು ಕಂಡು ಮನದಲ್ಲಿ ಮರುಗುತ
ಆ ಶಿಶುವೆತ್ತಿ ನಡೆದಳು ೨೧

ಚಿಂತಿಸಿ ಹಲವು ಯೋಚನೆಯ ಮಾಡುತಲಾಗ
ಕುಂತಳಪುರಕಾಗಿ ಬಂದು
ಸಂತತ ನೆರೆಯಲಿ ಶಿಶುವನಿಟ್ಟುಕೊಂಡು ನಿಂತಳು
ಆ ಗ್ರಾಮದಲ್ಲಿ ೨೨

ತಿರಿದು ಹಾಕುವಳು ಪಾಲ್ಬೆಣ್ಣೆಯ ಶಿಶುವಿಗೆ
ಎರೆದು ಪೋಷಣೆಯ ಮಾಡುವಳು
ತರಳಗೆ ಬೇಕಾದುದಿಲ್ಲದಿರಲು ದಾಸಿ
ಮರುಗುತಿರ್ದಳು ಮನದೊಳಗೆ ೨೩

ದೇಶಾಧಿಪತಿಯ ಗರ್ಭದಿ ಬಂದು ನಿನಗೀಗ
ಹಾಸುವ ವಸ್ತ್ರಗಳಿಲ್ಲ
ಬೀಸಿ ತೂಗುವರೆ ತೊಟ್ಟಿಲು ಇಲ್ಲ ಎನುತಲಿ
ಬೇಸತ್ತು ಅಳಲುವಳೊಮ್ಮೆ ೨೪

ಪಾಲನೆ ಮಾಡುವಳು ಪರಿಪರಿಯಲಿ ಬಾಲಲೀಲೆಯ
ನೋಡಿ ಹಿಗ್ಗುವಳು
ಶ್ರೀ ಲೋಲನೆ ನೀ ಗತಿಯೆಂದು ತರಳನ
ಆಲಂಬದಲ್ಲಿರುತಿಹಳು ೨೫

ತೊಂಗಲಗುರುಳು ತೋರುತಲಿಹ ಮೊಳೆವಲ್ಲು
ಕಂಗಳ ಕುಡಿನೋಟವೆಸೆಯೆ
ಮಂಗಳಗಾತ್ರದ ಮುದ್ದುಬಾಲಕನೆಲ್ಲರಂಗಳ–
ದೊಳಗಾಡುತಿಹನು ೨೬

ಇರುತಿರೆ ದಾಸಿ ಅಂತರಿಸಿ ಪೋದಳು ಬಾಲ
ಪರಮುಟ್ಟನಾದುದ ಕಂಡು

ನೆರೆಯ ನಾರಿಯರೆಲ್ಲ ತಮ್ಮ ಮಕ್ಕಳ ಕೂಡೆ ಎರೆದು
ಮಡಿಯ ಪೊದಿಸುವರು ೨೭

ಮಾಗಾಯಿ ಮುರವಿಟ್ಟು ಮನ್ನಿಸಿ ಕೆನೆಮೊಸ-
ರೋಗರವನ್ನು ಉಣಿಸುವರು
ತೂಗುವರು ತೊಟ್ಟಿಲೊಳಗಿಟ್ಟು ತರಳನ
ರಾಗಗಾನದಲಿ ಪಾಡುವರು ೨೮

ಓರಗೆ ಮಕ್ಕಳು ಒಡಗೊಂಡು ಹೋಗಿ
ಎಣ್ಣೂರಿಗೆಯನು ಕೊಡಿಸುವರು
ಕೇರಿ ಕೇರಿಗಳೊಳು ಕೊಡುವರೆಲ್ಲರ ಕಾರುಣ್ಯದ ಕಂದನಾಗಿ ೨೯

ಸೂಳೆವೆಣ್ಣುಗಳೆಲ್ಲ ಸೆಳೆದೆತ್ತಿಕೊಂಡು
ತಮ್ಮಾಲಯದೊಳು ಕರೆದೊಯ್ದು
ಕಾಲತೊಳೆದು ಕಸ್ತೂರಿಯನಿಟ್ಟು ಮಲ್ಲಿಗೆ
ಮಾಲೆಯನವಗೆ ಹಾಕುವರು ೩೦

ಕದಳಿ ಖರ್ಜೂರ ಕಿತ್ತಲೆ ಜಂಬುನೇರಿಲ ಮಧುರ
ಮಾವಿನ ಫಲಗಳನು
ಚದುರೆಯರೆಲ್ಲ ಕೊಟ್ಟು ಮನ್ನಿಸುವರು
ಮದನನಯ್ಯನ ಕಿಂಕರಗೆ ೩೧

ಬಟ್ಟೆವಿಡಿದು ಬಾಲ ಬರುತಿರೆ ಕಂಡನು ಪುಟ್ಟ
ಸಾಲಿಗ್ರಾಮ ಶಿಲೆಯ
ಗಟ್ಟುಳ್ಳ ಗೋಲಿಯು ತನಗೆ ದೊರಕಿತೆಂದು
ಅಷ್ಟು ಜನರಿಗೆ ತೋರಿಸಿದ ೩೨

ಭಯದಿಂದಲಿದ್ದ ಬಾಲಗೆ ದೊರಕಿತು
ಪುಣ್ಯೋದಯದಿ ಸಾಲಿಗ್ರಾಮ ಶಿಲೆಯು
ಕೈಯ ದುಡುಕಿಲಿ ತೆಕ್ಕೊಂಡನು ಹರುಷದಿ
ಲಕ್ಷ್ಮಿನಾರಾಯಣ ಮೂರುತಿಯ ೩೩

ಆಡಿಗೆಲ್ಲುವ ನಾಲ್ಕುಯಿಮ್ಮಡಿ ಗಟ್ಟುಗವ
ಕೂಡಿದ ಗೆಳೆಯರ ಕೂಡೆ
ನೋಡಿ ಬಚ್ಚಿಡುವರೆ ಮನೆಯಿಲ್ಲದಿರೆ ಬಾಲ
ದೌಡೆಯೊಳಿಟ್ಟು ಕೊಂಡಿಹನು ೩೪

ಹಿಂಡುಗೆಳೆಯರ ಕೂಡಿಕೊಂಡಾಡುವ ಲಗ್ಗೆ ಚೆಂಡು
ಬುಗುರಿ ಚನ್ನಿಗಳನು
ಗಂಡುಗಲಿಯು ತಾನಾಗಿ ಅವರೆಲ್ಲರ
ಮಂಡೆಗಳನು ತಗ್ಗಿಸುವನು ೩೫

ಬೆಚ್ಚುವನಪಹರಿಸುವರೆನುತ ಬಹು ಎಚ್ಚೆತ್ತು ಪಿಡಿದಾಡುವನು
ಬಚ್ಚಿಡುವರೆ ಮನೆಯಿಲ್ಲದಿರಲು ಬಾಲ ಅರ್ಚಿಸಿ
ಬಾಯೊಳಗಿಡುವ ೩೬

ಒಂದು ದಿವಸ ಕುಂತಳೇಂದ್ರನ ಮಂತ್ರಿಯು
ಮಂದಿರದಲಿ ವಿಪ್ರರಿಗೆ ಆ–
ನಂದದಿಂದಲಿ ಭೋಜನ ಮಾಡಿಸುವೆನೆಂದ
ಬಂದರು ಬುಧಜನರೆಲ್ಲ ೩೭

ಮೃಷ್ಟಾನ್ನವನ್ನು ಭೋಜನ ಮಾಡಿಸಿ ಸಂತುಷ್ಟಿ
ಬಡಿಸಿದ ಬ್ರಾಹ್ಮರನು
ಪಟ್ಟಸಾಲೆಯೊಳೆಲ್ಲ ಹರಡಿ ಗದ್ದುಗೆಯಿಟ್ಟು
ಶ್ರೇಷ್ಠರೆಲ್ಲರ ಕುಳ್ಳಿರಿಸಿ ೩೮

ದಕ್ಷಿಣೆ ತಾಂಬೂಲವನು ತೆಕ್ಕೊಂಡು
ಮಂತ್ರಾಕ್ಷತೆಯನು ಮಂತ್ರಿಗಿತ್ತು
ಮಕ್ಕಳೊಡನೆ ಕೂಡಿ ಆಡುವ ತರಳನ
ಲಕ್ಷಣವನ್ನೆ ನೋಡಿದರು ೩೯

ಇವನಾರ ಮಗನೆಂದು ನೆರೆದಿರ್ದ ಸಭೆಯಲ್ಲಿ
ದಿವಿಜನರೆಲ್ಲ ಕೇಳಿದರು

ಮೊರೆದು ಸಂತೈಸುವರಾರಿಲ್ಲೂರೊಳಗೊಬ್ಬ
ಪರದೇಶಿಯೆಂದು ಹೇಳಿದರು ೪೦

ಅತಿಲಕ್ಷಣಸಂಪನ್ನ ಸುಶೀಲನು ಮತಿವಂತ ಮಹಗುಣ ಧೀರ
ಜತನ ಮಾಡಿರಿ ರಾಜ್ಯಕಿವನೆ ಅಧಿಪತಿಯೆಂದು
ಹೇಳಿದರವರು ೪೧

ಆ ಮಹಾಸಭೆಯೊಳುತ್ತಮವೆಂದು ಮಂತ್ರಿಯು
ನೇಮಿಸಿದನು ತನ್ನ ಮನದಿ
ಬ್ರಾಹ್ಮರಾಡಿದ ಮಾತು ಹುಸಿಹೋಗದೆನುತಲಿ
ಗೋಮುಖವ್ಯಾಘ್ರದಂತಿರ್ದ ೪೨

ನಾನಲ್ಲದೀ ರಾಜ್ಯಕಧಿಪತಿಯಿಲ್ಲೆಂದು ಆನಂದಭರಿತನಾಗಿರ್ದೆ
ತಾನೊಂದು ಕಾರ್ಯವಾಗಿದೆಯೆಂದು ಮಂತ್ರಿಯು
ಧ್ಯಾನಿಸಿದನು ತನ್ನ ಮನದಿ ೪೩

ನೆರೆದಿರ್ದ ಸಭೆಯೆಲ್ಲ ಹರಿದುಹೋದುದ ಕಂಡು
ಕರುಣವಿಲ್ಲದೆ ದುಷ್ಟಬುದ್ಧಿ
ಕರೆಸಿದ ಪಶುಘಾತಕರ ಕೈಯೊಳಗೆ ಆ ತರಳನ
ಕೊಟ್ಟನಾಕ್ಷಣದಿ ೪೪

ಯಾರು ಅರಿಯದಂತೆ ಇವನ ಒಯ್ದು
ಘೋರಾರಣ್ಯದಲಿ ಶಿರವರಿದು
ತೋರಿಸಿ ತನಗೆ ಗುರುತ ತಂದು ಮುಂದಕ್ಕೆ
ಕಾರಣ ಉಂಟೆಂದು ನುಡಿದ ೪೫

ಒಡನೆ ಆಡುವ ಮಕ್ಕಳಗಲಿಸಿ ತರಳನ
ಹಿಡಿದು ಹೆಗಲಮೇಲೆ ಇಟ್ಟು
ಜಡಿದು ಝುಂಕಿಸಿ ಅಂತ್ಯಜರೆಳೆದೊಯ್ವಾಗ
ನಡುಗುತಿರ್ದನು ಬಾಲಕನು ೪೬

ಪಾತಕರೊಳಗಿರ್ದ ಪರಮಾತ್ಮನಂತೆಮದೂತರೆಳೆಯೆ
ಅಜಾಮಿಳನಂತೆ
ಕಾತರಿಸಿ ಕಂಗೆಟ್ಟು ಮರುಗುತಿರ್ದನು
ಭಯಭೀತನಾಗಿರ್ದ ಬಾಲಕನು ೪೭

ಕಾಳರಕ್ಕಸರು ಪ್ರಹ್ಲಾದನ ಪಿಡಿವಂತೆ
ಗೋಳುವಳಿದ ಹೆಂಗಳಂತೆ
ಗಾಳಿಗೊಡ್ಡಿದ ಸೊಡರಂತೆ ತಲ್ಲಣಿಸುತ
ಗೋಳಿಟ್ಟು ಹರಿಗೆ ದೂರಿದನು ೪೮

ಕಾಗೆಯ ಕಯ್ಯ ಕೋಗಿಲೆಯಂತೆ ನೆಗಳು
ನೀರಾಗೆ ಗಜವ ಪಿಡಿದಂತೆ
ಲಾಗಿಸಿ ಪಶುವ ವ್ಯಾಘ್ರನು ಪಿಡಿದಂದದಿ
ಕೂಗುತಿರ್ದನು ಬಾಲಕನು ೪೯

ರಾವು ತುಡುಕಿದ ಚಂದ್ರನಂತೆ ಅರಗಿಳಿಯನ್ನು
ಬಾವುಗ ಪಿಡಿದೆಳೆದಂತೆ
ತಾವರೆಯೊಳಗಣ ಉದಕದಂದದಿ ಬಾಲ
ಜೀವತಲ್ಲಣಿಸುತಲಿಹನು ೫೦

ನುಡಿದ ನುಡಿಗೆ ನಾರಾಯಣಹರಿ ಎಂಬುವನ
ಪಿಡಿದೊಯ್ದು ವೃಂದದೊಳಿಟ್ಟು
ಅಡವಿಯೊಳಗೆ ಅಂಜೆ ಅಳುವ ಬಾಲಕನ
ಕಂಡು ಕಡುಕರ ಮನಕರಗಿತು ೫೧

ಈ ತರಳನ ಪ್ರಾಣವನಳಿದರೆ ಬಲುಪಾತಕ ಬಹುದೆಂದೆನುತ
ಆತನಾಜ್ಞೆಯ ನೋಡಿಕೊಂಬೆವು ಎನುತಲಿ
ಮಾತಾಡಿದರು ತಮ್ಮೊಳ್ತಾವು ೫೨

ಚಾರುವದನ ಚಿತ್ರವನೆಡಗಾಲೊಳಗಾರು
ಬೆಟ್ಟಿರ್ದುದ ಕಂಡು ಉ–
ತ್ತಾರವನೆ ಮಾಡಿ ತೆಗೆದುಕೊಂಡ್ಹೋಗಿ ತೋರಿದರಾ ಮಂತ್ರೀಶ್ವರಗೆ ೫೩

ರಚ್ಚೆಗಿಕ್ಕದೆ ಅವನ ರೂಪನಳಿದರೆಂದು
ಮೆಚ್ಚುಡುಗೊರೆಯನು ಕೊಟ್ಟು
ಮುಚ್ಚ ಬಂದರು ಮಾರಿಯನೆಂಬುದರಿಯದೆ
ನೆಚ್ಚಿಕೊಂಡಿರ್ದ ಪ್ರಧಾನಿ ೫೪

ಹಾಲು ಸಕ್ಕರೆ ಕುಡಿದನು ಮಂತ್ರಿಯು ಇತ್ತ
ಶ್ರೀಲೋಲನ ಕಿಂಕರನು
ಆಲಿ ಪರ್ವತದ ಅರಣ್ಯದಲ್ಲಿರ್ದನು
ಕಾಲಗಾಯದ ನೋವಿನಲಿ ೫೫

ಅಳುವ ಧ್ವನಿಯ ಆಲಿಸುವ ತುಂಬಿಯು
ಅರಗಿಳಿ ನುಡಿಸುತ್ತಲಿಹವು
ಎಳೆದಳಿರನೆ ತಂದು ಹಾಸುವ ಗರಿಗಳ ಸುಳಿಗಾಳಿ
ಬೀಸುವ ಖಗನು ೫೬

ಪಸರಿಸಿ ಗರಿಯ ಮಯೂರ ಪಕ್ಷಿಗಳೆಲ್ಲ ಬಿಸಿಲಿಗೆ
ಮರೆಯ ಮಾಡುವವು
ಒಸರುವ ಕಣ್ಣೀರು ಒರಸುವ ಕಪಿಗಳ ಬಸ
ವಳಿದಿರ್ದ ಬಾಲಕಗೆ ೫೭

ಎಲ್ಲಿಯ ರಭಸವಿದೇನೆಂದು ವನದೇವಿ
ಮೆಲ್ಲಡಿಯಿಡುತ ತಾಬಂದು
ಗಲ್ಲವ ಪಿಡಿದು ತೊಡೆಯೊಳಿಟ್ಟು ರಂಬಿಸಿ
ಬಲ್ಲಿದನಾಗೆಂದು ಹರಸಿ ೫೮

ಎದೆಯೂರಿ ಬಾಯ್ತೆರೆವುತಲಿರೆ ತರಳಗೆ
ಮಧುಬಿಂಬ ಕರೆವುತಲಿಹುದು
ಬೆದರಬೇಡೆಂದು ಆಕಾಶವಾಣಿ ನುಡಿದಳು
ಮದನನಯ್ಯನ ಕಿಂಕರಗೆ ೫೯

ಪರಿಪರಿ ಪಕ್ಷಿ ಮೃಗಾದಿಗಳೆಲ್ಲವು
ನೆರೆದುಪಚಾರ ಮಾಡುವವು
ಧರೆಗಿಳಿದನು ಚಂದ್ರಯೆನುತಾ ಘಾಯವ
ಹುಲ್ಲೆಮರಿಗಳು ಜಿಹ್ವೆಯಿಂದೊರಸಿ ೬೦

ಯಾರಾದರೂ ತನ್ನ ನಂಬಿದವರ
ಭಾರಾಭಾರದೊಡೆಯ ಶ್ರೀಹರಿಯು
ಊರಿಗಿಂತ ಕಾಡು ಲೇಸಾಯಿತು ಎಂದು
ಮುರಾರಿಯ ನೆನೆವ ಕಿಂಕರಗೆ ೬೧

ವ್ಯಾಘ್ರ ಕೇಸರಿ ದುಷ್ಟಮೃಗದ ಬಾಧೆಯ
ಬಹು ವೆಗ್ಗಳವೆಂದು ಹೇಳಿದರು
ನಿಗ್ರಹ ಮಾಡಬೇಕೆನುತ ಪುಳಿಂದನು
ಶೀಘ್ರದಿಂದಲಿ ತೆರಳಿದನು ೬೨

ಚಿತ್ತದಿ ನೆನೆದು ಪುಳಿಂದನು ಹೊರಟನು
ಹತ್ತು ಸಾವಿರ ಬಲಗೂಡಿ
ಮತ್ತೊಂದು ಅದ್ಭುತವಾಯಿತು ವೃಂದಕ್ಕೆ
ಮುತ್ತಿಗೆಯನೆ ಹಾಕಿದರು ೬೩

ತೊಪ್ಪಲುಡುಗೆ ಉಟ್ಟು ತೆಳ್ವಸುರಿನ
ದರೊಪ್ಪಾಗಿ ಕೂರ್ಗಣೆವಿಡಿದು
ಕಪ್ಪು ಮೈಯವರೆಲ್ಲ ಕವಿದು ಮೃಗಂಗಳ
ತಪ್ಪದೆ ಬೀಳಲೆಸೆದರು ೬೪

ಹಿಡಿ ಬಿಲ್ಲು ನಡೆ ಮುಂದೆ ಮಕ್ಕಳು
ಮಂದಿಯು ಬಿಡು ನಾಯ ದಿಕ್ಕು ದಿಕ್ಕಿನಲಿ
ತಡೆ ಬಂದ ಮೃಗವನ್ನು ಪೊಡೆ ತಟ್ಟಲೆಸೆವಂತೆ
ಬಿಡದಿರು ಎದೆಯ ಧೈರ್ಯವನು ೬೫

ಗಬ್ಬಿನಾಯ್ಗಳ ಸನ್ನೆಮಾಡಿ ಬಿಟ್ಟರು
ಅಬ್ಬರದಲಿ ಹೋಗಿ ತುಡುಕಿ
ತಬ್ಬಿಬ್ಬುಗೊಳಿಸುತ ತವಕದಿ ಪಿಡಿದರು
ಹೆಬ್ಬುಲಿ ಕರಡಿ ಹಂದಿಗಳ ೬೬

ಬಿಟ್ಟ ಬಾಯ್ಗಳು ನಿಡಿದು ನಾಲಗೆಯು
ತೆಳ್ವಟ್ಟಸುವಿನ ಬಾವುಲಿಯು
ಅಟ್ಟಿ ಹಿಡಿದು ಪರಿಪರಿ ಮೃಗವನು
ತಂದೊಟ್ಟಿದರಾಳ್ದನ ಮುಂದೆ ೬೭

ಇದು ಸಿಂಹಗೆರಗಿದ ಪರಿಯ ಮಸ್ತಕದ
ಮುತ್ತುದುರಿದ ತಾವು ನೋಡಿದಕೊ
ಇದು ಸಾರಂಗ ಮರಿಯ ಹಾಕಿದ ತಾವು
ಇದು ಪಂದಿ ಕೆದರಿದ ನೆಲವು ೬೮

ಹೊಕ್ಕು ಜವ್ವನದ ಪುಳಿಂದೆಯರೆಲ್ಲರು ಅಕ್ಕರದಿಂದೊಲ್ಲಭಗೆ
ಪೊಕ್ಕು ಕಾನನದೊಳು ಚರಿಸುತ ಪುನಗಿನ
ಬೆಕ್ಕ ಹಿಡಿದರೊಲವಿನಲಿ ೬೯

ಕಂಗಳ ಢಾಳ ಉಂಗುರ ನಡುವಿನ
ಅಂಗನೆ ಬರುತಿರೆ ಕಂಡು
ಸಿಂಗವಿದೆಂದು ನೋಡುತ ಮೈಮರೆದಿರ್ದ
ಸಿಂಗವ ಬೀಳಲೆಸೆದರು ೭೦

ಹರಿತಂದು ಹರಿ ಬೆಂಬತ್ತಿ ಪುಳಿಂದನು
ಹರಿವರಿಯಿಂದ ಬರುತಿರಲು
ಹರಿಯ ಧ್ಯಾನದಲ್ಲಿ ಇರುವ ಬಾಲಕನ
ಕಂಡು ಹರುಷದಿ ಹರಿಯ ನಿಲ್ಲಿಸಿದ ೨೧

ಏನಿದು ನೋಡಿದಾಶ್ಚರ್ಯವಾಗಿದೆ ಈ
ಕಾನನದೊಳಗೊಂದು ಶಿಶುವು
ದಾನವಾಂತಕನ ಧ್ಯಾನದೊಳಿರ್ದಕಾರಣ
ಹಾನಿಯಿಲ್ಲದೆ ಉಳಿದಿಹುದು ೨೨

ಪಾಪಕೆಳಸಿ ಬಂದು ಪೂರ್ವದಲಿ ಪುಣ್ಯರೂಪವ
ಕಂಡಂತೆ ಮನದಿ
ಚಾಪವನಿಳುಹಿದ ರಾಯನು ಬೇಗದಿ
ಶ್ರೀಪತಿಗೆ ಶರಣೆಂದೆನುತ ೨೩

ಇಳಿದು ಸಗ್ಗಳೆ ಉದಕದಲಿ ಗಾಯವ ತೊಳೆದು
ಮುಂಜೆರಗಿಂದಲೊರೆಸಿ
ತರಳನ ಎತ್ತಿ ತೊಡೆಯೊಳಿಟ್ಟು ರಂಬಿಸಿ
ಬಳಲಿದೆ ಬಾರಯ್ಯ ಎನುತ ೨೪

ಬಡವಗೆ ಭಾಗ್ಯದ ಲಕ್ಷ್ಮಿ ದೊರೆತಂದದಿ
ಎಡಹಿ ನಿಧಾನ ಕಂಡಂತೆ
ಪಡೆದೆ ಆಯಾಸವಿಲ್ಲದೆ ಬಾಲಕನನೆಂದು
ಕಡುಹರುಷವನು ತಾಳಿದನು ೨೫

ದೇವರ ದೇವನ ಕೃಪೆಯಿದು ಎನುತಲಿ
ಭಾವಿಸಿದನು ತನ್ನ ಮನದಿ
ಜೀವಂತವಾಗಿರ್ದ ಮೃಗವನೆಲ್ಲವ ಬಿಟ್ಟು
ನಿರ್ಜೀವಿಗಳವರವರ್ಗಿತ್ತು ೨೬

ಸರಸಿಜನಾಭನ ಕೃಪೆಯಿದು ಎನುತಲಿ
ಕರೆಸಿದ ಕಾಲಾಳುಗಳನು
ಅರಸಿ ಮೇಧಾವತಿಗರುಹಿ ಸುದ್ದಿಯನೆಂದು
ಪುರಕಾಗಿ ಚರರನಟ್ಟಿದನು ೭೭

ಪುರಕಾಗಿ ಚರರು ಬಂದರು ಈ ವಾರ್ತೆ-
ಯನರುಹಿದರಾ ಮೇಧಾವತಿಗೆ
ಕರುಣಿ ಕೃಷ್ಣ ನಿಮಗೆ ಕುಮಾರನನಿತ್ತನು
ಸಿರಿವಂತೆ ಕೇಳು ಬಿನ್ನಪವ ೭೮

ಮೃಗದ ಬೇಂಟೆಯ ಪೋಗಿ ಮಗನ
ಪಡೆದರೆಂಬೊದಗಣಿತ ಆಶ್ಚರ್ಯ ಜಗದಿ
ನಗೆಯ ಮಾತಲ್ಲ ನಾರಾಯಣ ಹರಿ ನಿಮ್ಮ
ಬಗೆಯರಿದಿತ್ತ ಬಾಲಕನ ೭೯

ಲೇಸಾಯಿತು ಎನ್ನ ದೋಷಹಿಂಗಿತು ಎಂದು
ಏಸು ಜನ್ಮದ ಪುಣ್ಯಫಲವೊ
ಪೂಶರನಯ್ಯನ ಕೃಪೆಯಿಂದ ಮಗನಾದ
ವಾಸಿಯಾಯಿತು ಬಾಳ್ವೆಯೆಂದು ೮೦

ಕೇರಿಕೇರಿಯೊಳೆಲ್ಲ ಸಾರಿ ಡಂಗುರ ಹೊಯ್ಸಿ
ಬೀರಿಸಿದಳು ಸಕ್ಕರೆಯ
ತೋರಣವನೆ ಕಟ್ಟಿ ತವಕದಿಂದಲಿ ಪ್ರಜೆ
ಪರಿವಾರನೆಲ್ಲ ಕರೆಸಿದಳು ೮೧

ಓಡಿದು ತುರಂಗವನೇರಿಸಿ ತರಳನ ಜಡಿದ
ತಂಬಟೆ ಭೇರಿಯಿಂದ
ಎಡಬಲದಲ್ಲಿ ಬಿಲ್ಲಾಳ್ಗಳನೊಡಗೊಂಡು
ನಡೆತಂದರಾಚಂದನಾವತಿಗೆ ೮೨

ಥಳಥಳಿಸುವ ಹೊನ್ನ ತಳಿಗೆ ಆರತಿಗಳ
ಕಳಸ ಕನ್ನಡಿಗಳ ಪಿಡಿದು
ನಳಿನಮುಖಿಯರೊಡಗೊಂಡು ಹರುಷದಿ ಎಳೆಯ
ಬಾಲಕನಿದಿರ್ಗೊಂಡು ೮೩

ಭಾಳಪರಿಯಲಿ ಕದಳಿ ಆರತ್ತಿಯೆತ್ತಿ ನಿವಾಳಿಗಳನೆ ಹಾಕುವರು
ಬಾಲನ ಎತ್ತಿ ತಕ್ಕೈಸಿ ಸಂತೋಷದಿ ಆಲಯವನೆ ಪೊಕ್ಕರಾಗ ೮೪

ತರಿಸಿದ ಹೊನ್ನ ತಟ್ಟೆಯಲಿ ತಾಂಬೂಲವ
ಇರಿಸಿ ಎಲ್ಲರಿಗಿತ್ತು ಕಳುಹಿ
ಸುರತರು ಕೈವಶವಾದಂತೆ ತರಳನ ಬೆರಸಿ
ಸಂತೋಷದಲ್ಲಿಹರು ೮೫

ಕೋಮಲಾಂಗವು ಕಳಕಳಿಸುವ ನಗೆ ಮುದ್ದು
ಸೋಮ ವದನ ಸಣ್ಣವಗೆ
ನಾಮಕರಣ ಮಾಡಬೇಕೆಂದು ಧ್ಯಾನಿಸಿ ಬ್ರಾಹ್ಮರೆಲ್ಲರ ಕರೆಸಿದನು ೮೬

ಕಂದರ್ಪಕೋಟಿಲಾವಣ್ಯದ ತರಳಗೆ ಚಂದದಾಭರಣವನಿಟ್ಟು
ಚಂದ್ರಹಾಸನೆಂಬೊ ಪೆಸರಿಟ್ಟು ಕರೆದರು
ಮುಕುಂದನ ಕರುಣದ ಸುತಗೆ ೮೭

ಆಡಿಸುವಳು ಮೇಧಾವತಿ ಅಣುಗನ ಬಾಲಕ್ರೀಡೆಯ
ನೋಡಿ ಹರುಷದಿ
ರೂಢಿಯೊಳಗೆ ತನ್ನ ಸುತನ ಲಾವಣ್ಯಕ್ಕೆ
ಜೋಡಿಲ್ಲವೆಂದು ಹಿಗ್ಗುವಳು ೮೮

ಕತ್ತಲಮನೆಗೆ ದೀವಿಗೆಯನಿತ್ತಂತೆ ದೇವೋತ್ತಮ ಕವಿಗಳಿಗೆ
ಚಿತ್ತಕ್ಕೆ ಚದುರನುಡಿಗಳು ದೊರಕಿದ ಹಾಗೆ
ಬತ್ತಿದ ಕೆರೆ ತುಂಬಿದಂತೆ ೮೯

ಚಂದನಾವತಿಯ ಪಟ್ಟಣದ ಪುಳಿಂದನ
ಮಂದಿರದಲಿ ಸ್ಥಿರತರದಿ
ಇಂದಿರಾಪತಿ ಹೆಳವನಕಟ್ಟೆರಂಗ ಗೋವಿಂದನ
ಭಜಕನೊಪ್ಪಿದನು ೯೦

## ಎರಡನೆಯ ಸಂಧಿ

ಮಂತ್ರಿ ಮಚ್ಚರವನ್ನು ಮನದೊಳಗಿಟ್ಟು
ಶ್ರೀಕಾಂತನ ಕರುಣವುಳ್ಳವಗೆ
ತಂತ್ರವ ಹೂಡಿ ಕೊಲ್ಲುವೆನೆಂದು ನೇಮಿಸಿ
ಕುಂತಳಪುರಕೆ ಕಳುಹಿದನು ೧

ಅಕ್ಷರಾಭ್ಯಾಸವ ಮಾಡಬೇಕೆನುತ
ಗಂಧಾಕ್ಷತೆ ಫಲಪುಷ್ಪದಿಂದ
ಸಾಕ್ಷಾತು ಗಣಪತಿಗರ್ಪಿಸಿ ತರಳನ ಶಿಕ್ಷಾಗುರುವಿಗೆ ಒಪ್ಪಿಸಿದ ೨

ಮಣ್ಣ ಹರಹಿ ಅಕ್ಷರವ ಬರೆದು ಎನ್ನಣ್ಣನೀ ತಿದ್ದು ಬಾ ಎನಲು
ಪನ್ನಗಶಯನ ನಾರಾಯಣ ಹರಿಕೃಷ್ಣ
ಎನ್ನೊಡೆಯ ಶರಣೆಂದು ಬರೆದ ೩

ಓನಾಮವ ಬರೆಯೆಂದರೆ ಬರೆಯದೆ
ಶ್ರೀನಾಥ ಶರಣೆಂದು ಬರೆದ
ನಾನೊಂದ ಹೇಳಲು ನೀನೊಂದ ಬರೆವೆ
ನಿನ್ನ ಜ್ಞಾನ ಬೇರೆ ಚಿತ್ತ ಬೇರೆ ೪

ಒಂದ ಹೇಳಿದರೊಂದ ಬರೆವೆಯಾದರೆ ನಿನ್ನ
ತಂದೆಗೆ ಒಯ್ದು ಒಪ್ಪಿಸುವೆ
ಕುಂದು ನಮ್ಮ ಮೇಲೆ ಇಡುವ ನಿಮ್ಮಯ್ಯನು
ಎಂದು ಧಿಕ್ಕರಿಸಿ ಹೇಳಿದನು ೫

ನೀತೀಲಿ ಬರೆಯೆಂದರೆ ಬರೆಯದೆ ನಿನ್ನ
ಚಾತುರ್ಯದ ಬುದ್ಧಿ ಬೇರೆ
ಈತನ ತೊಡರು ನಮಗೆ ಬೇಡವೆಂದವರ
ತಾತಗೆ ಒಯ್ದು ಒಪ್ಪಿಸಿದ ೬

ಹಿಂದಕ್ಕೆ ಹಿರಣ್ಯಕಶ್ಯಪ ತನ್ನ ತನಯ
ಮುಕುಂದನ ಭಜಕನೆಂದೆನದೆ
ಬಂಧಿಸಿ ಬಸುರ ಬಗಿಸಿಕೊಂಡಾತನ ಮನಸು
ಬಂದ ಹಾಂಗಿರಲೆಂದು ಸುತನ ೭

ಧ್ರುವ ಪ್ರಹ್ಲಾದ ಅಕ್ರೂರಾಂಬರೀಷ ಮಾಧವ
ಮುರಾರಿಯನ್ನು ಭಜಿಸಿ
ದವರಿಗಿಂತುತ್ತಮ ಕುಮಾರನು ಇನ್ನು ಭವ
ಭಯಾದಿಗಳಿಲ್ಲ ನಮಗೆ ೮

ಶ್ರೇಷ್ಠರೆಲ್ಲರು ಕೂಡಿ ಶುಭಲಗ್ನವನು
ಕಟ್ಟಿಕೊಟ್ಟರು ಕರಲೇಸು ಎನುತ
ಅಷ್ಟವರುಷದ ಕುಮಾರಗೆ ಮುಂಜಿಯ
ಕಟ್ಟೆದರ್ ವೇದೋಕ್ತದಲಿ ೯

ವೇದಶಾಸ್ತ್ರ ಧನುರ್ವಿದ್ಯಾ ಸಾಧನೆಗಳ
ಓದಿಸಿದರು ಗುರುಮುಖದಿ
ಮಾಧವನಲ್ಲದೆ ಅನ್ಯತ್ರರಿಲ್ಲವೆಂದು ಭೇದಾಭೇದವನೆಲ್ಲ ತಿಳಿದು ೧೦

ಎಳದುಳಸಿಯ ವನಮಾಲೆಯನೆ ಹಾಕಿ
ಹೊಳೆವ ಶ್ರೀ ಮುದ್ರಿಕೆಯಿಟ್ಟು
ನಳಿನನಾಭನ ಪೂಜೆಮಾಡುವ ಬನ್ನಿರೆಂದು
ಗೆಳೆಯರೆಲ್ಲರಿಗೆ ಬೋಧಿಸಿದ ೧೧

ಪತಿತರಾದಪಗತಿ ಕುಮಾರರಿಗೆಲ್ಲ ಸದ್ಗತಿಯಾಗಬೇಕೆಂದೆನುತ
ಹಿತವ ಚಿಂತಿಸಿ ನಂಬಿದವರಿಗೇಕಾದಶಿ ವ್ರತವ
ಮಾಡಿಸಿದನಾಜ್ಞೆಯಲಿ ೧೨

ಆ ದೇಶದೊಳಗಿರ್ದ ಜನರಿಗೆ ಪಣೆಯಲ್ಲಿ
ದ್ವಾದಶ ನಾಮವ ಹಚ್ಚಿ
ಸಾದಿ ಸಾಧಿಸಿರಿ ಏಕಾದಶಿ ವ್ರತವೆಂದು ಬೋಧಿಸಿದನು ಎಲ್ಲರಿಗೆ ೧೩

ಎಲ್ಲರು ಏಕಾದಶಿಯ ಜಾಗರ ಮಾಡಿ ಫುಲ್ಲನಾಭನ ಭಜಿಸುವರು
ಸೊಲ್ಲುಸೊಲ್ಲಿಗೆ ನಾರಾಯಣ ಹರಿಯೆಂಬೋದಲ್ಲದೆ
ಪರಗೋಷ್ಠಿಯಿಲ್ಲ ೧೪

ಮಲೆತವರನು ಮುರಿದೊತ್ತಿ ಶಕ್ತಿಯಕೊನೆ
ಬೆಳೆಸುವ ಹರಿಭಕ್ತರೊಡನೆ
ಬಲವಂತ ಧರೆಯ ಗೆದ್ದು ಧರೆಯೊಳು ಬಹು
ಪರಾಕ್ರಮಿಯೆನಿಸಿದನು ೧೫

ಶೂರತ್ವದಲಿ ತಂದೆಯಾಳುವ ರಾಜ್ಯವಯೆಂದರುಹಿ
ಇಮ್ಮಡಿಯನು ಗೆದ್ದು
ಊರ ತುರುವನೆಲ್ಲ ತಿರುಹಿ ಮಾಣಿಕ ಮುತ್ತು
ಹೇರಿಸಿದನು ತನ್ನ ಪುರಕೆ ೧೬

ಕೆಂಧೂಳು ಸೂಸುತ ಬಂದ ಕುಮಾರಗೆ
ತಂದು ಆರತಿಗಳನೆತ್ತಿ
ಇಂದಿರೆ ಮಾತೆ ನಾರಾಯಣ ಪಿತನಹುದೆಂದು
ಚರಣಕ್ಕೆರಗಿದನು ೧೭

ಅಗಣಿತ ಆಯುಷ್ಯವಂತನು ನೀನಾಗು
ಜಗದಧಿಪತಿಯಾಗು ಎಂದು
ಮಗನ ತಕ್ಕೈಸಿ ಮುಂಡಾಡಿ ಸಂತೋಷದಿ ಮಿಗೆ
ಹರುಷವನೆ ತಾಳಿದಳು ೧೮

ಲೇಸಾದ ಶುಭಲಗ್ನವ ಕಟ್ಟಿ ಸುತನ ಸಿಂಹಾಸನದಲ್ಲಿ ಕುಳ್ಳಿರಿಸಿ
ಭೂಸುರ ಬಂಧುಗಳೆಲ್ಲರು ನೆರೆದಿಂದುಹಾಸಗೆ ಪಟ್ಟಗಟ್ಟಿದರು ೧೯

ಮಾತೆಪಿತರ ಮಾತುಮಂ ಮೀರಿ ನಡೆಯದೆ
ಅನಾಥರ ಪರಿ ಪಾಲಿಸುತ್ತ
ಪ್ರೀತಿಯಿಂದಲಿ ದೇವಬ್ರಾಹ್ಮರೊಡನೆ
ರಾಜ್ಯನೀತಿಯಿಂದಾಳುತಲಿಹನು ೨೦

ಬಾಲಕ ಬಹುಪರಾಕ್ರಮಿ ಎನ್ನ ಮಾತ ನೀ
ಲಾಲಿಸು ಕುಂತಳೇಶ್ವರಗೆ
ಕಾಲಕಾಲಕೆ ಕಪ್ಪವ ಕೊಟ್ಟು ಬಹೆವು ಆಲಸ್ಯವಾಯಿತು ಎಂದ ೨೧

ಮೀರಬಾರದು ಪಿತನಾಜ್ಞೆಯೆಂದೆನುತ
ಉದಾರಬುದ್ಧಿಯಲಿಂದುಹಾಸ
ಯಾರ‍್ಯಾರಿಗೆ ಹೋಗಿ ಕೊಡಬೇಕು ಎನುತ
ವಿಚಾರಿಸಿದನು ತನ್ನಪಿತನ ೨೨

ಕುಂತಳಪುರದರಸಗೆ ದುಷ್ಟಬುದ್ಧಿಯೆಂಬ ಮಂತ್ರಿ
ಜೋಯಿಸ ಪುರೋಹಿತಗೆ
ಕಾಂತಿಗೊಡದ ಕನಕಾಭರಣವೆಲ್ಲವ ಅಂತಸ್ಥದಿಂದ ಕಟ್ಟಿದನು ೨೩

ಆನೆ ಕುದುರೆ ಅರ್ಧಸೇನೆ ದಳವ ಕೊಟ್ಟು
ಜ್ಞಾನವುಳ್ಳ ಭೃತ್ಯರೊಡನೆ
ನೀವಿದ ಕುಂತಳೇಶ್ವರಗೆ ಕೊಟ್ಟು ಬನ್ನಿರೆಂದು
ದಾನವಾಂತಕನ ಕಿಂಕರನು ೨೪

ಕರವ ಮುಗಿದು ಇಂದುಹಾಸನಪ್ಪಣೆಯಿಂದ
ತೆರಳಿದರಲ್ಲಿಂದ ಮುಂದೆ
ಭರದಿಂದ ಬಂದು ಬಿಟ್ಟುದು ದಂಡು ಕುಂತಳಪುರದ
ಹೆಬ್ಬಾಗಿಲ ಮುಂದೆ ೨೫

ಪಟ್ಟಣದೊಳು ಬಂದು ಪಾಳಯವನೆ ಬಿಟ್ಟ
ದಿಟ್ಟರಾರೆಂದು ಕೇಳಿದನು
ಕೊಟ್ಟು ಕಪ್ಪವ ಕುಂತಳೇಂದ್ರಗೆ ಕೊಡಿರೆಂದು
ಅಟ್ಟಿದೆನ್ನೊಡೆಯ ಪುಳಿಂದ ೨೬

ಎಂದ ಮಾತನು ಕೇಳಿ ಮಂತ್ರಿಗೆ ಪೇಳಲು
ಮಂದಿರಕಾಗಿ ಕರೆಸಿದ
ತಂದ ಕಪ್ಪವ ದುಷ್ಟಬುದ್ಧಿಯ ಮುಂದಿಟ್ಟು
ನಿಂದೆದ್ದು ಕರವ ಮುಗಿದರು ೨೭

ಕಡೆಗಣ್ಣಲಿ ನೋಡಲಿಲ್ಲವರೊಳು ಮಾತನುಡಿಯದೆ ಸನ್ಮಾನಿಸದೆ
ತಡೆಯೇಕಿಷ್ಟು ದಿವಸವೆಂದು ಮಂತ್ರಿಯು ಜಡಿದು
ಝೇಂಕರಿಸಿ ಕೇಳಿದನು ೨೮

ಜೀಯ ಹಸಾದ ನಿಮ್ಮಡಿಗೆ ಇಂದಿನ ವಾಯಿದ ಕಟ್ಟಿದ ಧನವು
ಆಯತವಾಗಿದೆ ಇಳುಹಿಸಿ ನೋಡಿರಿ
ದೇವರು ಕೈಕೊಂಬುದೆನಲು ೨೯

ತೆಗೆಸಿದ ಮಂತ್ರಿಯು ಕುಶಲಗತಿಗಳಿಂದ ನಗ
ನಾಣ್ಯ ದೇವಾಂಗವನು
ತೆಗೆಸಿ ನೋಡಿದನು ಬಗೆಬಗೆ ಸಪ್ತಂಗಳ ನಗ
ನಾಣ್ಯ ದೇವಾಂಗವನು ೩೦

ಮಗನ ಕರೆದು ಹೇಳಿದಿವರಿಗೆ ಭೋಜನ
ಸೊಗಸಾಗಿ ಮಾಡಿಸು ಎಂದ
ಬಗೆಬಗೆಯಿಂದಲಿ ತೃಪ್ತಾಗ ಬಡಿಸು ಎಂದು
ನಗೆಮುಖದಿಂದ ಹೇಳಿದನು ೩೧

ಸಣ್ಣ ರಾಜಾನ್ನದಕ್ಕಿಯನ್ನ ಶಾಕವು ಅಣ್ಣೆವಾಲೆರೆದ ಪಾಯಸವು
ಬೆಣ್ಣೆಕಾಸಿದ ತುಪ್ಪ ಭಕ್ಷ್ಯಂಗಳನು ಮಾಡಿ
ಉಣ್ಣೇಳಿರೆಂದು ಕರೆದರು ೩೨

ಅತಿದೈನ್ಯದಿಂದ ಹೇಳಿದರು ಏಕಾದಶಿ ವ್ರತ
ನಿರಾಹಾರವು ನಮಗೆ
ಚತುರತನವೇ ನಮ್ಮೊಡನೆ ಕಿರಾತನ ಮತವಿದು
ಎಂದು ಕೇಳಿದನು ೩೩

ಹೆಮ್ಮೆ ನಿಮ್ಮೊಡನೆ ಮಾಡುವುದೇತಕೆ ಜೀಯ
ಎಮ್ಮೊಡೆಯನ ಸುಕುಮಾರ
ತಮ್ಮ ರಾಜ್ಯದಲ್ಲಿ ಏಕಾದಶಿವ್ರತ ನಿರ್ಮಾಣವನ್ನೆ ಮಾಡಿದನು ೩೪

ಎಲ್ಲಿಯ ಮಾತಿದು ಆತನ ಸತಿ ಬಂಜೆ
ಎಂದೆಲ್ಲರು ಹೇಳುತಲಿಹರು
ಅಲ್ಲದ ಮಾತಿದು ಅತಿ ಚೋದ್ಯವಾಗಿದೆ
ಎಲ್ಲಿದ್ದ ಆತಗೆ ಸುತನು ೩೫

ದುಷ್ಟಮೃಗವನೆಚ್ಚು ಕೆಡಹುವೆನೆನುತ
ಹಿಂದಟ್ಟಿ ಹೋದನು ಪುಳಿಂದ
ಪುಟ್ಟ ಬಾಲಕ ನಾರಾಯಣ ಹರಿಯೆನುತ
ಅಟ್ಟಡವಿಯೊಳಗಿರಲು ೩೬

ಆ ಶಿಶುವನೆ ತಂದು ಅತಿಶಯದಿಂದಲಿ
ಪೋಷಣೆಯನು ಮಾಡಿದರು
ವಾಸುದೇವನ ಕಿಂಕರ ಇಂದ್ರಹಾಸನು
ಭೂಸುರರನೆ ಪಾಲಿಸುವನು ೩೭

ಎಂದ ಮಾತನು ಕೇಳಿ ಎದೆಯೊಳು ಅಲಗು
ನಟ್ಟಂದದಿ ಮನದೊಳು ಮರುಗಿ
ಅಂದು ಮಾಡಿದ ಕಾರ್ಯ ಆಗಲಿಲ್ಲವು ಸಿದ್ಧ
ಎಂದು ತಾ ಮನದೊಳು ತಿಳಿದ ೩೮

ಮನುಜರೈತನದಿಂದಲೇನಹುದು ದೈವ
ಅನುಕೂಲವಾದ ಕಾರ್ಯವು
ನೆನೆದಂತೆ ಅಹುದೆನ್ನುತ ದುಷ್ಟಬುದ್ಧಿಯು
ಮನಗಲ್ಲಿ ಚಿಂತೆ ಮಾಡಿದನು ೩೯

ದ್ವಾದಶಿ ದಿವಸ ಪಾರಣೆಯ ಮಾಡಿಸಿ ಅವರಿಗಾದರಿಸಿ
ಉಡುಗೊರೆಯಿತ್ತು
ಕ್ರೋಧವ ಮನದೊಳಗಿಟ್ಟು ವೀಳ್ಯವ ಕೊಟ್ಟು
ಖೇದದಿಂದವರ ಕಳುಹಿದನು ೪೦

ಕಾವಕರುಣಿ ಕೃಷ್ಣರಾಯ ಭಜಕನ ಆವಾವ ಪರಿಯಲ್ಲಿ ತಂದು
ಜೀವಹತ್ಯವ ಮಾಡಬೇಕೆಂದು ನೇಮಿಸಿ
ಭಾವಿಸಿದನು ತನ್ನಮನದಿ ೪೧

ತೆರಳಿದ ಮಂತ್ರಿಯು ಪುಳಿಂದನ ಕುಮಾರನ
ಇರವ ನೋಡೇನು ಎಂದೆನುತ
ಮರಿಕೋಗಿಲೆಯಂದದಿ ಮಾತನಾಡುತ
ಸೆರಗ ಪಿಡಿದು ಸುಕುಮಾರಿ ೪೨

ಚೂತವೃಕ್ಷವು ಕಾತು ಫಲ ಪಕ್ವವಾಯಿತು
ಏತಕೆ ಯಾರು ಭುಂಜಿಸದೆ
ಚಾತುರ್ಯದ ಮಾತ ಪೇಳಿ ನಿನಗೊಬ್ಬ
ಕಾಂತನ್ನಾ ತಹೆನು ಎಂದೆನುತ ೪೩

ಸೆಳೆನಡು ಬಳುಕುತ ತೆಳ್ವಸುರಿನ ನಡು
ಹೊಳೆಹೊಳೆವ ತನುಕಾಂತಿಯ
ಎಳೆವದನದ ಸುಕುಮಾರಿಯ ರಂಬಿಸಿ
ವಳೆಯಕ್ಕೆ ಕುಳುಹಿ ತಾ ತೆರಳ್ದ ೪೪

ಅಲ್ಲಲ್ಲಿ ನೋಡುತ ಬಂದನು ಮಂತ್ರಿಯು
ಪಲ್ಲೈಸಿದ ಪೈರುಗಳ
ಬಿಲ್ಲಾಳ ಮುಂದಲಟ್ಟಿಸೆ ಪುಳಿಂದನು ತಲ್ಲಣಿಸಿದ ತವಕದಲಿ ೪೫

ಪಟ್ಟಣವನು ಸಿಂಗರಿಸಿ ಬಿಡಾರವ ಬಿಟ್ಟು ಬಂದಂಥ ಪ್ರಜೆಗೆ
ತೊಟ್ಟು ಕಳಚಿದ ಎಳನೀರು ಕದಳಿಕಬ್ಬು
ತಟ್ಟೆಯೊಳಗೆ ಇರಿಸಿದರು ೪೬

ಚೆದುರಿಸಿ ತನ್ನರಮನೆಯೊಳು ಮಂತ್ರಿಗೆ
ನದರು ಮಾಡಿಸಿದ ಪುಳಿಂದ
ನದರುಗಾಣಿಕೆ ಕಪ್ಪವಕೊಟ್ಟು ಮಂತ್ರಿಯ
ಇದಿರುಗೊಂಡರು ಹರುಷದಲಿ ೪೭

ಬಂದು ಗದ್ದುಗೆಮೇಲೆ ಕುಳ್ಳಿರಿಸಿ ಮಂತ್ರಿಯ
ನಿಂದೆದ್ದು ಕರವ ಮುಗಿದನು
ತಂದು ಕಾಣಿಕೆ ಕಪ್ಪವ ಕೊಟ್ಟು ಪ್ರಧಾನಿಗೆ
ಕಂದನ ತಂದು ತೋರಿಸಿದ ೪೮

ಈತ ಲಕ್ಷಣ ಸಂಪನ್ನ ಸುಶೀಲನು ಈತ ಶ್ರೀಹರಿಯ ಕಿಂಕರನು
ಈತನ ಕರುಣದಿ ಸಲಹಬೇಕೆಂದವರ ತಾತ
ಕೊಟ್ಟನು ಮಂತ್ರಿ ಕೈಗೆ ೪೯

ತನ್ನಿಂದ ತಾನೆ ಕುಮಾರನಾದನು ಬಹುಧನ್ಯ ನೀನಹುದೆಂದೆನುತ
ಗನ್ನಗತಕವನು ಮನದೊಳಗಿಟ್ಟುಕೊಂಡು
ಮನ್ನಿಸಿದನು ಸಭೆಯೊಳಗೆ ೫೦

ಕರೆದನು ಚಂದ್ರಹಾಸನ ಕೈಯಲ್ಲಿ ಬರೆದು
ಕೊಟ್ಟನು ಮಂತ್ರಿ ಒಡನೆ
ಮರಳಿದ ಯಾರಿಗೆ ತೋರದೆ ಕುಂತಳಪುರಕಾಗಿ
ಪೋಗು ನೀ ಎನಲು ೫೧

ಬೇಕಾದುದೊಂದು ತುರಂಗವನೇರು
ನಾಲ್ಕು ಮನುಜರೊಡಗೂಡಿ
ಜೋಕೆಯಿಂದಲಿ ಒಯ್ದು ಮದನನ
ಕೈಯಲ್ಲಿ ಏಕಾಂತದಲಿ ಕೊಡು ಎಂದ ೫೨

ಮಂತ್ರಿಯಪ್ಪಣೆಯಿಂದ ಮನೆಗೆ ಬಂದನು
ಶುದ್ಧ ಅಂತರಂಗದ ಬಾಲಕನು
ಸಂತೋಷದಿಂ ತಾಯಿ ತಂದೆಗೆ ಎರಗಿದ
ಯಂತ್ರವಾಹಕನ ಕಿಂಕರನು ೫೩

ಆಯುಷ್ಯವಂತ ನೀನಾಗು ಉತ್ತಮವುಳ್ಳ
ಸ್ತ್ರೀಯರನಾಳು ಎಂದೆನುತ
ಮಾಯವಾಗಲಿ ಬಂದ ದುರಿತವು
ಕಮಲದಳಾಯತಾಕ್ಷನ ಕೃಪೆಯಿಂದ ೫೪

ಹಸೆಯ ಮೇಲೆ ಕುಳ್ಳಿರಿಸಿ ಕುಮಾರಗೆ
ಮೊಸರು ಅಕ್ಷತೆಗಳನಿಟ್ಟು
ಎಸಳು ದೂರ್ವೆಗಳನು ಮುಡಿಸಿ ಸೇಸೆಯ
ತುಂಬಿ ವಸುಧೀಶನಾಗೆಂದು ಹರಸಿ ೫೫

ಮತ್ತೆ ತಾಯಿ ತಂದೆಗೆರಗಿ ಪೊರಮಟ್ಟು ತೆರಳಿದ
ಚಿತ್ತದಿ ಹರಿಯ ನೆನೆವುತ
ಮಿತ್ರೆಯರೀರ್ವರು ತುಂಬಿದ ಕೊಡಗಳ
ಹೊತ್ತುಕೊಂಡಿದಿರಿಗೆ ಬರಲು ೫೬

ಬೀದಿವರಿದು ಬಾಲ ಬರುತಿರೆ ಕಂಡನು ವೇದ ಪಾಠಕರಿಬ್ಬರನು
ಸಾಧಿಸಿ ಮುತ್ತೈದೆಯರ ಕಂಡನು ಇದು
ಶುಭಕಾಧಾರವೆಂದು ನಡೆದನು ೫೭

ಮಧುರ ಮಾವಿನಹಣ್ಣು ಗಂಧಪುಷ್ಪಗಳನ್ನು
ಇದುರಲಿ ತಂದು ಕೊಡುವರು
ಮದುವಣಿಗರ ಹೊನ್ನಕಳಸವ ಕಂಡನು
ಇದು ಲೇಸು ಎಂದು ನಡೆದನು ೫೮

ಭೇರಿ ಬಡಿದವು ಶಂಖನಾದವೆಸೆದವು ಚೀರಿದವು ಚಿನ್ನಕಹಳೆ
ಭೋರೆಂದು ಪಂಚಮ ವಾದ್ಯವು ಎಸೆದವು
ಊರಿಂದ ಹೊರೆ ಹೊಂಡಲಿಕ್ಕೆ ೫೯

ದಧ್ಯನ್ನವನ್ನು ಕಂಡನು ಬಾಲ ಇದಿರಲಿ
ಮಧ್ಯದ ಕುಂಭವ ಕಂಡ
ಪದ್ಮನಾಭನ ಕಿಂಕರ ಮುಂದೆ ಬರುತಿರೆ ತಿದ್ದಿ
ಕೊಟ್ಟವು ವಾಯಸವು ೬೦

ಹಂಗನ ಗರಿಯ ವಾಮದ ಭಾಗ ಜಂಬುಕ
ಮುಂಗುಲಿ ಹರಿಣನ ಕಂಡ
ಶೃಂಗಾರವುಳ್ಳಂಥ ಸ್ತ್ರೀಯರು ಬರುತಿರೆ ಇದು
ಶುಭವೆಂದು ನಡೆದನು ೬೧

ಇಂತು ಈ ಪರಿಯ ಶಕುನವ ಮನ್ನಿಸಿಕೊಂಡು
ಸಂತೋಷದಿಂದ ಬರುತಿರಲು
ಕುಂತಳಪುರದ ಬಾಗಿಲ ಹೊನ್ನ ಕಳಸವ
ನಂತರವನೆ ಕಂಡ ಇದಿರ ೬೨

ಉದಯವಾಗಿರ್ದ ನಾರಂಗ ಕಿತ್ತಳೆ ಮಾವು
ಕದಳಿ ದಾಳಿಂಬ ದ್ರಾಕ್ಷಿಗಳು
ಹದನಾದ ಫಲಪಕ್ವಭರಿತ ವನಂಗಳ
ಎದಿರುಗೊಂಬಂತೆ ತಾ ಕಂಡ ೬೩

ಎಸಳು ಮಲ್ಲಿಗೆ ಸಂಪಿಗೆ ಶಾವಂತಿಗೆ
ಹಸನಾದ ಸುರಗಿ ಪಾದರಿಯು
ಕುಸುಮದ ಪರಿಮಳ ಎಸೆವುತಿರ್ದುದ
ಕಂಡು ಶಶಿಹಾಸವನಕೆ ಹಾರೈಸಿ ೬೪

ಬಳಲಿದ ಶ್ರಮವನ್ನು ತುಂಬಿಸುವೆನೆಂದ್ವಾಜಿ
ಅಳಿದು ರಕ್ಷಕರ ಕಾವಲಿಟ್ಟು
ಅಳಿಗಳು ಜೊಂಪಿಡುತಲಿ ಕೆಂದಾವರೆ ತಳಿರ
ಸರಸಿಯ ತಾ ಕಂಡ ೬೫

ಕಟ್ಟುವನಾಗ ವಾಜಿಯ ತಂಪಲಿ ಬೆನ್ನಟ್ಟಿ ರಕ್ಷಕರ ಕಾವಲಿಟ್ಟು
ತೊಟ್ಟ ಮೈಜೋಡ ಸಡಿಲಿಸಿ ಕೆಲದಲ್ಲಿಟ್ಟು
ಸರಸಿಯನ್ನು ತಾ ಇಳಿದ ೬೬

ಮಿಂದು ಮಡಿಯನ್ನುಟ್ಟು ಮರೆಯದೆ ಜಪತಪ
ಸಂಧ್ಯಾವಂದನೆಯ ಮಾಡಿದನು
ಮಂದಾರ ಮಲ್ಲಿಗೆ ಪುಷ್ಪಂಗಳಿಂದ ಮುಕುಂದನ
ಪೂಜೆ ಮಾಡಿದನು ೬೭

ಮೀಸಲಾಗಿರ್ದ ಸಿದ್ಧಾನ್ನವ ತೆಗೆದು ಶ್ರೀ
ವಾಸುದೇವಂಗೆ ಅರ್ಪಿಸಿದ
ಶೇಷವನುಂಡು ಹರುಷದಿಂದಲಿ ಆಗ ಹೊಸದಾದ
ಹೊದಿಕೆಯ ಹೊದ್ದ ೬೮

ಮೇರು ಗಿರಿಯ ಪರ್ವತದ ತುದಿಯಲ್ಲಿ
ಮೈದೋರುವ ಭಾಸ್ಕರನಂತೆ
ಬೀರುವ ಕೆಂಪಿನ ತಳಿರ ಹಾಸಿಕೆಗಳು
ಚಾರುಹಾಸಗೆ ಆದವಲ್ಲಿ ೧೯

ಮೇಲು ಕರ್ಪೂರ ವೀಳ್ಯವ ಸವಿದನು
ನಳಿತೋಳ್ಗಳ ತಲೆಗಿಂಬಲಿಟ್ಟು
ಬಳಲಿದ ಸುಖನಿದ್ರೆಗೈದ ಹೆಳವನಕಟ್ಟೆ ವೆಂಕಟೇಶ್ವರನ ಕಿಂಕರನು ೨೦

## ಮೂರನೆಯ ಸಂಧಿ

ನಿದ್ರೆಗೈದಿಂದುಹಾಸನ ಕಂಚುಳಿಕೆಯಲ್ಲಿರ್ದ
ಪತ್ರವನೋದಿಕೊಂಡು
ತಿರ್ದಿ ತಾ ವಧುವಾದಳು ಮಂತ್ರಿತನುಜೆಯು
ಪದ್ಮನಾಭನ ಕಿಂಕರಗೆ
ಲೀಲೆಯಿಂದಲಿ ಚಂಪಕಮಾಲೆ ವಿಷಯೆ
ವಿಶಾಲದಿ ಸಖಿಯರು ಕೂಡಿ
ಆಲಯದಿಂದಲಿ ಹೊರಟರು ವಸಂತಕಾಲ ಬಂದಿರೆ ನಂದನಕೆ ೧

ವಚ್ಚೇರೆಗಂಗಳ ವಾರಿಜಮುಖಿಯರು ನಿಚ್ಚಳಾಂಗದ ನೀರೆಯರು
ಹೆಚ್ಚ ಹಿರಿಯ ಹೆಂಗಳ ರನ್ನೇರು ಬೆಚ್ಚದೆ ಬೆರೆದು ನಡೆದರು ೨

ಮಲ್ಲಿಗೆನನೆ ಮುದ್ದುಮುಖಮಾಲೆ ಗಂಧೇರು
ಚೆಲ್ಲೆಗಂಗಳ ಚೆಲ್ವೆಯರು
ಫುಲ್ಲಶರನ ಮದದಾನೆಯಂತೊಲೆವುತ
ಎಲ್ಲರೈದಿದರು ನಂದನಕೆ ೩

ಕಳಕೀರವಾಣಿಯರು ಕಾಳಾಹಿವೇಣಿಯರು
ಕಳಕಳಿಸುವ ವದನೆಯರು
ಕಳಸಕುಚದೋರು ಕಂಬುಕಂಧರೆಯರು ಕುಂತಳಕಾಗಿ ನಡೆದರು ೪

ಕುಟಿಲಕುಂತಳೆಯರು ಕೋಮಲಾಂಗಿಯರು
ಚೆಂದುಟಿ ಚೆಲುವಿನ ಬಾಲೆಯರು
ಬಟ್ಟ ಪೊಂಬೊಗರಿಯ ಕುಚದ ಬಾಲಕಿಯರು
ನಟನೆಯಿಂದೆಲ್ಲ ನಡೆದರು ೫

ಒಬ್ಬರ ಹೆಗಲಲ್ಲಿ ಒಬ್ಬರ ನಳಿತೋಳಿಟ್ಟು
ತಬ್ಬುತ ತಾಗೊಲವುತಲಿ
ಕಬ್ಬುವಿಲ್ಲನ ಕೋಲಾಹಲ ಉಲ್ಲಸದಿ ತಬ್ಬಿ ನಡೆದರು ನಂದನಕೆ ೬

ಸೊಕ್ಕು ನುಡಿಯೋರು ಸೊಬಗು ಮತಿಯೋರು ಕಕ್ಕಸ
ಕುಚದ ಬಾಲೆಯರು
ನಕ್ಕುನಲಿದು ನಾನಾ ಚೇಷ್ಟೆಗಳಿಂದ ಹೊಕ್ಕರು ನಂದನವನವ ೭

ಗಾಡಿಕಾರ್ತಿಯರೆಲ್ಲ ಗಮಕದಿಂದಲಿ ಒಡಗೂಡಿ
ಸರೋವರವಿಳಿದು
ಮಾಡಿದರ್ ಕೈಚಳಕವ ಜಲಕ್ರೀಡೆಯನಾಡಿದರತಿ ಹರುಷದಲಿ ೮

ಪೊಳಕುವ ಮೀನುಗಳ್ ನೀಲಕುಂತಳವು ಕಳಕಳಿಸುವ
ಕೆಂದಾವರೆ ಮೊಗ್ಗು
ಅರಳಿದಂಬುಜ ತಾರೆಗಳು ಕೋಮಲೆಯರ ನೀರಾಟವನೆ
ಕಂಡು ಹರುಷದಿ ೯

ಕೋಮಲೆಯರ ನೀರಾಟದ ರಭಸಕ್ಕೆ ತಾವರೆಗಳು ಬೆರಗಾಗೆ
ಭಾವಕಿಯರ ಮುಖವನೆ ನೋಡಿ ಅಂಬುಜ
ಹೇವದಿ ತಲೆಯ ತಗ್ಗಿದವು ೧೦

ನವರತ್ನದ ಸೋಪಾನವನೇರೋರು
ನವಯವ್ವನೆಯರ್ ಹರುಷದಲಿ
ಕಮಲಮುಖಿಯರ ಮೆಲ್ಲಡಿಗಳ ಭಾರಕ್ಕೆ
ಸಮನಾಗಿ ತೋರುತಲಿಹವು ೧೧

ತರುಣಿಯರುಟ್ಟ ತಂಗಲವಸ್ತ್ರ ಮೈಯೊಳು ಒರೆದು
ದಿವ್ಯಾಂಗ ತೋರುತಲಿ
ಗುರುಕುಚದ ಬಾಲೆಯರು ನಿಂತರು ಕಾಮನ
ಹೆರೆಯ ಕೂರಂಬಿನಂದದಲಿ ೧೨

ಬಡನಡುವಿನ ದೇವಾಂಗವನರಿದುಟ್ಟು
ಸಡಿಲಿದಾಭರಣವನಿಟ್ಟು
ನಿಡುಗುರುಳಿಗೆ ಧೂಪದ ಹೊಗೆಯನು ಕೊಟ್ಟು
ಮುಡಿದರು ತುದಿವೆಣ್ಣೆಗಂಟು ೧೩

ಪಣೆಗೆ ಕಸ್ತೂರಿಯಿಟ್ಟು ಪೂಸಿ ಶ್ರೀಗಂಧವ
ಕಣ್ಣಿಗೆ ಅಂಜನ ಹಚ್ಚಿ
ಸಂಪಿಗೆ ಮಕರಂದ ಪತ್ರಿಕೆಯನಿಟ್ಟು ಲಲನೆಯರೆಲ್ಲ ಶೃಂಗಾರದಿ ೧೪

ಆನಂದಗಾತ್ರೆಯರು ಅತಿಹರುಷದಿ ಮಧುಪಾನವ
ಮಾಡಿ ಸಂಭ್ರಮದಿ
ಧೇನುವಾ ಕೋಮಲಶ್ರವಣನಾಲಿಸುವಂತೆ
ಮಾನಿನಿಯರು ತೆರಳಿದರು ೧೫

ದರ್ಪಣವನೆ ನೋಡಿ ರಮಣಿಯರೆಲ್ಲ
ಕಂದರ್ಪನ ಮದದಾನೆಯಂತೆ
ಕರ್ಪೂರ ವೀಳ್ಯವ ಕರದಲ್ಲಿ ಪಿಡಿದು ಗುಪ್ಪವಡೆದರು ನಾರಿಯರು ೧೬

ವನಜಮುಖಿಯರು ವನಾಂತರವನು ಪೊಕ್ಕು
ಘನರಾಗದಿಂದ ಪಾಡುತಲಿ
ನಮಗೆ ತಮಗೆಯೆಂದು ಕೊಯ್ದರು ತಮ
ತಮ್ಮ ಮನಬಂದ ಫಲ ಪುಷ್ಪಂಗಳ ೧೭

ಮಿಂಡೆವೆಣ್ಣುಗಳೆಲ್ಲ ಮದವೆದ್ದು ತಮ್ಮೊಳು ಕಂಡಕಡೆಗೆ ಚೆಲ್ಲುವರಿದು
ಸೊಂಡಿಲು ಕದಳಿಯ ವನವ ಪೊಕ್ಕಂದದಿ
ಉದ್ದಂಡತನದಲಾಡುತಿಹರು ೧೮

ಅರಸನ ಮಗಳು ಚಂಪಕಮಾಲೆ ಸಖಿಯರು
ಬೆರಸಿಕೊಂಡಾಡುತಲಿಹರು
ಮರೆಸಿ ಮತ್ತೊಂದು ಕಡೆಗೆ ತಾನು ಬಂದಳು
ಹರುಷದಿಂದಲಿ ಮಂತ್ರಿ ತನುಜೆ ೧೯

ಚಿಕ್ಕ ಪ್ರಾಯದ ಕೋಮಲಾಂಗಿಯು ಹೆಮ್ಮಕ್ಕಳನಗಲಿ ತಾ ಚೂತ
ವೃಕ್ಷದ ನೆರಳಲ್ಲಿ ಮಲಗಿದ್ದಾತನ ಕಂಡು
ಬೆಕ್ಕಸ ಬೆರಗಾಗಿ ನಿಂದಳ್ ೨೦

ಅತಿಚೆಲುವ ಪುರುಷನ ಕಾಣುತ ಮೂರ್ಛೆಗತಳಾಗಿ
ತಿಳಿದು ಎಚ್ಚತ್ತು
ಪೃಥುವಿಯೊಳಗೆ ಇಂಥ ಚೆಲುವನಿಲ್ಲವೆಂದು
ಮತಿಭ್ರಮೆಯಿಂದ ನೋಡಿದಳು ೨೧

ಪಾರ್ವತಿಪತಿಯೆಂಬೆನೆ ಪಣೆಗಣ್ಣಿಲ್ಲ ವಾರಿಜೋದ್ಭವನಿವನಲ್ಲ
ನಾರಾಯಣನೆಂಬೆನೆ ಶಂಖಚಕ್ರವು ತೋರುವುದಿಲ್ಲ ಕೈಯೊಳಗೆ ೨೨

ಇಂದ್ರನೆಂಬೆನೆ ಬಿಳಿಯಾನೆ ಕೆಲದಲಿಲ್ಲ ಚಂದ್ರನೆಂಬೆನೆ ಮೃಗವಿಲ್ಲ
ಕುಂದದೆ ಲೋಕಲೋಕವ ತಿರುಗಿದ ರವಿ
ಬಂದಿಳಿದನೊ ಭೂತಳಕೆ ೨೩

ವಸುದೇವಸುತನಾತ್ಮಜ ತಾನೆಂಬೆನೆ ಕುಸುಮ
ಬಾಣವು ಕೈಯೊಳಿಲ್ಲ
ದಶದಿಕ್ಪಾಲನೊ ಯಕ್ಷಗಂಧರ್ವನೊ ಎಂದು
ವಿಸ್ಮಿತೆಯಾದಳು ವಿಷಯೆ ೨೪

ಸುತ್ತನೋಡುವಳಾರ ಸಂಚಾರವಿಲ್ಲೆನುತ
ಹತ್ತಿರೆ ಬಂದು ನಿಲ್ಲುವಳು
ಚಿತ್ತದೊಳೊಮ್ಮೊಮ್ಮೆ ನೆರೆಯ ನೇಮಿಸುವಳು
ಹೊತ್ತಲ್ಲವೆಂದು ಸಾರುವಳು ೨೫

ಇಟ್ಟ ಕಾಲಂದಿಗೆ ಅಲುಗದಂದದಿ ಬಂದು
ಮುಟ್ಟುವೆನೆಂದು ನಿಲ್ಲುವಳು
ದಿಟ್ಟ ಹೆಂಗಸು ಇವಳಾರೋ ಎಂಬುವನೆಂದು
ಥಟ್ಟನೆ ಕಡೆಗೆ ಸಾರುವಳು ೨೬

ಆದುದಾಗಲಿ ಇವನ ಅಗಲಲಾರೆನು
ಲಜ್ಜೆಹೋದರು ಹೋಗಲಿ ಎನುತ
ಪಾದದಿಂದಿಡಿದು ಮಸ್ತಕ ಪರಿಯಂತರ
ಭೇದಿಸಿ ನೋಡಿದಳವನ ೨೭

ಸೊಗಸಿಂದ ನಿದ್ರೆಗೈದಿಂದುಹಾಸನು ತೊಟ್ಟ
ಚೊಗೆಯ ಕುಪ್ಪಸದ ಕೊನೆಯಲ್ಲಿ
ಬಿಗಿದುಕಟ್ಟಿರ್ದ ಪತ್ರಿಕೆಯನ್ನುಮೆಲ್ಲನೆ ತೆಗೆದುಕೊಂಡಳು
ಮಂತ್ರಿ ತನುಜೆ ೨೮

ನಿದ್ರೆಯ ತಿಳಿದು ಎಚ್ಚೆತ್ತು ನೋಡುವನೆಂದು
ಹೊದ್ದಿದ್ದ ಲಜ್ಜೆ ಭಾವದಲಿ
ಸದ್ದು ಮಾಡದೆ ಸಂಪಿಗೆ ವೃಕ್ಷವನೆ
ಸಾರ್ದುಮುದ್ರೆಯೊಡೆದಳಂಬುಜಾಕ್ಷಿ ೨೯

ನೋಡಿದು ತಮ್ಮ ತಂದೆಯ ಸ್ವಹಸ್ತದ
ಮೋಡಿಯ ಬರೆದ ಬರಹನು
ರೂಢಿಯೊಳತಿ ಚೆಲುವ ಇವನೆಂದು ಕಳುಹಿದನಾ
ಮಾಡಿದ ಸುಕೃತದ ಫಲದಿ ೩೦

ಶ್ರೀಮತು ಮಂತ್ರಿ ದುಷ್ಟಬುದ್ಧಿ ಮದನಗೆ
ನೇಮಿಸಿ ಕಳುಹಿದ ಕಾರ್ಯ
ಸೀಮೆಗರಸು ಇವನಹನು ಕಾಣುತ ಶೀಘ್ರ
ವಿಷವ ಕೊಡುವುದುತ್ತಮವು ೩೧

ಒಂದು ಲಿಖಿತ ಸಹಸ್ರ ಲಿಖಿತವು ಎಂದು
ಭಾವಿಸಿ ನಿನ್ನ ಮನದಿ
ಸಂದೇಹವಿಲ್ಲದೆ ವಿಷವ ಕೊಡುವುದು
ಮುಂದಕ್ಕೆ ಲೇಸುಂಟು ನಮಗೆ ೩೨

ವಿಪ್ಪನ್ನವಾಗಿರ್ದ ವರನ ಕಾಣುತ
ನಮ್ಮಪ್ಪನವರು ಕಳುಹಿದರು
ತಪ್ಪುಂಟು ಇದರೊಳು ಕೆಡುವುದು ಕಾರ್ಯ
ಕೈತಪ್ಪೆಂದು ಮನದಲ್ಲಿ ತಿಳಿದು ೩೩

ವಾಕಾರವನೆ ಚೆಳ್ಳುಗುರಿಂದಲಿ ತಿದ್ದಿ ಯೇಕಾರವನೆ ಮಾಡಿದಳು
ಜೋಕೆಯಿಂದಲಿ ಎಂದಿನಂದದಿ ಕಟ್ಟಿ ವಿರಹಾಕಾತುರದಿಂದ
ಮರುಗಿದಳು ೩೪

ತೆಗೆದು ಚಾಪವ ಕಿವಿಗೇರಿಸಿ ಮನ್ಮಥ ಬಿಗಿದು
ಕಟ್ಟಿದ ಭರದಿಂದ
ತಗುಲಿತು ಎದೆಗೆ ಕೂರಂಬು ಬೆನ್ನಲಿ ತಟ್ಟುಗಿಯಿತು
ತಲೆಯನು ಎತ್ತಿ ೩೫

ಹಿಂದಕ್ಕೆ ಹೆಜ್ಜೆಯನಿಡುವರೆ ಕಾಲೇಳವು ನಿಂದು
ನಿಂದೊಮ್ಮೆ ನೋಡುವಳು
ಹೊಂದಿತು ಇಂದುಹಾಸನ ಮೇಲೆ ಚಿತ್ತವು
ಕಂದಿ ಕಾತರಿಸುತಲಿಹಳು ೩೬

ಮದನವಿಕಾರದಿಂದಲಿ ಮೋಹನಾಂಗಿಯು
ಬೆದರಿದ ಹುಲ್ಲೆಯಂದದಲಿ
ನದರುದಪ್ಪುವಳು ನಿಲ್ಲುವಳು ನಾಚುವಳೊಮ್ಮೆ
ಹೃದಯ ಸಂಚಲಿಸುತಲಿಹಳು ೩೭

ಮನವ ಬೇರಿಟ್ಟು ಮಾತಾಡಳೆಲ್ಲರ ಕೂಡೆ ವಿನಯದಿ
ಹುಸಿ ನುಡಿಗಳನು
ಮನ್ಮಥ ತಾಪದ ಬೆಮರ್ವನಿಗಳಿಂದ ನೆನೆದವು
ಉಟ್ಟ ದೇವಾಂಗ ೩೮

ಹೇಳದಿದ್ದರೆ ಹುಸಿವುದೆ ಈ ವಾರ್ತೆಯು ಗಾಳಿಗೆ
ಪರಿಮಳ ಮಾಜುವುದೆ
ದಾಳಿಂಬ ಪಕ್ವವಾದರೆ ಬಾಯ ಬಿರಿಯದೆ ನಾಳೆ
ತುಬ್ಬುವುದು ಈ ಸುದ್ದಿ ೩೯

ಇವಳ ಮನೋಭೀಷ್ಟ ಆಯತವಾದರೆ
ಚಂದ್ರಮೌಳೇಶನ ಸತಿಗೆ
ಬಹು ವಿಧದಿಂದ ಅರ್ಚನೆ ಮಾಡಿಸುವೆನೆಂದು
ಯುವತಿಯರು ಹೊತ್ತರು ಹರಕೆಯನು ೪೦

ಗುಟ್ಟಿನಿಂದಲಿ ಇಂದುಹಾಸಗೆ ಬಹು ಮನವಿಟ್ಟ
ಬಾಲೆಯನೊಡಗೊಂಡು
ಗಟ್ಟಿಕಂಕಣದ ನಾರಿಯರೆಲ್ಲರು ತಾವು ಪಟ್ಟಣಕಾಗಿ ನಡೆದರು ೪೧

ಕುಡಿತೆಗಂಗಳ ಕೋಮಲೆಯರೆಲ್ಲರು ಎಡಬಲದಲಿ ಕರವಿಡಿದು
ನುಡಿಸುತ ಮಾತಾಡಿಸುತ ಮೆಲ್ಲಮೆಲ್ಲನೆ
ನಡೆತಂದರವರವರ ಮನೆಗೆ ೪೨

ಅರಮನೆ ಹೊಕ್ಕಳು ಮಂತ್ರಿಯ ತನುಜೆ
ಉಪ್ಪರಿಗೆಯನೇರಿ ಮನ್ಮಥ
ನುರುಹಿನ ಬಾಣದಿಂದಲಿ ಇಂದುಹಾಸನ ಬರವ
ನೋಡುತಿರ್ದಳಬಲೆ ೪೩

ಹಾಸೋರು ತಳಿರ ಹಾಸಿಕೆಗಳ ಸಖಿಯರು
ಬೀಸಣಿಗೆಯಲಿ ಬೀಸುವರು
ಲೇಸಾದ ಪನ್ನೀರ ಚಳೆಯವ ಕೊಡುವರು
ಆಪತ್ತು ಅಳಲುವಳೊಮ್ಮೆ ೪೪

ವೀಣೆಯ ನುಡಿಸಲೊಲ್ಲಳು ಇಂದುಮುಖಿ
ಸರ್ಪವೇಣಿಯರೊಡನೆ ಮಾತಾಡಳ್
ಆನಂದದಿಂದಲಿ ಗಾನವ ಮಾಡಳು ಪಂಚಬಾಣನುರುಹು
ಘನವಾಗಿ ೪೫

ಸಾರಂಗ ಎರಳೆ ಜವಾಜಿಯ ಮರಿಯನು ತೋರದೆ
ಮರೆಯ ಮಾಡುವಳು
ನೀರಜಮುಖಿಯರೆಲ್ಲರು ಕೂಡಿ ಶೈತ್ಯೋಪಚಾರವ
ಮಾಡುತಲಿಹರು ೪೬

ಅಂಗಜನಟ್ಟುಳಿ ಅತಿಘನವಾಗಿರೆ ಶೃಂಗಾರವನವನೆ ಹೊಕ್ಕು
ಭೃಂಗದ ರಭಸಕ್ಕೆ ಕೋಕಿಲೆ ಸ್ವರಗಯ್ಯೆ ಅಂಗಜ ತಾಪವು ಹೆಚ್ಚೆ ೪೭

ಹರನ ಕೋಪದಿ ಸಿಕ್ಕಿ ಜ್ವಾಲೆಯೊಳುರಿದವ ಏಕೆ
ಪುಟ್ಟಿಸಿದನೊ ಯೌವನಕೆ
ಸರ್ವಗ್ರಾಸವ ಮಾಡಲಿ ಫಣಿಚಂದ್ರ ತಿರುಗಿ
ತಾನೇಕೆ ಬಹನೊ ೪೮

ಕುಸುಮಗಂಧಿನಿ ಕಾಮಿಸಿದ ಪುರುಷ ತನ್ನ
ವಶವಾಗಬೇಕು ಎಂದೆನುತ
ಬಸವಳಿವುತಲಿ ಚಿಂತೆಯ ಮಾಡುತಲಿರೆ
ಶಶಿಹಾಸ ನಿದ್ರೆಯ ತಿಳಿದ ೪೯

ಮೈಮುರಿದೆದ್ದು ಕೊಳನ ತೀರಕೆ ಬಂದು ಕೈಕಾಲು
ಮೋರೆಯ ತೊಳೆದು
ಕೈರದಗುಳಿಗೆ ಕರ್ಪೂರದ ವೀಳ್ಯವ ಹಾಕಿ ಹಯವ
ಚಪ್ಪರಿಸಿ ಏರಿದನು ೫೦

ಸ್ವಾರಿವಂದನು ತಂಡತಂಡದಲಿ ದ್ವಾರವ ದಾಂಟಿ ನಡೆದನು
ಊರ ಹೊಕ್ಕನು ಗೋಧೂಳಿಯಿಂದಲಿ ಪಡೆಗಾರರಿಗೆ
ಬಂದಿರುವ ೫೧

ಕೇಳಿಬಲ್ಲಿರೆ ಪುಳಿಂದನಸುತ ಕರುಣಾಳು
ಶ್ರೀ ಹರಿಯ ಕಿಂಕರನು
ಆಲಸ್ಯವಾಯಿತು ಬಂದು ಮನ್ನಿಸಿ ಗೋಷ್ಠಿ ನಾಳೆ
ಆದೀತು ಚಿತ್ತೈಸು ೫೨

ಶ್ರೀಪತಿಭಜಕ ಬಂದಾಲಸ್ಯವಾಯಿತು ಈ ಪರಿಯಲಿ ಪಾದಕ್ಕೆ
ತಾಪತ್ರಯವ ಬಿಟ್ಟು ಅವನ ಮನ್ನಿಸು
ಬೇಗ ಭೂಪ ಚಿತ್ತೈಸವಧಾನ ೫೩

ಆ ಮಾತ ಕೇಳಿದಿರೆದ್ದು ಮದನ ಬಂದು
ಸೋಮಹಾಸನ ತಕ್ಕೈಸಿ
ಕ್ಷೇಮವ ಕೇಳಿ ಗದ್ದುಗೆಯ ತಂದಿರಿಸಿದ ದಾಮೋದರನ ಕಿಂಕರಗೆ ೫೪

ಇಂದಿನ ದಿವಸ ಉತ್ತಮ ನಿಮ್ಮ ದರುಶನ
ಒಂದು ಕೋಟಿ ಲಾಭವೆಂದ
ಚಂದದಲಿ ಸಿಂಹಾಸನವ ತಂದಿರಿಸಿದ ಬಂದ
ವಾರ್ತೆಯನು ಕೇಳಿದನು ೫೫

ಏಕಾಂತದಲೆನ್ನ ಕರೆದು ನಿಮ್ಮಯ್ಯ ಅನೇಕ
ಪರಿಯಲಿ ಬುದ್ಧಿಗಲಿಸಿ
ಲೋಕವರಿಯದಂತೆ ಈ ಲಿಖಿತವ ಒಯ್ದು
ಏಕಾಂತದಲಿ ಕೊಡು ಎಂದ ೫೬

ತಂದೆ ಕಳುಹಿದ ಪತ್ರಿಕೆಯ ಮದನನೊಳಿಂತೆಂದು
ತಕ್ಕೊಂಡು ಸಭೆಯಿಂದ
ಇಂದುಹಾಸನ ಕುಳ್ಳಿರಿಸಿ ತನುಜೆಗೂಡಿ ಬಂದ ತನ್ನಂತಸ್ಥಪುರಕೆ ೫೭

ಬಿಚ್ಚಿ ನೋಡಿದನು ಓಲೆಯನಾಗ ಮಂತ್ರಿಯ
ಉತ್ಸಾಹದೊಸಗೆ ಸಂಭ್ರಮವ
ಅಚ್ಚುತ ಹರಿಯ ಕಿಂಕರ ತಂಗಿಗೆ ವರನೆಂದು
ನಮ್ಮಪ್ಪ ಮೆಚ್ಚಿದ ನೀ ವರನ ೫೮

ಶ್ರೀಮತು ಮಂತ್ರಿದುಷ್ಟಬುದ್ಧಿ ಮದನಗೆ
ನೇಮಿಸಿ ಕಳುಹಿದ ಕಾರ್ಯ
ಸೀಮೆಗರಸು ಇವನಹನು ಕಾಣುತ ಶೀಘ್ರದಿ
ವಿಷಯೆ ಕೊಡುವುದುತ್ತಮವು ೫೯

ಒಂದು ಲಿಖಿತ ಸಹಸ್ರ ಲಿಖಿತವು ಎಂದು
ಭಾವಿಸಿ ನಿನ್ನ ಮನದಿ
ಸಂದೇಹವಿಲ್ಲದೆ ವಿಷಯೆ ಕೊಡುವುದು ಮುಂದಕ್ಕೆ
ಲೇಸುಂಟು ನಮಗೆ ೬೦

ಕರೆಸಿದ ಗಣಿತಜ್ಞರಿಗೆ ಗದ್ದುಗೆಯ ತಂದಿರಿಸಿ ಕುಳ್ಳಿರಿಸಿ ಕೇಳಿದನು
ಬೆರೆಸಿ ಬಂದಿದೆ ಗಣಕೂಟರಾಶಿಗಳೆಂದು ಅರಿಸಿನಗಳ ತಿವರಿದರು ೬೧

ಗುಡಿ ತೋರಣಗಳ ಕಟ್ಟಿ ಪಟ್ಟಣವನ್ನು
ತಡವಮಾಡದೆ ಸಿಂಗರಿಸಿ
ಗಿಡಿ ಬಿಡಿ ತಮ್ಮಟ ಪಂಚವಾದ್ಯಗಳು
ಉಗ್ಗಡಿಸಿತು ಕುಂತಳಪುರದಿ ೬೨

ಮಂಗಳವಾದ್ಯಗಳೆಸೆದವು ಸಖಿಯರು
ರಂಗವಾಲೆಗಳ ಹಾಕುವರು
ಅಂಗಜಸಖಿಯರು ಇಂದುಹಾಸಗೆಣ್ಣೆಯನೊತ್ತಿ
ಮೊಂಗಳಸಿಗೆಯನ್ನೆರೆದರು ೬೩

ಅಲ್ಲಿಯ ಸುದ್ದಿಯನೆಲ್ಲವ ಸಖಿಯರು
ಮೆಲ್ಲನೆ ವಿಷಯೆಗರುಹಿದರು
ಮಲ್ಲಿಗೆಗಂಧಿ ತಾ ಮನದ ವಿಕಾರವ ತಲ್ಲಣವನೆ ತಂಬಿಸಿದೊ ೬೪

ಬಿಸಿನೀರ ಮಜ್ಜನ ಎರದಿಂದುಹಾಸಗೆ
ಹೊಸಪಟ್ಟೆಯನುಡಕೊಟ್ಟು
ಎಸೆವ ಮಾಣಿಕ ಹೊನ್ನಪದಕವ ಕೊಟ್ಟರು ನೊಸಲಿಂಗೆ
ಬಾಸಿಂಗ ಕಟ್ಟಿ ೬೫

ನಂಬಿದ ಭಕ್ತ ಕುಟುಂಬಿ ರಕ್ಷಕನಹುದೆಂಬ ಹೆಳವನಕಟ್ಟೆ ರಂಗ
ಬೆಂಬಿಡದಲಿ ಇಂದುಹಾಸನ ಮದುವೆಗಾರಂಭಗಳನೆ
ಮಾಡಿಸಿದ ೬೬

## ನಾಲ್ಕನೆಯ ಸಂಧಿ

ವಿಷಯೆ ಚಂಪಕಮಾಲಿನಿಗೆ ಪುರುಷನಾಗಿ
ಶಶಿಹಾಸ ಕಾಳಿಯನೊಲಿಸಿ
ಅಸುವ ಪಡೆದ ಮಾವಭಾವನ ಜಗಕತಿ
ಪೊಸತಾಗಿ ತೋರಿತಾಶ್ಚರ್ಯ

ಮತ್ತೆ ಕೇಳಯ್ಯ ಅರ್ಜುನ ಇಂದುಹಾಸಗೆ
ಮಿಥ್ಯದ ವಿಷವನು ಉಣಿಸಿ
ಹತ್ಯವ ಮಾಡಿ ಕೊಲ್ಲುವೆನೆಂದು ನೇಮಿಸೆ
ಕೃತ್ಯವೆ ಪಥ್ಯವಾದುದನು ೧

ಕುಂತಿಯಾತ್ಮಜ ಕೇಳು ಇಂದುಹಾಸಗೆ ಲಕ್ಷ್ಮೀಕಾಂತನ
ಕರುಣದ ಬಗೆಯ
ಕುಂತಳೇಂದ್ರನ ಸುಕುಮಾರಿ ಚಂಪಕಮಾಲೆ ಮಂತ್ರಿಯ
ತನುಜೆಯು ವಿಷಯು ೨

ಇಂದುಹಾಸನ ಸಿಂಗರಿಸಿ ಭಾವಕಿಯರು
ಬಂದರು ವಿಷಯೆ ಇದ್ದೆಡೆಗೆ
ಮಂದಗಮನೆ ಮಾತಾಡಲೊಲ್ಲಳು ಲಜ್ಜೆಯಿಂದತ್ತ
ತಲೆಯ ತಗ್ಗುವಳು ೩

ನಿನ್ನ ಮನೋಭೀಷ್ಟೆ ಆಯಿತವ್ವ ತಾಯಿ
ಪನ್ನಗಧರನ ಕೃಪೆಯಿಂದ
ಇನ್ನೇಕೆ ಮನದ ಸಂಶಯವೆಂದು ಸಖಿಯರು
ಸನ್ಮಾನವನೆ ಮಾಡಿದರು ೪

ಬಾರವ್ವ ತಾಯಿ ಮಜ್ಜನವ ಮಾಡೇಳೆಂದು
ಜಾರಿದ ಕುರುಳನೋಸರಸಿ
ವಾರಿಜಮುಖಿಯರು ಒಡಗೊಂಡು ಬಂದರು
ಚಾರುಮಾಣಿಕಖಚಿತ ಪೀಠಕ್ಕೆ ೫

ಪರುಷದ ಕಣಿಯ ತಂದಿರಿಸಿ ಕುಳ್ಳಿರಿಸೋರು
ಹರಸಿ ಅಕ್ಷತೆಗಳನಿಟ್ಟು
ಸರಸದಿ ಮುಡಿ ಬಿಚ್ಚಿ ಸಂಪಿಗೆಣ್ಣೆಯನೊತ್ತಿ
ಅರಸಿನಗಳ ತಿವರಿದರು ೬

ಕನ್ನಡಿ ಕದಪಿನಂಗನೆಗೆ ಮಜ್ಜನ ಮಾಡಿ ಪೊನ್ನ
ತಂಬಿಗೆಯ ಲೋಕುಳಿಯ
ರನ್ನದುಟಿಯರು ರಾಜೀವಮುಖಿಯರು
ಬೆನ್ನಲೋಕುಳಿಯನೆರೆದರು ೭

ಮುಡಿಮೈಗಳನೋಸರಿಸಿ ದುಕೂಲವ ಬಡನಡುವಿಗೆ ಅಳವಡಿಸಿ
ಜಡಿತದಾಭರಣಕರಡಿಗೆಯನು ತಂದಿಡುವರು ಇಕ್ಕೆಲದಲ್ಲಿ ೮

ಪೀಠದ ಮೇಲೆ ಕುಳ್ಳಿರಿಸಿ ಮಂಡೆಯ ಹಿಕ್ಕ
ಪಾಟಿಸಿ ತುರುಬನೋಸರಿಸಿ
ಮೀಟಾದ ಮಾಣಿಕ್ಯ ಮುತ್ತಿನಬಟ್ಟು ಲಲಾಟ
ಮಧ್ಯದಲಿ ಇಡುವರು ೯

ಕಂಜಲೋಚನೆಗೆ ಅಂಜನ ಹಚ್ಚಿ ಕರ್ಣವ ರಂಜಿಸಿ
ಬೆಳಗುವ ಮೂಗುತಿಯ
ಪಂಜಿನೋಲೆಯ ಮುತ್ತಿನ ಕೊಪ್ಪನಿಡುವರು
ಮಂದ ಗಮನೆಯರು ಹರುಷದಲಿ ೧೦

ಅಗರುವ ಎಳೆ ಸಂಪಿಗೆಯ ನಾಸಿಕದಲ್ಲಿ ಹೊಳೆವ
ಮೂಗುತಿಯನಿಕ್ಕುವರು
ಕೋಕಿಲಗಾನೆ ಕುಟಿಲಕುಂತಳದಾನೆ ಬಾಗಿದ ಬಾವುಲಿಗಳಲಿ ೧೧

ಇಟ್ಟರು ತೋಳ ಚಳರಕ್ಷೆ ಮಣಿಗಳ ಗಟ್ಟಿಕಂಕಣ ಚಳಕಗಳ
ಉಟ್ಟರೇಕೆಯ ಹಿಡಿವಾಳ ಕಡಗ ಅಳವಟ್ಟಿಹ
ಬೆರಳ ಮುದ್ರಿಕೆಯು ೧೨

ಎಡೆಯೆಡೆಗೆ ವಜ್ರದಡಿಗೆ ಕದಂಬವ
ಕಡಗ ಮುತ್ತಿನ ಹತ್ತೆ ಕಡಗ
ಎಡೆಪಣಿಚಿಂತಾಕದ ಸರಿಗೆಯ ತಂದಿಡುವರಂಗನಗೆ
ನಾರಿಯರು ೧೩

ಹೊರಹೊಮ್ಮುವ ಕುಚ ಮಧ್ಯದಲಿ ಪಚ್ಚೆಸರ
ಕಂಠೀಸರ ಬಿಲ್ಲಸರವು
ಕರಹರಿನಡುವಿಗೆ ಇಟ್ಟರು ಕಾಂಚೀದಾಮ
ಸರಸಿಜ ಗಂಧಿಯರೊಲಿದು ೧೪

ಬಾಳೆಯ ಕದಳಿಯ ಹೋಲುವ ತೊಡೆ
ಕಣಕಾಲುಗಳೆಸೆವ ಭಾವಕಿಯ
ಸಾಲುಗಂಟೆ ಗೆಜ್ಜೆ ಸರಪಳಿ ಘಲಿರೆಂಬ ಕಾಲಂದಿಗೆಯನಿಡುವರು ೧೫

ಕೆಂದಾವರೆಯ ಪೋಲುವ ಪಾದಾಂಗುಲಿ
ಉಂಗುರ ಮುದ್ರಿಕೆಯಿಟ್ಟು
ಚಂದದಿಂದಲಿ ಮೀಂಟುಕಿರಿಪಿಲ್ಲಿ ಎಲ್ಲವು
ಮಂದಗಮನೆಗೆ ಒಪ್ಪಿದವು ೧೬

ಬಾವನ್ನ ಪರಿಮಳ ಪುನುಗು ಲೇಪನವು
ಸಾರಿಸಿ ಅಂಗಕ್ಕೆ ತಿಗುರಿ
ಸುವರ್ಣವಾದ ಮಾಣಿಕ ಮುತ್ತು ಖಚಿತದ
ಹಾವುಗೆಯನ ಮೆಟ್ಟಿಸಿದರು ೧೭

ನಾರಿಯರೆಡಬಲದಲಿ ಕರವಿಡಿಯಲು ಚಾರುವದನೆ ಚಂಚಲಾಕ್ಷಿ
ಆರಡಿಗುರುಳಿನ ಅಲಸದೆ ಮಣಿಯ
ಬಂದೇರಿದಳೊಜ್ರದಂದಣವ ೧೮

ಮುತ್ತೈದೆಯರು ಮಂಗಳಗೀತ ಪಾಡುತ
ಹೊತ್ತರು ಕಳಸ ಕನ್ನಡಿಯ
ಇತ್ತರದಲಿ ಚಾಮರ ಢಾಳಿಸುವರು
ಹೊತ್ತಿದ ಕಾಳಂಜಿಯವರು ೧೯

ಹೆಗಲೆ ಪಂಜುಗಳು ಹಚ್ಚಿದ ದೀವಿಗೆಯು
ಜಗಜಗ ಬೆಳಕುಗಳು ತುಂಬಿ
ಜಗಜಗಿಸುವ ಜೊ–ಂಪಿನ ಸುರೆಪಾನವು ನೆಗಪಿದವಗಣಿತವಾಗ ೨೦

ಇದಿರಲಿ ನಲಿವ ನಾಲುಕು ಸಾಲೆ ಹೆಂಗಳು
ಉದುರು ಬಾಣ ಪುಷ್ಪಬಾಣ
ಮಧುರಸ್ವನದಿ ಪಾಡುವ ಭಾಗವತಜನ
ಸದನದಿ ನಡೆತಂದಳಬಲೆ ೨೧

ತಂಡತಂಡದಿ ಕದಲಾರತಿಯನು ಎತ್ತಿ
ಹೊನ್ನಂದಣವನೆ ಇಳಿಸುವರು
ಕಂದರ್ಪಕನ ಮದಕರಿಯಂತೆ ಒಲೆವುತ
ಬಂದಳು ವಿವಾಹ ಮಂಟಪಕೆ ೨೨

ಸಡಿಲಿಸಿ ಮೈಯ ಹೊದಿಕೆಯ ಮದನಗಿತ್ತು
ಮಡಿವರ್ಗದಲ್ಲಿ ಕುಳ್ಳಿರ್ದು
ತಡೆಯದೆ ಚಿನ್ನದ ಗಿಂಡಿಯಲುದಕವ
ಪಿಡಿದಳು ಮದನನರ್ಧಾಂಗಿ ೨೩

ಬಂಧುವರ್ಗ ಬ್ರಹ್ಮಸಭೆಯ ಮಧ್ಯದಲಿ
ಮುಕುಂದಗರ್ಪಿತವಾಗಲೆಂದು
ಗಂಧವ ಪೂಸಿ ಅಕ್ಷತೆಯನು ಪಣೆಗಿಟ್ಟು
ಮಂದಾರಮಾಲೆ ಹಾಕಿದರು ೨೪

ತೆರೆಯ ಹಚ್ಚಡವನ್ನು ಹಿಡಿದು ದಂಪತಿಗಳ
ಪೊರೆಯಲಿ ತಂದು ನಿಲ್ಲಿಸಿದರು
ಧುರಧೀರ ಇಂದುಹಾಸನ ಕುಲಗೋತ್ರವ
ಅರುಹಬೇಕೆಂದು ಕೇಳಿದರು ೨೫

ಎನ್ನ ಪವಿತ್ರ ಮಹಾಪಿತ ಪರೇಪಿತ ಸಂಪನ್ನಶಯನ ಶ್ರೀಹರಿಯು
ಎನ್ನದು ವಾಮಗೋತ್ರವು ಪುಳಿಂದನು
ಎನ್ನ ಪರಮ ಗುರುವೆಂದ ೨೬

ಕ್ರಮದಿಂದ ಮಧುಪರ್ಕವನೆ ಮಾಡಿದರತಿ
ಸಮಯವು ಲಗ್ನವೆಂದೆನುತ
ರಮಣಿಯ ಕರೆದು ಮಂಗಳಾಷ್ಟಕವನು
ಬ್ರಾಹ್ಮಣೋತ್ತಮರು ಹೇಳಿದರು ೨೭

ಪುರೋಹಿತರು ಕನ್ಯಾರ್ಥವ ಹೇಳಲು
ಸಮಯವು ಲಗ್ನವೆಂದೆನುತ
ಪಿಡಿದ ತಂಡುಲ ಇಂದುಹಾಸನು ಶೀಘ್ರದಿ ಮಡದಿಯ
ಮೇಲೆ ಸೂಸಿದನು ೨೮

ರತ್ನಕಂಕಣವನ್ನು ಕರದಿ ಧಾಳಿಸುತ
ಶತಪತ್ರನಯನೆ ಸಮಗಾತ್ರೆ
ಚಿತ್ತದೊಲ್ಲಭನ ಮಸ್ತಕದಿ ತಂಡುಲವ
ಚಮತ್ಕಾರದಿಂದ ಸೂಸಿದಳು ೨೯

ಬಡನಡುವಿನ ಭಾವಕಿಯರು ಶಕುನದ
ಸೊಡರುಗಳನೆ ಹಚ್ಚುವರು
ಅಡರುವ ಮಿಂಚಿನಂದದ ನೋಟದ ಬಾಲೆಯರು
ಪಿಡಿದರು ಇತ್ತಂಡದಲ್ಲಿ ೩೦

ಹೆತ್ತುಪ್ಪ ಕ್ಷೀರದಲಿ ಚೆಟ್ಟನೆ ಹೊಯ್ದಿದರು
ಮುತ್ತೈದೆಯರೆಲ್ಲ ಅಲಂಕರದಿ
ಹತ್ತುಸಾವಿರ ಹೊಸ ಮೊರದ ಬಾಗಿನವ ತಂದಿತ್ತಳು
ವಿಷಯೆ ಸಂಭ್ರಮದಿ ೩೧

ಇತ್ತ ತಾವ್ವ ಎನುತ ಮದವಳಿಗೆಯ ಎತ್ತಿ
ಕೈಯಿಂದ ತೋರುವರು
ಸುತ್ತ ನಕ್ಷತ್ರದ ಮಧ್ಯದಿ ಕಂಡಳು ಪ್ರತ್ಯಕ್ಷದಿಂದರುಂಧತಿಯ ೩೨

ಕನಕದ ಹಸೆಯ ಮೇಲೆ ಕುಳ್ಳಿರಿಸೋರು
ದಿನಕರ ಪ್ರತಿಬಿಂಬದಂತೆ
ವನಿತೆ ಸಾಜದಿ ತಂಡುಲವಿಟ್ಟು ಹೋಮಕ್ಕೆ
ಅನುಕೂಲಗಳನೆ ಮಾಡಿದರು ೩೩

ಆಜ್ಯತಂದವರಿಗೆ ಉಡುಗೊರೆ ಇತ್ತನು ಪೂಜೆ
ಮಾಡಿದನು ಶ್ರೀಪತಿಯ
ಆಜ್ಯತಂಡುಲ ಆಪೋಶನೆ ಮಾಡಿದ ನಿರ್ಜರಪತಿ ಮೆಚ್ಚುವಂತೆ ೩೪

ತಡವ ಮಾಡದೆ ಠಾಣ ದೀವಿಗೆಯನು ಹಚ್ಚಿ
ಎಡೆಮಾಡಿ ಚಪ್ಪರದೊಳಗೆ
ಬಿಡಿಮುತ್ತಿನ ಹಸೆಯ ಮೇಲೆ ದಂಪತಿಗಳ ಒಡನೆ
ಭೋಜನಕೆ ಕುಳ್ಳಿರಿಸಿ ೩೫

ಉಪ್ಪಿನೆಸರುಕಾಯಿ ಪರಿಪರಿ ಶಾಕವು ಹಪ್ಪಳ ಬಾಳಕಗಳನು
ಅಪ್ಪಲು ಅತಿರಸ ಸೂಪಾಕ್ಷತಶಾಲ್ಯನ್ನ ಚಪ್ಪರದಲಿ ಬಡಿಸುವರು ೩೬

ಕಾಮಿನಿಯರು ಕನಕದ ಹರಿವಾಣದಿ ಶಾವಿಗೆ ಪರಮಾನ್ನಘೃತವ
ಭಾವಕಿಯರು ಮಂಗಳ ಧವಳವ ಪಾಡಿ
ಭೂಮಕ್ಕೆ ಬಡಿಸಿದರಾಗ ೩೭

ಆಜ್ಯದಿಂದಲಿ ಆಪೋಶನೆ ಎರೆದಳು ರಾಜೀವ
ಮುಖಿ ತನ್ನ ಪತಿಗೆ ಮ–
ಹಾಜನರೆಲ್ಲ ಉಂಡು ಕೈತೊಳೆದರು ಹೂಜಿಯಲ್ಲುದಕವ ಪಿಡಿದು ೩೮

ಜಂಬುಖಾನ ರತ್ನಗಂಬಳಿಯನು ಹಾಕಿ
ತುಂಬಿದ ವಿಪ್ರರ ಕುಳ್ಳಿರಿಸಿ
ತಾಂಬೂಲ ದಕ್ಷಿಣೆ ಕೊಡಲು ಮಂತ್ರಾಕ್ಷತೆ
ಸಂಭ್ರಮದಿಂದ ಸೂಸಿದರು ೩೯

ಭೂಸುರ ಬಂಧುವರ್ಗವನೆಲ್ಲ ನೇಮಿಸಿ
ವಾಸುದೇವ ಕೃಷ್ಣ ಎನುತ
ಹಾಸು ಮಂಚದ ಮೇಲೆ ಪವಡಿಸಿದ ಮದನ
ವಿಲಾಸದಿಂದಲಿ ನಿದ್ರೆಗೈದ ೪೦

ಅರುಣೋದಯವಾಯಿತು ಹೆಬ್ಬೇರಿಯು
ಪುರದೊಳಗೆಲ್ಲ ಮೆರೆದವು
ಅರಳಿದವಾಗ ಅಂಬುಜ ಸರೋವರದಲ್ಲಿ
ಮರಿದುಂಬಿಗಳು ಝೇಂಕರಿಸೆ ೪೧

ಮೇರುಗಿರಿಗೆ ಕಳಸವನಿಟ್ಟ ತೆರನಂತೆ ಸೂರ್ಯನ
ಉದಯ ಕಾಲದಲಿ
ಚಾರುಹಾಸನ ಮಸ್ತಕದ ಬಾಗಿದ ರತ್ನ
ತೋರಿತು ಧರೆಗೆ ರಂಜಿಸಿತು ೪೨

ಪಂಚರತ್ನಗಳಿಂದ ಹೊಳಲ ಬರೆದರು
ಚಂಚಲಾಕ್ಷಿಯರು ಸಿಂಗರದಿ
ಮಿಂಚುವ ಕಳಸ ಕನ್ನಡಿಗಳ ಪಿಡಿದರು
ಅಂಚೆಗಾತಿಯರು ಹರುಷದಲಿ ೪೩

ಹೊಳಲ ಹೊಕ್ಕವರಿಗೆ ಉಡುಗೊರೆ ಕೊಟ್ಟರು
ಕಳಸ ಕನ್ನಡಿಗಳ ಪಿಡಿದು
ಬರೆದರು ಬಣ್ಣದಾನೆಗಳನ್ನು ಭೂಸುರರೆಲ್ಲ
ತಳಿದರು ಮಂತ್ರಾಕ್ಷತೆಯ ೪೪

ಕೀಲಾರು ಹಾಸುಮಂಚವು ಕರಬಾನು ಶಾಲು ಸಕಲಾಭರಣವು
ಸೋಲು ಮುಡಿಯಲಿ ಕರೆದು ಮನ್ನಿಸಿ
ವಿಶಾಲದಿಂದಲಿ ತಂಗಿಗಿತ್ತ ೪೫

ಪುರೋಹಿತರಿಗೆ ಮೇಣ್ ವಿದ್ಯದವರಿಗೆ
ಶೂರತ್ವದಲಿ ಪಾಡುವರಿಗೆ
ವರಕವಿಗಳಿಗೆ ವಿಭವದಿ ಮದನ ಅಪರಿಮಿತ
ಹಣ ಹೊನ್ನ ಕೊಟ್ಟ ೪೬

ಭಂಡಾರವನೊಂದು ತೃಣವೆಂದು ಭಾವಿಸಿ
ತೆಕ್ಕೊಂಡು ಧನಲಯವ ಮಾಡಿದನು
ಅಂಡಲದತ್ತ ಪುಳಿಂದನ ಮಂತ್ರಿಯು ಹಿಂಡಿ
ಹಿಪ್ಪೆಯ ಮಾಡಿದನು ೪೭

ಬಟ್ಟೆಯೊಳಿರ್ದ ದೇಶಿಗನ ನಿನ್ನ ಮಗನೆಂದು
ಪಟ್ಟವ ಕಟ್ಟಿ ನೀನವಗೆ
ಇಟ್ಟ ಆಜ್ಞೆಯಲಿ ದೇವತೆ ಬ್ರಾಹ್ಮರಿಗೆ ನೀ
ನಷ್ಟಮಾಡಿದೆ ದ್ರವ್ಯವನು ೪೮

ವಹಿಸಿ ನಿನಗೆ ರಾಜ್ಯವನಿತ್ತರಿಷ್ಟೊಂದು
ಮಹಿಷಿಪುತ್ರನಂತೆ ಕೊಬ್ಬಿ
ಜಯಿಸುವೆನೆಂದು ಮಾಡಿದ್ದಾ ನಿನ್ನೈಶ್ವರ್ಯ ಕ್ಷಯಿಸುವೆ
ನಿಮಿಷ ಮಾತ್ರದಲಿ ೪೯

ಕಡುಗೋಪದಿಂದ ಪುಳಿಂದನ ಮಂತ್ರಿಯು
ಮಡದಿ ಮಕ್ಕಳ ಸೆರೆಯಿಟ್ಟು
ಜಡಿದು ಝೇಂಕರಿಸಿ ಕಾಲಿಗೆ ನಿಗಳನು ಹಾಕಿ
ನಡೆತಂದ ಕುಂತಳಪುರಕೆ ೫೦

ಕಟ್ಟಿದವಾಗ ವಾಯಸ ಮಾರ್ಜಾಲವು
ದೃಷ್ಟಿಗಾಶ್ಚರ್ಯ ತೋರಿದವು
ದುಷ್ಟಬುದ್ಧಿಯು ಕಂಡು ಕಾತರಿಸಿ ಕಂಗೆಟ್ಟು
ಅತಿಮೋಹದಿಂದ ಮರುಗಿದನು ೫೧

ಏನಿದು ಅಪಜಯವಾಗಿ ತೋರುತಲಿದೆ
ಹಾನಿಯೇನಹುದೊ ಎನುತ
ಮಾನಿನಿ ಕೈವಶವಾಗದ ವಿಟನಂತೆ ಧ್ಯಾನವ
ಮಾಡುತ ನಡೆದ ೫೨

ಅರಿತಿಂದುಹಾಸಗೆ ವಿಷವನುಣಿಸಿದನೊ ಮರೆತನೊ
ಮದನ ಎಂದೆನುತ
ಕರಶೂಲೆಯೇನೋ ಎನುತ ಚಿಂತೆ ಮಾಡುತ
ಬರುತ ಭುಜಂಗನ ಕಂಡ ೫೩

ಅನುದಿನ ನಿನ್ನ ಭಂಡಾರವ ಕಾಯ್ದಿರ್ದೆ ನಿನ್ನ
ಮಗಲಯವ ಮಾಡಿದನು
ಎನಗೇಕೆ ಎಂದು ಭೂಬಿಲ ಹೊಕ್ಕನು
ಮನುಜರಂದದಿ ಮಾತನಾಡಿ ೫೪

ಬೆರಗಾಗಿ ಏನು ಕಾರಣ ಕುಂತಳ ಪುರಕಾಗಿ
ತಾನು ಬರುತಿರಲು
ಪರಿಪರಿಯಲಿ ವಾದ್ಯರಭಸವ ಕಂಡನು ಕರೆದು
ಕೇಳಿದನು ಬೇಗವರ ೫೫

ಮದನನ ತಂಗಿ ವಿಷಯೆ ಇಂದುಹಾಸನ
ಮದುವೆಯ ಸಂಭ್ರಮವೆನಲು
ಎದೆಯೊಳು ಅಲಗು ನೆಟ್ಟಂದದಿ ಮಂತ್ರಿಯು
ಬೆದರಿ ಅಂದಣವನ್ನು ಇಳಿದ ೫೬

ತೋರ್ದ ಯುಕ್ತಿಯ ಮಾಡಲಿಲ್ಲ ಎನ್ನೊಳು ಮಾತ
ಮೀರ್ದನು ಮದನ ಎಂದೆನುತ
ಕಾರ್ದನು ಕಂಗಳೊಳಗೆ ಕಿಡಿಗಳ ಮಂತ್ರಿ ಚೀರ್ದನು
ಕಡು ಕೋಪದಿಂದ ೫೭

ತಂದೆಯ ಅಂದಣಕಿದಿರಾಗಿ ಮದನನು
ಬಂದು ಚರಣಕ್ಕೆರಗಿದನು
ನಿಂದಿರಬೇಡ ಎನ್ನಿದಿರಲಿ ಹೋಗು ಹೋಗೆಂದು
ಧಿಕ್ಕರಿಸಿದ ಮಗನ ೫೮

ಪೊಡವಿಗೆ ಅಧಿಪತಿಯನು ಮಾಡೇನೆನುತಿರ್ದೆ
ಜಡಮತಿ ನಿನಗೆ ದೊರಕುವುದೆ
ಕೆಡಿಸಿದೆ ಕಾರ್ಯವ ಕುಲಗೇಡಿ ನಿನಗೆ ಅಡವಿ
ಅರಣ್ಯವೆ ಗತಿಯು ೫೯

ಮುನ್ನ ಶ್ರೀರಾಮ ತಂದೆಯಾಜ್ಞೆಯಿಂದಲಿ
ಮನ್ನಿಸ್ಯಾರಣ್ಯಕೈದಿದನು
ಎನ್ನ ತಂಗಿಯ ಮದುವೆಯ ಮಾಡಿ ಮನ್ನಿಸ್ಯಾರಣ್ಯಕೈದುವೆನು ೬೦

ಅಪರಾಧವೇನು ಎನಗೆ ನೀವು ಕಳುಹಿದ
ಗುಪಿತದ ಲಿಖಿತವ ನೋಡಿ
ಚಪಲಾಂಬಿಕೆಯ ಇಂದುಹಾಸಗಿತ್ತೆನಿಂಥ
ವಿಪರೀತವಹುದನರಿಯೆ ೬೧

ತರಿಸಿದನಾಗ ಓಲೆಯ ಮಂತ್ರಿಯು ನೋಡಿ
ಒರೆಸಿ ತಿದ್ದಿದರೆಂಬೊದರಿಯ
ಪುರುಷನ ಪುಣ್ಯವ ಕಂಡವರಾರುಂಟು
ಬರಸಿದನೊಕ್ಕೈಯ ತಪ್ಪ ೬೨

ಪಾಡುತಾಕ್ಷತೆ ಆರತಿ ಮಾಡುವರನ್ನು ಬೇಡ
ಹೋಗೆಂದು ಗರ್ಜಿಸಿದ
ಜೋಡಾಗಿರ್ದ ದಂಪತಿಗಳು ಬಂದೆರಗಲು
ನೋಡಿದ ಕ್ರೂರ ದೃಷ್ಟಿಯಲಿ ೬೩

ಕರುಣವಿಲ್ಲದೆ ದುಷ್ಟಬುದ್ಧಿ ಇಂದುಹಾಸನ.
ಮುರಿದು ನುಂಗುವೆನೆಂಬ ಭರದಿ
ಅರಗಿಳಿಗಳ ಬಾವುಗ ಬೆಕ್ಕು ನೋಡಿದ ತೆರನಂತೆ ನೋಡಿದನವರ ೬೪

ಒದಗಿ ಆರತಿ ಅಕ್ಷತೆಯ ಮಾಡುವರನ್ನು
ಗದರಿಸಿ ಬೇಡ ಹೋಗೆಂದು
ಹದನ ಹೇಳುವೆ ಇಂದುಹಾಸಗೆ ಮನೆಯೊಳು
ವಿಧವೆ ಆಗಿರಲೆಂದು ಮಗಳ ೬೫

ಊಳಿಗದವರಟ್ಟಿ ಕರೆಸಿದನಾಗ ಚಾಂಡಾಲರಿಗರುಹಿ ಬೇಗದಲಿ
ಕಾಳಿಯ ಗುಡಿಯಲ್ಲಿ ಖಡ್ಗಧಾರಿಗಳಾಗಿ
ಪಾಳತಿಯನು ನೋಡಿಕೊಂಡು ೬೬

ಅಂದಿನಂದದಿ ಎನ್ನೊಳೊಂಚನೆ ಮಾಡದೆ
ಬಂದವರ್‍ಯಾರಾದರವರ
ಸಂದೇಹವಿಲ್ಲದೆ ಪ್ರಾಣವನಳಿವುದು ಬಂದು
ನಮಗೆ ಹೇಳುವುದು ೬೭

ಬಾರಯ್ಯ ಇಂದುಹಾಸನೆ ನಮಗಳಿಯನೆ
ದೂರವಲ್ಲವೊ ಎಂದಿನಂತೆ
ಪೂರ ಲಗ್ನವು ಮುಗಿದ ನಾಲ್ಕನೆ ದಿವಸದಿ
ಮಾರಿಗೆಡೆಯ ಕೊಡುವ ನೇಮ ೬೮

ಇಂದುಹಾಸಗೆ ಮಡಿಯನುಡಿಸಿ ಏಕಾಂಗದಿ
ಗಂಧ ಫಲ ಪುಷ್ಪಾದಿಗಳ
ಕುಂದಣದ ಹರಿವಾಣದೊಳಗೆ ಮೀಸಲನಿಟ್ಟು
ಮಂದಿರದಿಂದಲಟ್ಟಿದನು ೬೯

ಆ ಪುರದರಸು ದರ್ಪಣವ ನೋಡಲು ತನ್ನ
ರೂಪಿನೊಳಗೆ ಮಸ್ತಕವು
ಲೋಪವಾಗಿರಲಿದೇನು ಕಾರಣವೆಂದು ಭೂಪ
ಕೇಳಿದ ನಾಗರೀಕರ ೭೦

ಮೃತ್ಯುವಿಗಿದು ಕಾರಣವೆಂದು ಪೇಳಲು
ಪುತ್ರಹೀನನಾದೆ ಎನುತ
ಪೃಥ್ವಿಯನಿತ್ತು ಮಗಳಧಾರೆಯೆರೆವೆನು ಮತ್ತಾವ
ದೊರೆಗಹುದೆಂದ ೭೧

ಮಂತ್ರಿಯ ಮಗಳ ಪುರುಷ ಇಂದುಹಾಸನು
ಚಿಂತಾಯಕನ ಕಿಂಕರನು
ಕಾಂತನಹನು ಚಂಪಕಮಾಲಿನಿಗೆಂದು
ಅಂತಸ್ಥದಿಂದ ಹೇಳಿದನು ೭೨

ಮದನನ ಕರೆದು ಹೇಳಿದ ಇಂದುಹಾಸನ
ಒದಗಲಿ ಕರೆತಾರೆನುಲು
ಕುದುರೆಯನೇರಿ ಮಂದಿರಕಾಗಿ ಬರುತಿರೆ
ಇದಿರಲಿ ಕಂಡ ಮೈದುನನ ೭೩

ಯಾವ ಕಡೆಯಿದು ಏನು ಎಂದೆನುತಲಿ
ಭಾವದಿಂದಲಿ ಕೇಳಿದನು
ನೈವೇದ್ಯವನು ಇಂದು ಕಾಳಿಗರ್ಪಿಸು ಎಂದು
ಮಾವನವರು ಕಳುಹಿದರು ೭೪

ಪಟ್ಟಣದರಸು ಕರೆಸಿದ ನೀ ಹೋಗು ನಾ ಕೊಟ್ಟು
ಬಹೆನು ನೈವೇದ್ಯವನು
ತೊಟ್ಟ ಹೊದಿಕೆಯ ಇಂದುಹಾಸಕೆ ತೊಡಿಸಿದ
ಉಟ್ಟನು ಅಂಗವಸ್ತ್ರವನು ೭೫

ಹತ್ತಿ ತುರಂಗವನೇರಿಂದುಹಾಸನು ಅತ್ತ ನಡೆದನರಮನೆಗೆ
ಇತ್ತ ನಡೆದು ಮದನನು ನೈವೇದ್ಯವನು ಹೊತ್ತು
ಬಂದನು ಅಂಬಿಕಾಲಯಕ್ಕೆ ೭೬

ಎಡಹಿದ ಹೊನ್ನ ಹೊಸ್ತಿಲ ಹರಿವಾಣವ
ಹಿಡಿಯಲಾರದೆ ಬಿಟ್ಟು ನೆಲಕೆ
ಹೊಡೆದರು ಕೆಡಹಿದರು ಮದಮಸ್ತಕವನ್ನು
ಬಿಡೆಕೊಟ್ಟು ಬಂದರಲ್ಲಿಂದ ೭೭

ಅಂಧಾಕಾರವಾಗಿ ಗೂಗೆ ಕೂಗಿದವು
ಕುಂದದೆ ಬಳ್ಳು ಚೀರಿದವು
ಬಂದನು ನೋಡಿ ಲೆಕ್ಕಿಸದೆ ನಿಲ್ಲದೆ ತಾನು
ಬಂದನು ಅರಸನ ಬಳಿಗೆ ೭೮

ಇಳಿದ ವಾಜಿಯ ಇಂದುಹಾಸನ ಕರವಿಡಿದೊಳಯಕ್ಕೆ
ಕರೆ ತಂದರಾಗ
ತಡವ ಮಾಡದೆ ಮಜ್ಜನವ ಮಾಡಿಸಿ ಹೊನ್ನ
ಕಳಸ ಕನ್ನಡಿಗಳ ಪಿಡಿದು ೭೯

ಗಾಲ್ವನಪ್ಪಣೆಯಿಂದ ಭೂಪಾಲನು ಆಲಸ್ಯವಿಲ್ಲದೆ ಶೀಘ್ರದಲಿ
ಕಾಲ ತೊಳೆದು ಕನ್ಯಾದಾನವ ಮಾಡಿದ
ಶ್ರೀಲೋಲನಾಪ್ತ ಕಿಂಕರಗೆ ೮೦

ಗಾಂಧರ್ವವಿವಾಹವ ಮಾಡಿದರಾಗಲೆ
ಒಂದು ನಿಮಿಷ ಮಾತ್ರದಲಿ
ಇಂದುಹಾಸಗೆ ಪಟ್ಟಗಟ್ಟಿ ಸುಖದಿ
ಬಾಳೆಂದಾಶೀರ್ವಾದವ ಕೊಟ್ಟು ೮೧

ಗಾಲ್ವನಪ್ಪಣೆಯ ಭೂಪಾಲ ಕೇಳಲು ಬೇಗನಾ
ಅಂಗನೆ ಸಹಿತವಾಗಿ
ಭೋಗೇಂದ್ರ ಹೆಡೆಕಳಚಿದಂತೆ ದುಃಖ
ಸಂಸಾಗರವನ್ನೆ ದಾಂಟಿದರು ೮೨

ತನ್ನೊಳು ಆಲೋಚನೆಯ ಮಾಡದೆ ತಾನು
ಸನ್ಮಾನವಾಗಿ ಸಾಗಿದವಗೆ
ಕನ್ನೆಯನಿತ್ತು ಪಟ್ಟವಗಟ್ಟಿ ವನವಾಸವನ್ನೆ
ಮಾಡಿದರು ಭೂಪಾಲ ೮೩

ಸಡಗರದಿಂದಲಿ ಸೊಂಡಿಲವನೆ ಏರಿ ಮಡದಿ
ಚಂಪಕಮಾಲೆ ಸಹಿತ
ಗಿಡಿಬಿಡಿ ತಂಬಟು ಪಂಚವಾದ್ಯಗಳಿಂದ ನಡೆತಂದ
ಮಾವನ ಮನೆಗೆ ೮೪

ಭಾವದಿಂದ ಮದ್ದಾನೆಯನಿಳಿದನು ಮಾವನ ಚರಣಕ್ಕೆ ಎರಗಿ
ಯಾವ ಕಾರ್ಯವ ಮಾಡು ಎಂದರೆ ಮತ್ತೆ
ನೀನಾವ ಕಾರ್ಯವ ಮಾಡಿದೆಂದ ೮೫

ನಮ್ಮಿಂದ ಆಗಲಿಲ್ಲವು ಈ ಕಾರ್ಯವು ಅಮ್ಮನವರ ಆಲಯಕೆ
ಒಮ್ಮನದಿಂದಲಿ ಹೋಗುತಲಿದ್ದೆನು ನಿಮ್ಮ
ಮಗ ಎದುರಲಿ ಬಂದ ೮೬

ಅವನೀಪತಿಯು ಕರೆಸಿದ ನೀ ಹೋಗು ನಾ
ಗವುರಿ ಪೂಜೆಗೆ ಹೋಹೆನೆನುತ್ತ
ಗಮನಿಸಿದನು ನಿನ್ನ ಮಗನೆಂದು ಮಂತ್ರಿಗೆ
ವಿವರದಿಂದಲಿ ಹೇಳಿದನು ೮೭

ಎಂದ ಮಾತನು ಕೇಳಿ ಎದೆಯು ಜರ್ಜರಿತವಾಗಿ
ಒಂದು ನಿಮಿಷ ಮೈಮರೆದ
ಬಂದವರ ಮನ್ನಿಸಲಿಲ್ಲವು ಬಹುಚಿಂತೆಯಿಂದಾತ
ಧರೆಗೊರಗಿದನು ೮೮

ಚಾರುಹಾಸನು ಚಂಪಕಮಾಲೆ ಸಹಿತಲಿ
ಜಾರಿಹೋದನು ಅರಮನೆಗೆ
ತೀರಿತು ಬಾಳ್ವೆಯೆನುತ ಮಂತ್ರಿ ನಡೆದನು
ಮಾರಾರಿಸತಿಯ ಆಲಯಕೆ ೮೯

ಕೋಟೆಯಿಂದಲಿ ಧುಮುಕಿದ ಅಗಳೊಳು
ನೀರ ದಾಟಿ ನಡೆದನಾಚೆ ಕಡೆಗೆ
ಕೋಟಿ ಭೂತಗಳ ಹಿಂಡಿನೊಳು ಹೊಕ್ಕನು
ಪಾಟುಮಾಡದೆ ದುಷ್ಟಬುದ್ಧಿ ೯೦

ಕಾರುಗತ್ತಲೆ ಕವಿದವು ಎಡವುತ್ತ ಏಳುತ್ತ ನೆಲಕೆ ಬೀಳುತಲಿ
ಸುಡುಗಾಡಲಿ ಬೇವ ಹೆಣನ ಕೊಳ್ಳಿಯ ಪಿಡಿದು
ಅಡಿಯಿಟ್ಟನು ಅತ್ತ ಮಂತ್ರಿ ೯೧

ಕೊಳ್ಳಿಯ ಪಿಡಿದು ಕಾಡುತಲಿರ್ದ ಭೂತವು
ಮುಳ್ಳು ಕಚ್ಚಿದೊಂದು ಕೆಲವು
ಅಲ್ಲಲ್ಲಿ ನಿಂತು ಪಿಶಾಚಿಗಳಿಗಂಜದೆ ಕಲ್ಮನದಿಂದ ನಡೆದನು ೯೨

ಶ್ವಾನ ಕುಕ್ಕುಟ ಮಾರ್ಜಾಲ ಹಂದಿಯ ಮರಿ
ಎಣಿಕೆಯಿಲ್ಲದೆ ಭೂತ ಕೆಲವು
ಮೊಣಕಾಲಲಿ ಹೊತ್ತು ಕೆಲವು ಭೂತಂಗಳು
ಅಣಕವಾಡುತಲಿರ್ದವಲ್ಲಿ ೯೩

ಈತನಾರು ತಮ್ಮ ಹಿಂಡಿನೊಳಗೆ ಇಂಥ ಪಾತಕವಿಲ್ಲವೆಂದೆನುತ
ಭೂತಜನಂಗಳೆಲ್ಲವು ಕೂಡಿ ತಮ್ಮೊಳು ಮಾತನಾಡುತಲಿರ್ದವಲ್ಲಿ ೯೪

ಸುರಿದಿರ್ದ ಬಣ್ಣಗೂಳಿನ ಸುತ್ತಮುತ್ತಲಿ ಕುರಿ ಕೋಳಿ
ತಲೆಯ ಮಾಂಸವು
ನರಿನಾಯಿ ಪ್ರೇತ ಪಿಶಾಚಿಗಳೆಲ್ಲವು ಆಹಾರಮಾಡುತಲಿರ್ದವಲ್ಲಿ ೯೫

ತೆಗೆದು ಬಾಗಿಲ ಚಾಮುಂಡಿಗುಡಿಯೊಳಗೆ ಹೊಕ್ಕ
ಮಗನ ನೋಡುವೆನೆಂಬ ಭರದಿ
ಬಿಗಿದ ಹುಬ್ಬುಗಳು ಬಿಟ್ಟ ಕಂಗಳು ಗಾತ್ರ
ಅಗಲಿದ ಶಿರಸವ ಕಂಡ ೯೬

ಹಾ ಹಾ ಮಗನೆ ನಾ ಮಾಡಿದ ಅಪರಿಮಿತ
ದ್ರೋಹಂಗಳಿಂದಲಿ ನಿನ್ನ
ದೇಹ ಹತ್ಯವಾಯಿತು ಎಂದು ಮಂತ್ರಿಯು
ಅತಿ ಮುದದಿಂದಲಿ ಮರುಗಿದನು ೯೭

ಕಪ್ಪುಹತ್ತಿ ಬಹ ಮೀಸೆಯ ಕೆಂಬಲ್ಲು ಒಪ್ಪುವ ಪಲ್ಲವದಧರ
ದರ್ಪಣದಂತೆ ಧಾತ್ರಿಗೆ ಬಿದ್ದ ಮುಖವ
ಎನ್ನಪ್ಪ ಬಾರೆಂದು ಎತ್ತಿದನು ೯೮

ಕೂಡಿಸಿದನು ಶಿರಸವ ತಂದು ಮುಂಡಕ್ಕೆ ನೀಡಿದ
ಪಣೆಯೊಳು ಪಣೆಯ
ಪಾಡುತ್ತ ಶೋಕವ ಮಾಡುತ್ತ ಮಂತ್ರಿಯು
ಕೋಡಿವರಿದ ರಕ್ತದೊಳು ಹೊರಳಿ ೯೯

ಬುದ್ಧಿವಂತ ಬಂಧುಕುಲಶಿರೋಮಣಿಯೆ
ಪ್ರಸಿದ್ಧವಾಗಿಯೆ ಇಂದುಹಾಸ
ನಿದ್ರೆಗೈದೆಯದುಚಿತವೆ ಎನ್ನಯ್ಯ ಎದ್ದು ಬಾರಯ್ಯ
ಎಂದು ಬಿದ್ದ ೧೦೦

ನೆನೆಯ ಬೇಡೆನ್ನ ನಿಷ್ಠುರವಾಕ್ಯವ ಕಂದ
ಕನಸೆಂದು ಭಾವಿಸು ಮಗನೆ
ಮನಸ್ಸು ಬಂದಂತೆ ತಂಗಿಯ ಮದುವೆಯ
ಮಾಡು ಮುನಿಸೆ ತಾ ಕೇಳೆಂದ ಮಗನ ೧೦೧

ಮನ್ನಿಸು ಪ್ರಜೆ ಪರಿವಾರವೆಂದಿನಂತೆ
ಎನ್ನೊಳುಮೃದು ಮಾತನಾಡು
ನಿನ್ನ ವಲ್ಲಭೆಯೊಳು ಸುಖನಿದ್ರೆಗೈಯದೆ ಕನ್ನೆ
ಗುಡಿಯಲೊರಗುವರೆ ೧೦೨

ಹಂಬಲಿಸಿದನು ಹಲವು ತಾಪದಲಿ ತಂಬಿಸಲಾರೆ ತಾಪವನು
ಕಂಬ ಕಂಬವ ಹಾಯ್ದು ಒಡೆದಿತು ಮಸ್ತಕ
ಕುಂಬಳ ಕಾಯಿ ಬಿರಿದಂತೆ ೧೦೩

ಕತ್ತಲೆ ಪರಿದವು ಕಮಲ ಬಾಯ್ದೆರೆದವು
ಆದಿತ್ಯನ ಕಿರಣ ಹಾರೈಸಿ
ಚಿತ್ತೈಸಿದವು ತಾರೆಗಳು ಭಾಸ್ಕರ ತಲೆ
ಎತ್ತಿದವರಿಗೆ ರಂಜಿಸುತ ೧೦೪

ಮಿಸುನಿಯ ಹರಿವಾಣದಲಿ ಪೂಜಾರಿಯು
ಹೊಸ ಹುವ್ವ ಗಂಧವ ಪಿಡಿದು
ಶಶಿಧರನರಸಿಯ ಗುಡಿಯ ಹೊಕ್ಕು ಕಂಡನು
ಅಸುವಳಿದಿಹರಿಬ್ಬರನು ೧೦೫

ಭರದಿಂದ ಬಂದು ಪೂಜಾರಿಂದುಹಾಸಗೆ
ಅರುಹಿದನಾಗಲೆ ನಿಮ್ಮ
ಹಿರಿಯ ಮಾವ ಭಾವ ಕಾಳಿಯ ಗುಡಿಯೊಳು
ಶಿರವರಿದು ಧರೆಗೊರಗಿದರು ೧೦೬

ಮಡಿದರೆಂಬುದ ಕೇಳಿ ಶಶಿಹಾಸ ತಾನು
ನಡೆಗಾಲಿನಿಂದಲಿ ಬಂದು
ಗುಡಿಯೊಳು ಹೊಕ್ಕು ಕಂಡನು ಅವರಿಬ್ಬರು
ಕಡೆಖಂಡವಾಗಿ ಬಿದ್ದಿಹರ ೧೦೭

ವಾರ್ತೆಗಳಾದವು ದಿಕ್ಕುದಿಕ್ಕಿಗೆ ಅಪಕೀರ್ತಿಗಳಾದವು ನಮಗೆ
ಕಾತ್ಯಾಯಿನಿಗೆ ಪ್ರಾಣವನೊಪ್ಪಿಸುವೆನೆಂದು
ನಿರ್ತದಿಂದಲಿ ಶಪಥವಿಡಿದ ೧೦೮

ಕೊಂಡವ ತೆಗೆಸಿದ ಕೊಡಕೊಡ ಘೃತಗಳ
ತಂಡುಲ ತಿಲದ ರಾಶಿಗಳ
ತಂಡ ತಂಡದ ಸಮಿತೆ ಹೊರೆ ಬಂದವು ಹಿಂಡು
ಬ್ರಾಹ್ಮರು ಕೂಡಿದರು ೧೦೯

ಸ್ನಾನ ನೇಮ ಹೋಮ ನಿತ್ಯಕರ್ಮವು
ಅನುಷ್ಠಾನ ಮಾಡುತ ಬಂದ
ಜಾನಕಿ ಅಗ್ನಿಪ್ರವೇಶ ಕಾಲದೊಳು ವಾನರಂಗಳು ಚೀರಿದಂತೆ ೧೧೦

ಬೇಡಬೇಡೆನ್ನದೆ ಬಹುಜನರೆಲ್ಲರು ನೋಡಿದರೀತನ ನಿಜವ
ನೀಡಿದನೇಳು ನಾಲಗೆಯ ಪಾವಕನಾಡಿದನತಿ ಹರುಷದಲಿ ೧೧೧

ಹರಿಹರಿದಿಟ್ಟನು ಮಾಂಸಭಕ್ಷಣೆಮಾಡೆ
ಉರಿದನು ಉನ್ನತದೀಪಕವನ
ಶಿರಸವ ಪೂರ್ಣಾಹುತಿಯ ಮಾಡುವೆನೆಂದು ಕರವ
ಚಾಚಿದನು ಮಸ್ತಕಕೆ ೧೧೨

ಮೆಚ್ಚಿದೆ ಬೇಡು ಬೇಡೆನುತ ಮಹಾದೇವಿ ಚಚ್ಚರದಿಂದಲಿ ಬಂದು
ಉಚ್ಚಿದ ಅಲಗ ಸೆಳೆಕೊಂಡು ಹಸುಮಗನೆ ನಿನ್ನಿಚ್ಛೆ
ಬಂದೊರವ ಬೇಡೆಂದೊ ೧೧೩

ಶಾಂಭವಿ ಪಾರ್ವತಿ ಗೀರ್ವಾಣಿ ತ್ರಿಯಂಬಿಕೆ
ಅಂಬುಜ ಮುಖಿಯೆ ಸೌಂದರಿಯೆ
ಜಂಬಾರಿಸುತೆ ಜಗದಾದಿಮೂರುತಿ ಕೃಪಾಂಬೆ ನೀ
ಕರುಣಿಯು ಎಂದ ೧೧೪

ನವದುರ್ಗಿ ನಾರಾಯಣಿ ನರರೂಪಿಣಿ
ರಮಿಸುವೆ ಸರ್ವೇಶರೊಡನೆ
ಭವಭವಹಾರಿಣಿ ಭವಾನಿ ಶಂಕರಿ ಗವುರಿ ನೀ
ಕರುಣಿಸು ಕೃಪೆಯಿಂದ ೧೧೫

ಹಡೆದ ತಾಯಿ ನೀನಿವರ ಪ್ರಾಣವನುಳುಹು
ನಾ ಮಾಡಿದ ಬಿನ್ನಹ ಕೇಳು
ಕಡುಪಾತಕ ದುಷ್ಟಬುದ್ಧಿಯಗೊಡವೆ ಬೇಡ ನಿನಗೆರಡು
ವರವ ಕೊಡುವೆ ೧೧೬

ಚಾರುಹಾಸಗೆ ದಿವ್ಯದೇಹವಾಯಿತು
ಕರುಣದಿಂದಲಿ ಕೃಪೆಮಾಡೆ
ಮಾತೆ ಕರುಣಿಸಿದರೆ ಲೋಕ ಲೋಕದಿ ಪಾತಕರೆಲ್ಲ ಪಾವನವು ೧೧೭

ಬಹಳ ಭಂಗವ ಬಡಿಸಿದನು ನಿನ್ನ ಖೂಳನು
ಕಡು ಪಾತಕಿಯು
ತಾಳಲಾರದೆ ಭೂಮಿಭಾರವನಿಳುಹಿದೆ ಕರುಣಾಳು
ನೀ ಪ್ರಾಣವ ಪಡೆದೆ ೧೧೮

ಆಮಂತ್ರ ಜಪಿಸಲು ಜೀವ ಪಸರಿಸಿತು
ತಾಮಸ ತಿಳಿದು ಎಚ್ಚತ್ತು
ಕೋಮಲಗಾತ್ರವಾಯಿತು ತಂದೆಮಕ್ಕಳು
ಕ್ಷೇಮದಿಂದೆದ್ದು ಕುಳಿತರು ೧೧೯

ಕಾವಕೊಲ್ಲುವ ಶ್ರೀಹರಿಯಲ್ಲದೆ ಭೂವಲಯದೊಳು ಬೇರುಂಟೆ
ನೀವಿದ ಮನದ ಸಂಕಲ್ಪವ ಬಿಡಿ ಎಂದು
ಮಾವನ ಸನ್ಮತಿಸಿದನು ೧೨೦

ಭೇರಿ ಬಡಿದವು ಹೆಸರಿನ ಕಹಳೆ ಅಬ್ಬರದಿಂದ ಚೀರಿದವು
ಶುಭ್ರಹೃದಯ ಇಂದುಹಾಸ ಪುರಹೊಕ್ಕನು
ಸರ್ಬದಳವನೊಡಗೊಂಡು ೧೨೧

ಚಂದನಾವತಿಯಲ್ಲಿ ಸೆರೆಯನಿಟ್ಟವರ ಹೊನ್ನಂದಣ
ಕೊಟ್ಟು ಕರೆಸಿದ
ತಂದೆ ತಾಯಿಬ್ಬರ ಚರಣಕ್ಕೆ ಎರಗಿದ
ಇಂದುಹಾಸನ ಹರಸಿದರು ೧೨೨

ಅತ್ತೆಮಾವನ ಚರಣಕ್ಕೆ ಈರ್ವರು ಭಕ್ತಿಲಿ ಬಂದೆರಗಿದರು
ಮುತ್ತೈದೆಯರಾಗಿರೆಂದು ಹರಸಿ ಕಣ್ಣಾರ್ತಿಯಿಂದವರ
ನೋಡಿದರು ೧೨೩

ಪದ್ಮಾಕ್ಷನು ಹಿರಿಯರಸಿ ಮಗ ಮಕರಧ್ವಜ ಕಿರಿಯಾಕೆ ಮಗನು
ಅದ್ವೈತವಾಗಿ ರಾಜ್ಯವನಾಳುತ ಪ್ರಸಿದ್ಧವಾಗಿಹ ಇಂದುಹಾಸ ೧೨೪

ಉನ್ನತವಾದ ಸಾಲಿಗ್ರಾಮಶಿಲೆಯು
ಪ್ರಸನ್ನವಾಗಿರ್ದ ಕಾರಣದಿ
ಮುನ್ನೂರು ವರುಷವು ಅವನಿಯನಾಳುತ
ಪ್ರಸಿದ್ಧವಾಗಿಹ ಇಂದುಹಾಸ ೧೨೫

ಯಾರಾದರು ಸಾಲಿಗ್ರಾಮ ಶಿಲೆಯನ್ನು
ಭಾವದಿಂದಲಿ ಜಪಿಸಿದರೆ
ಭೂವಲಯದೊಳು ಸಂತೋಷವಹುದು ಸ್ವಾಮಿ
ಈವ ಸಾಯುಜ್ಯ ಪದವಿಯನು ೧೨೬

ನಾಶವಹುದು ರುಣರೋಗ ದಾರಿದ್ರ್ಯವು
ಕ್ಲೇಶ ಕಂಟಕ ಪರಿಹರವು
ಬೇಸರಿಲ್ಲದೆ ನಿನ್ನ ದಾಸನ ಕಥೆಯನ್ನು ಚರಿತೆಯ
ಮಾಡಿ ವರ್ಣಿಸಿದೆ ೧೨೭

ಇಂದುಹಾಸನ ಕಥೆಯನು ಬರೆದು ಕೇಳ್ವರ್ಗೆ
ಬಂದ ಕಂಟಕ ಪರಿಹರವು
ಎಂದೆಂದಿಗೆ ಹರಿಭಕ್ತಿ ದೊರಕುವುದು ಮುಂದಕ್ಕೆ
ಮುಕ್ತಿ ಸಾಧನವು ೧೨೮

ಕರ್ಮ ಖಂಡನೆಯಾಗಬೇಕೆಂದು ಪೇಳಿದೆ ನಿಮ್ಮ
ದಾಸನ ಕಥಾಮೃತವ
ನಿರ್ಮಳಾತ್ಮಕ ಹೆಳವನಕಟ್ಟೆ ರಂಗಯ್ಯ ನಮ್ಮ
ನೀ ಸಲಹನುದಿನವು ೧೨೯

ಅರಿಯೆನು ಕವಿತಾಚಾತುರ್ಯದ ಮಹಿಮೆಯ
ಗುರುಮುಖದಲಿ ಹೇಳಲಿಲ್ಲ
ಪರಮದಯಾಳು ಹೆಳವನಕಟ್ಟೆ ರಂಗಯ್ಯ ವರವಿತ್ತು
ಸಲಹೊ ಅನುದಿನವು ೧೩೦

## ಬ್ರಹ್ಮಕೊರವಂಜಿ

ಸುರರು ಕಿನ್ನರರು ಸ್ಮರಣೆ ಮಾಡುವ ಪಾದ
ಕುರುಪತಿಯ ಗರ್ವವನು ಪರಿಹರಿಸುವ ಪಾದ
ಪರಮ ಯೋಗಿಗಳ ಹೃತ್ಕಮಲದಲ್ಲಿಹ ಪಾದ
ಸಿರಿ ವೆಂಕಟೇಶ್ವರನ ಪಾದ ಪದ್ಮವನು ನೆನೆವೆ ನಾನು ೧

ದಾನವಾರಿಯ ಚೆಲ್ವ ಜಾನು ಜಂಘೆಗಳೆಸೆವ
ಮೀನ ಖಂಡಗಳ ಪೆರ್ದೊಡೆಯ ಸೊಬಗಿನ
ಭಾನುಕೋಟಿ ಪ್ರಕಾಶದಂತೆ ವರಕಾಂತಿಯಲಿ
ಆನಂದದಿಂದಲಿ ಮೆರೆವ ಮೂರುತಿಯ ನೆನೆವೆ ನಾನು ೨

ಮಿಸುನಿ ಒಡ್ಯಾಣ ಕಾಂಚಿಯದಾಮ ತೆಳ್ವಸುರ
ಬಿಸಜನಾಭನ ಬಾಹುಪುರಿಯ ಸೊಬಗಿನ
ಎಸೆವ ಗದೆ ಶಂಕಚಕ್ರವು ಪದ್ಮಕರದಿ ಶೋ
ಭಿಸುತಿರುವ ಕಂಬುಕಂಧರದ ಮೂರುತಿಯ ನೆನೆವೆ ನಾನು ೩

ಕನ್ನಡಿಯ ಪಳಿದಳಿಪ ಕದಪು ಕಂಗಳು ಎಸೆಯೆ
ಕರ್ಣಕುಂಡಲದ ಸಂಪಿಗೆಯ ನಾಸಿಕದ
ರನ್ನ ತುಟಿ ಝುಗಝುಗಿಸೆ ಕುಡಿಹುಬ್ಬುಗಳು ಎಳೆಯ
ಮನ್ಮಥನ ಚಾಪದಂತೆಸೆವ ಮೂರುತಿಯ ನೆನೆವೆ ನಾನು ೪

ಅರೆದಿಂಗಳಂತೆಸೆವ ನೊಸಲ ಕಸ್ತೂರಿತಿಲಕ
ಹೊಳೆವ ಕಿರೀಟ ಮಸ್ತಕದಿ ಢಾಳಿಸುವ
ಅಲಸದೀರೇಳ್ಜಗವ ಕರುಣದಲಿ ರಕ್ಷಿಸುವ
ಹೆಳವನಕಟ್ಟೆ ಶ್ರೀ ವೆಂಕಟೇಶ್ವರನ ನೆನೆವೆ ನಾನು ೫

ಕಂಸಾಸುರನಿಟ್ಟ ಸೆರೆಯ ಮನೆಯೊಳು ಕಷ್ಟಪಡುತಲಿ ದೇವಕಿನಿ–
ಮಿಷ ಯುಗವಾಗಿ ಕಳೆಯುತಿದ್ದಳು ನಿತ್ಯಾನಂದನ ನೆನೆಯುತಾ
ಕಂಸರಿಪು ನಾರಾಯಣನು ಜನಿಸುವನೆಂದು ಅರುಹುವೆನೆನುತಲಿ
ಹಂಸವಾಹನ ಕೊರವಿವೇಷವ ಹರುಷದಿಂದಲಿ
ಧರಿಸಿದ ಆದನೆ ಕೊರವಿ ೬

ಮಿಂದು ಮಂಡೆಯ ಬಾಚಿ ತುರುಬಿಗೆ
ಮಲ್ಲಿಗೆಯ ವನಮಾಲೆಯ
ಚಂದ್ರಗಾವಿಯನುಟ್ಟು ಪಣೆಯೊಳು ತಿದ್ದಿತಿಲಕವನಿಟ್ಟನು
ಗಂಧ ಕಸ್ತೂರಿ ಪರಿಮಳವನು ಲೇಪಿಸಿ ಸರ್ವಾಂಗದಿ
ಇಂದ್ರಮಾಣಿಕದೋಲೆ ಹೊಳೆಯಲು ಇದಿರು
ಭಾಸ್ಕರನಂದದಿ ಆದನೆ ಕೊರವಿ ೭

ಗುಂಜಿಯ ದಂಡೆಯು ತೋಳಭಾಪುರಿ ಗಲ್ಲಕೊತ್ತಿದ ವೀಳ್ಯವು
ಮಂಜಾಡಿಯಸರ ಹವಳ ಸರ ಹತ್ತೆಸರವಾ
ಕೊರಳಲಿ ಹೊಳೆಯಲು
ಅಂಜನವನಿಟ್ಟು ಅಲರಗಣ್ಣಿಗೆ ಅತಿಹರುಷದಿಂದ ಬೇಗದಿ
ಕಂಜೋದ್ಭವ ಶೃಂಗರಿಸಿ ಬೆಳಗುವ ಕನ್ನಡಿಯನೀಕ್ಷಿಸಿದನು
ಆದನೆ ಕೊರವಿ ೮

ಮುತ್ತು ಮಾಣಿಕ ಹೊನ್ನಗೊಡೆಯ ಪಿಡಿದು
ಉತ್ತಮ ಶಿಶುವ ಬೆನ್ನಲಿ ಕಟ್ಟಿ
ಚಿತ್ತದೊಳಗೆ ನರಹರಿ ಶರಣೆನುತ
ಸತ್ಯಲೋಕದಿಂದಿಳಿದಳೆ ಕೊರವಿ ೯

ಮಧುರಾ ಪಟ್ಟಣಕಾಗಿ ಬಂದಳೆ ಕೊರವಿ
ಹದಿನಾರು ಬಾಗಿಲ ದಾಟಿ ನಡೆದಳು
ಮದಗಜದಂತೆ ಮೆಲ್ಲಡಿಗಳನಿಡುತ
ಬೆದರದೆ ಕೇರಿಕೇರಿಯಲಿ ಸ್ವರಗೈದು ೧೦

ಮನೆಮನೆ ಬಾಗಿಲಗಳ ಮುಂದೆ ನಿಂತು
ವನದ ಕೋಗಿಲೆಯಂತೆ ಯವ್ವಾ ಯವ್ವಾ ಎನುತ
ವಿನಯದಿ ಸ್ವರಗೈವ ಕೊರವಿಯ ಕಂಡು
ವನಿತೆ ದೇವಕಿ ಸನ್ನೆಮಾಡಿ ಕರೆದಳು ೧೧

ಸನ್ನೆಮಾಡಿ ಕರದರೆ ಚೆನ್ನಕೊರವಂಜಿ ಬಂದು
ಎನ್ನವ್ವ ಎನ್ನಕ್ಕ ಎನ್ನ ತಂದೆಯ ಹೆತ್ತವ್ವ
ನಿನ್ನ ಮನದಾಯತವ ಹೇಳೇನು ಬಾರವ್ವ
ಎನ್ನ ಕೂಸಿಗೆ ಒಂದಿಷ್ಟನ್ನವನಿಕ್ಕವ್ವ
ಸೊಲ್ಲಕೇಳೆ ಸೊಲ್ಲಕೇಳೆ ಸಿರಿವಂತೆ ಬಾರೆ ೧೨

ಮಲೆಯಾಳ ಕೊಂಕಣದೇಶ ಮಹಾರಾಷ್ಟ್ರ ಗುಜ್ಜರದೇಶ
ಚೆಲುವ ಕಾಶ್ಮೀರ ಕಳಿಂಗ ಕರ್ನಾಟಕದೇಶ
ತುಳುವ ತಿಲುಗ ದೇಶವನ್ನು ತಿರುಗಿ ಸೊಲ್ಲ ಹೇಳಿ ಬಂದೆ
ಒಲುಮೆಯ ಕೊರವಂಜಿ ನಾನಲ್ಲವೆಯಮ್ಮ
ಸೊಲ್ಲ ಕೇಳೆ ಸೊಲ್ಲ ಕೇಳೆ ಸಿರಿವಂತೆ ಬಾರೆ ೧೩

ಛಪ್ಪನ್ನ ದೇಶವನೆಲ್ಲ ಸುತ್ತಿ ಸೊಲ್ಲ ಹೇಳಿಬಂದೆ
ತಪ್ಪ ಹೇಳುವ ಕೊರವಿ ನಾನಲ್ಲವೆಯಮ್ಮ
ಕರ್ಪೂರ ವೀಳ್ಯವ ತಾರೆ ಕಾಂತೆ ನಿನ್ನ ಕೈಯ ತೋರೆ
ಒಪ್ಪಾದರೆ ಕೇಳುಬಾರೆ ಕೊಪ್ಪಿನ ಕಿವಿಯವ್ವ
ಸೊಲ್ಲಕೇಳೆ ಸೊಲ್ಲಕೇಳೆ ಸಿರಿವಂತೆ ಬಾರೆ ೧೪

**ವಚನ** : ಇತ್ತಿತ್ತ ಬಾರವ್ವ ವಿವರಿಸಿ ಹೇಳೇನು ಮುತ್ತಿನ ಮುಡಿಯವ್ವ
ಮುದ್ದುಮುಖವ ತೋರೆ ಮತ್ತಗಜಗಮನೆ ಮಂದಹಾಸವದನೆ
ರತ್ನದ ಸೆಳೆಗೋಲ ಪಿಡಿಯೆ ರಾಜೀವನೇತ್ರೆ ನಿನ್ನ ಚಿತ್ತದೊಳಗಣ
ಮಾತ ಛಂದವಾಗಿ ಹೇಳ್ವೆನು ಕೇಳೆ ಅಮ್ಮಯ್ಯ

ಬರಿಯ ಡಂಬಕದ ಕೊರವಿ ನಾನಲ್ಲ
ಅರುಹುವೆನು ಮುಂದಣ ಕಥಾಂತ್ರವೆಲ್ಲವ
ಮೊರದ ತುಂಬ ಮುತ್ತು ತಾರೆ ಮಾನಿನಿರನ್ನಳೆ
ಕುರುಹ ಹೇಳೇನು ಇಲ್ಲಿ ಕುಳ್ಳಿರು ಬಾರೆಯವ್ವ ೧೫

ಎಂದ ಮಾತ ಕೇಳಿ ಹರುಷದಿಂದ ದೇವಕಿ
ಮಿಂದು ಮಡಿಯನುಟ್ಟು ಕಾಂತೆ ಬಂದು ಕುಳಿತಳು
ಇಂದುಮುಖಿಯು ಮೊರನ ತುಂಬ ಮುತ್ತನಿಟ್ಟಳು
ತಂದು ಕೈಯತುಂಬ ಹೊನ್ನ ಕಾಣಿಕಿಟ್ಟಳು ೧೬

ಗುಣಿಸಿ ಮುತ್ತಿನ ಅಕ್ಷತೆಯಿಟ್ಟು ಗುಪಿತದಿಂದಲಿ
ನೆನೆದಳು ಮನದಭೀಷ್ಟವೀವ ಕೃಷ್ಣನ
ಜನಿಸಿದೆನು ಮಧುರಾಪುರದ ಅರಸನುದರದಿ
ಎನ್ನ ಸೋದರನೆಂಬ ಪಾಪಿ ಸೆರೆಯೊಳಿಟ್ಟನು ೧೭

ಎನ್ನ ಸುತನು ತನ್ನ ಕೊಲುವನೆಂಬ ಮಾತಿಗೆ
ಎನ್ನ ಅಗ್ರಜ ಎನ್ನ ಮೇಲೆ ಖಡ್ಗವೆತ್ತಲು
ಎನ್ನ ಪತಿಯು ಎನ್ನ ಮೇಲಣ ಮಮತೆಯಿಂದಲಿ
ತನ್ನ ಸುತರ ಕೊಡುವೆನೆಂದು ಕೊಲೆಯನುಳುಹಿದ ೧೮

ಒಡನೆ ಹುಟ್ಟಿದ ಅಣ್ಣ ಎನಗೆ ವೈರಿಯಾದನು
ಪಡೆದ ಪಡೆದ ಸುತರನರೆಯಲಪ್ಪಳಿಸಿದನು
ಒಡೆಯ ಕೃಷ್ಣಸಲಹೊ ಎಂದು ಸ್ತುತಿಸಿ ದೇವಕಿ
ಗಡಣದಿಂದ ಕೊರವಿ ತಾನು ಹೇಳ ಕುಳಿತಳು ೧೯

**ವಚನ** : ತಿರುಪತಿ ತಿಮ್ಮಪ್ಪ ಚಳ್ಳಪಿಳ್ಳೆರಾಯ
ಸುರಪುರವಾಸ ಲಕ್ಷ್ಮೀವರ ಕರುಣವಾಗು
ವಂದನೆ ಸೊಲ್ಲ ಚಂದಾಗಿ ಹೇಳೇನು ಕೇಳೆಯಮ್ಮಯ್ಯಾ

ಉರ್ಬಿಯೊಳತಿ ದಿಟ್ಟನಮ್ಮ ನಿಮ್ಮ ಮಗನು
ಗರ್ಭದೊಳಿಹನು ಕಾಣಮ್ಮ
ಕೊಬ್ಬಿದ ಕಂಸನ ಹಮ್ಮ ಮುರಿದು ನಿಮ್ಮ
ನಿರ್ಬಂಧ ಬಿಡಿಸುವನಮ್ಮ ೨೦

ಎಂಟನೆ ಗರ್ಭವಿದಮ್ಮ ನಿಮ್ಮುದರದಿ
ಅಂಟಿಹ ಮಗನು ಕಾಣಮ್ಮ
ಕಂಟಕ ಕಂಸನ ಅಮ್ಮಾ ಇವನು ಪುಟ್ಟಿ
ಗಂಟಲ ಮುರಿವ ಕಾಣಮ್ಮ ೨೧

ನಿಷ್ಕರುಣಿ ನಿಮ್ಮಣ್ಣನಮ್ಮ ನೀ ಪಡೆದಂಥ
ಮಕ್ಕಳ ಕೊಲ್ಲುವ ಕಾಣಮ್ಮ
ಚಕ್ರಧರನ ಕೈಯೊಳಮ್ಮ ಈ ಕಂಸನು
ಸಿಕ್ಕುವುದು ತಡವಿಲ್ಲವಮ್ಮ ೨೨

**ವಚನ** : ಈ ಮಾತು ಪುಸಿಯಲ್ಲ ಸ್ವಾಮಿಯ ಕರುಣ ಉಂಟು
ರಮಾಪತಿಯ ಕರುಣ ಉಂಟು ಕಾಮಿತಾರ್ಥವೆಲ್ಲ
ಕೈಗೂಡಿತು ಕೇಳೆಯಮ್ಮಯ್ಯಾ

ಕೈಯ ತೋರೆ ಕೈಯ ತೋರೆ ಕೈಯ ತೋರೆ ಅಮ್ಮಯ್ಯ
ಕೈಯ ತೋರೆ ನಿನ್ನ ಮನದ ಕುರುಹ ಹೇಳುವೆ
ಸೈಯೆನಿಸಿಕೊಂಬೆ ನಿನಗೆ ಸುಖವಾಕ್ಯವನು ಹೇಳಿ
ಭಯ ಬೇಡವೇ ಅಮ್ಮಯ್ಯ ನಿನಗೆ ಭಾಷೆಯ ಕೊಡುವೆ ೨೩

ಸಟೆಯ ಮಾತುಗಳಾಡಿ ಸೆಳೆದುಕೊಂಡು ಹೋಗಿ
ಹೊಟ್ಟೆಯ ಹೊರೆವ ಕೊರವಿ ನಾನಲ್ಲವಮ್ಮ
ನೆಟ್ಟನೆ ಸದಾಶಿವನ ತಟ್ಟಿ ಬಂದ ಕೊರವಿಯ ಮಾತ
ದಿಟ್ಟವೆಂದು ಸೆರಗ ಗಂಟಿಕ್ಕಿಕೊಳ್ಳಮ್ಮ ೨೪

ಅಂಗನೆ ನಿನ್ನ ಮನದ ಆಯಿತವ ಹೇಳೇನು
ಮಂಗಳ ವಾಕ್ಯವ ಕೇಳೇ ಮಾನಿನಿ ರನ್ನೆ
ಬಂಗಾರದ ಕೈಯ ತೋರೆ ಬೊಗಸೆಗಂಗಳ ನೀರೆ
ಹಿಂಗುವದು ನಿನ್ನ ಕಷ್ಟ ಹುಸಿಯಲ್ಲವಮ್ಮ ೨೫

**ವಚನ** : ಚಂದ್ರವದನೆಯ ಚೆಲ್ವ ವಾಮಹಸ್ತವ
ಚಂದದಿಂದಲಿ ಕೊರವಿ ವಿವರಿಸಿ ಹೇಳಿದಳು
ಹಿಂದಣ ಕಷ್ಟವೆಲ್ಲ ಪರಿಹಾರವಾಯಿತು
ಮುಂದೆ ಶುಭ ಉಂಟು ಕೇಳೆಯಮ್ಮ

ಶ್ರಾವಣ ಬಹುಳಾಷ್ಟಮಿ ರಾತ್ರೆಯ ನಡುವಿರುಳು
ರೋಹಿಣಿ ನಕ್ಷತ್ರದಲ್ಲಿ ನಿಮ್ಮುದರದಿ ಕೃಷ್ಣ
ಜನಿಸುವನು ಕಾಣೆ ಕೇಳಮ್ಮಯ್ಯ ೨೬

ಶಂಖಚಕ್ರವು ಗದೆ ಪಂಕಜ ಪೀತಾಂಬರ ಅ–
ಲಂಕಾರ ಮೂರುತಿಯಾಗಿ ಪುಟ್ಟುವ ಕೃಷ್ಣ
ಶಂಕೆಯಗೊಳದಿರೆ ಕೇಳಮ್ಮಯ್ಯ ೨೭

ಅಮ್ಮಾ ನಿಮ್ಮುದರದಿ ಬ್ರಹ್ಮನಪಿತ ಬಂದು
ನಿಮ್ಮ ನಿರ್ಬಂಧವ ಬಿಡಿಸುವನು ಕಾಣೆ
ಉಮ್ಮಯಗೊಳಬೇಡವೆ ಕೇಳಮ್ಮಯ್ಯ ೨೮

ಆದಿಮೂರುತಿ ನಿಮ್ಮುದರದೊಳವತರಿಸಿ
ಮೇದಿನಿ ಭಾರವನಿಳುಹಲು ಕಂಸನ
ಭೇದಿಸುವನು ಕಾಣೆ ಕೇಳುಮ್ಮಯ್ಯ ೨೯

ಏಳು ಮಕ್ಕಳ ಕಂಸ ಅರೆಯಲಪ್ಪಳಿಸಿದನೆ
ಚಳ್ಳೆ ಬೀಜದಂತೆ ನುಣಿಚಿ ತಪ್ಪಿಸಿಕೊಂಬ
ಕಳ್ಳಮಗನು ಪುಟ್ಟುವ ಕೇಳಮ್ಮಯ್ಯ ೩೦

**ವಚನ :** ಇಂಥಾ ಮಗನು ನಿಮ್ಮುದರದಿ ಜನಿಸಲು
ಕಾಂತ ವಸುದೇವರು ಗೋಕುಲಕೆ ಒಯ್ಯಲು
ನಿಂತಿದ್ದ ಯಮುನೆಯು ಮಾರ್ಗವಂ ಬಿಡಲು
ಸಂತೋಷದಿಂದಲ್ಲಿ ಬೆಳೆವನೆ ಕೃಷ್ಣ ಕೇಳಮ್ಮಯ್ಯ

ಗೋಕುಲದೊಳಗೆ ಶ್ರೀ ಕೃಷ್ಣನನಿಟ್ಟು ದುರ್ಗೆಯ
ಈ ಕಡೆಗೆ ಕೊಂಡುಬಹ ನಿಮ್ಮ ಪತಿಯು
ಕಾಕು ಕಂಸಾಸುರನು ಆಕೆಯ ಪಿಡಿಯೆ ಗಗ-
ನಾಕೆ ಹಾರಿ ಹೋಗುವಳು ಮಾಯಾಕಾರಿಯು ೩೧

ಕ್ರೂರ ರಕ್ಕಸ ಎನ್ನ ಕೊಲ್ಲುವದೇತಕೋ ನಿನ್ನ
ವೈರಿ ಕೃಷ್ಣ ಹೋಗಿ ಗೋಕುಲದೊಳಗೆ
ಧೀರನಾಗಿ ಬೆಳೆದು ಸಂಹಾರವ ಮಾಡುವನೆಂದು
ಸಾರಿ ಹಾರಿ ಹೋಗುವಳಂಬರಕೆ ದುರ್ಗಿ ೩೨

ನಂದನ ಗೋಕುಲದಿ ಆನಂದದಿ ಬೆಳೆದಾನು ಕೃಷ್ಣ
ಸಂದೇಹ ಬೇಡವವ್ವ ನಿಮ್ಮ ಮನದೊಳಗೆ
ಬಂದು ಮಧುರೇಲಿ ನಿಮ್ಮ ಬಂಧನವ ಬಿಡಿಸಿದ
ರೆಂದಿಗಾದರೊಮ್ಮೆ ನಮ್ಮ ನೆನೆವಿರಮ್ಮ ೩೩

ಗೋಕುಲದೊಳಗೆ ಕೃಷ್ಣ ಬೆಳೆವ ಸುದ್ದಿಯ ಕೇಳಿ
ವ್ಯಾಕುಲಕೊಳಗಾದಾನು ಕಂಸಾಸುರನು ಅ-
ನೇಕ ರಕ್ಕಸರನು ಕಳುಹಲು ತನ್ನನು
ಸೋಕಿಸದೆ ಮಡುಹುವನು ನಿನ್ನ ಮಗನು ೩೪

ಮಯಾಪೂತನೆಯ ಮೊಲೆಯನುಂಡು ಆಕೆಯ
ಕಾಯವ ಕೆಡಹುವನು ನಿನ್ನ ಮಗನು ಉ-
ಪಾಯದಿ ಶಕಟನೆಂಬಸುರನ ಬಂಡಿಯ
ನೋಯದೆ ಮುರಿಯಲೊದೆಯುವ ನಿನ್ನ ಮಗನು ೩೫

ವತ್ಸನೆಂಬಸುರನ ಗೆಲಿದು ಗೋಪಿಗೆ ಮುದ್ದು
ಆಶ್ಚರ್ಯವನ್ನು ತೋರುವ ನಿನ್ನ ಮಗನು
ಮುಚ್ಚಿದ್ದ ವದನವ ತೆರೆಯೆ ಬ್ರಹ್ಮಾಂಡವ
ಕುಕ್ಷಿಯೊಳಗೆ ತೋರುವ ನಿನ್ನ ಮಗನು ೩೬

**ವಚನ** : ಮಗುವಾಗಿ ಗೋಪಿಗೆ ಮುದ್ದುಗಳ ತೋರುವ
ಗಗನದಲ್ಲಿ ಇಹ ಚಂದ್ರಮನ ಅಂಗೈಲಿ ಪಿಡಿವ
ಝುಗಝುಗಿಸುವ ಕಿಚ್ಚ ನುಂಗುವ ದೈತ್ಯ ಕುಠಾರಿ
ದಯಾಪರ ಮೂರ್ತಿ
ಮಗನಲ್ಲವೆ ಕೃಷ್ಣ ಮಾಯಾವತಾರಿ ಕೇಳಮ್ಮಯ್ಯಾ

ಪಟ್ಟಣದೊಳಗೆಲ್ಲ ನಿನ್ನ ಮಗನಟ್ಟುಳಿ ಘನವಾದೀತು
ಕಟ್ಟಿದ ಕಾಲಲಿ ಮತ್ತಿ ಮರವ ಮುರಿದು ಮುಕ್ತಿ
ಕೊಟ್ಟು ಯಮಳಾರ್ಜುನರಿಗೆ ಗೋವರ್ಧನಗಿರಿಯ ಕಿರಿ
ಬೆಟ್ಟಲಿ ನೆಗಹುವನು ನಿನ್ನ ಮಗನು ೩೭

ಮಡದಿಯರ ವಸ್ತ್ರಗಳ ಸೆಳೆದುಕೊಂಡು ಕಡಹದ ಮರನೇರುವ
ಮಡುವ ಧುಮ್ಮಿಕ್ಕಿ ಕಾಳಿಂಗನ ಹೆಡೆಯ ತುಳಿದು
ತಡಿಗೆ ಬಂದು ಗೋವಳರೊಡನೆ ಮುತ್ತಿನ ಚೆಂಡ
ಪಿಡಿದು ಆಡುತಲಿಪ್ಪನು ನಿನ್ನ ಮಗನು ೩೮

ವೃಂದಾವನದೊಳಗೆ ಪೊಂಗೊಳಲನೂಡಿ ಚಂದದಿ ಸ್ವರಗೈವನು
ಇಂದುಮುಖಿಯರೊಡಗೂಡಿ ಜಲಕ್ರೀಡೆಯ ಆ-
ನಂದದಿ ಆಡುತಿಪ್ಪನು ಅವರಾಭೀಷ್ಟವನ್ನು ಗೋ-
ವಿಂದತಾ ಸಲಿಸುವನು ನಿನ್ನ ಮಗನು ೩೯

**ವಚನ** : ಕೇರಿ ಕೇರಿಯ ಪೊಕ್ಕು ನಾರಿಯರ
ಮನೆಗಳಲ್ಲಿ ನವನೀತವನುಕದಿವಾ
ವಾರಿಜಮುಖಿಯರು ದೂರು ಕೊಂಡು ಬರಲು
ಯಾರೂ ಅರಿಯದಂತೆ ಯಶೋದೆಯ ಮನೆಯಲ್ಲಿಹ
ಜಾರ ಚೋರರಿಗೆಲ್ಲ ಶಿಖಾಮಣಿಯಾಹನೆ ಕೇಳಮ್ಮಯ್ಯಾ

ಗೊಲ್ಲರ ಒಡನಾಡುವ ನಿನ್ನ ಮಗನು
ಗೊಲ್ಲತಿಯರ ಕೂಡುವ
ಕಲ್ಲಿಯ ಕೂಳನುಂಬ ನಿನ್ನ ಮಗನು
ಕಲ್ಯಾಣ ಕರುಣವೀವ ೪೦

ಚಿಕ್ಕವನಲ್ಲವಮ್ಮ ನಿನ್ನ ಮಗನು
ಚೊಕ್ಕ ಚದುರ ಕಾಣೆ
ರಕ್ಕಸರನು ಗೆಲ್ಲುವ ನಿನ್ನ ಮಗನು
ರುಕ್ಮಿಣಿಗೊಲಿವನಮ್ಮ ೪೧

ಕಂಡುನೆನೆವ ಭಕ್ತರ ನಿನ್ನ ಮಗನು
ಕಂಡರೆ ಪರಿವನಮ್ಮ
ಕಂಡು ನೆನೆಯದ ಜನರ ನಿನ್ನ ಮಗನು
ಖಂಡಿಸಿಕೊಂಬನಮ್ಮ ೪೨

ಯಾದವಕುಲತಿಲಕ ನಿನ್ನ ಮಗನು
ರಾಧೆಯ ರಮಣ ಕಾಣೆ
ವೇದಾಂತ ವೇದ್ಯನು ನಿನ್ನ ಮಗನು
ಆದಾನು ಕಾಣೆ ಅಮ್ಮಯ್ಯ ೪೩

ಮಂದಗಮನೆ ನೀ ಕೇಳು ನಿನ್ನ ಮಗನು
ಮಾಯಾವತಾರನಮ್ಮ
ಮೂಜಗದೊಡೆಯನಮ್ಮ ನಿನ್ನಮಗನು
ಮುಕ್ತಿದಾತನು ಕಾಣೆ ೪೪

**ವಚನ :** ಅತ್ತ ಕಳುಹಿದ ಭಟರು ಇತ್ತ ಬಾರದ ಕಂಡು
ವ್ಯರ್ಥವಾಯಿತು ತನ್ನ ಸಾಹಸವೆನುತ
ಚಿತ್ತ ಭ್ರಾಂತನಾಗಿ ಚಿಂತಿಸುತ ಕಂಸ
ಮತ್ತೊಂದು ಯೋಚನೆಯ ಮನದಲ್ಲಿ ಮಾಡ್ಯಾನೆ ಕೇಳಮ್ಮಯ್ಯ

ಮೆಲ್ಲ ಮೆಲ್ಲನೆ ಅಕ್ರೂರನೊಡನೆ ಏಕಾಂತವ
ಬಲ್ಲ ಪರಿಯಲ್ಲಿ ಹೇಳಿ
ಬಿಲ್ಲಹಬ್ಬದ ನೆವದಿಂದ ಕೃಷ್ಣನ
ಇಲ್ಲಿಗೆ ಕರೆತಾರೆಂಬ ೪೫

ಆ ಮಾತ ಕೇಳಿ ಹರುಷದಿಂದ ತಾ ಹೋಗಿ
ಸ್ವಾಮಿಗೆ ಬಿನ್ನೈಸಿ
ಮಾವ ಕಂಸನು ಬಿಲ್ಲ ಹಬ್ಬಕ್ಕೆ ಕರೆಸಿದ
ದೇವ ಚಿತ್ತೈಸೆಂಬನು ೪೬

ಪರಮ ಭಕ್ತನ ಮಾತಕೇಳಿ ಸಂತೋಷದಿ
ಬರುತ ಮಧುರಾಪುರಕೆ
ಕರುಣಾಕರನು ತನ್ನ ನಿಜವನಕ್ರೂರಂಗೆ
ಶರಧಿಯೊಳಗೆ ತೋರುವ ೪೭

ಮಧುರೆ ಅರಸಗೊಯ್ಯುವ ಮಡಿಯ ಬೇಡ–
ವೆಂದರೆ ರಜಕನ ಕೊಂದು ಮಡಿಯನುಡುವ
ಮುದದಿಂದ ಮಾಲೆಗಾರಗೊಲಿವ ಇಂಥ
ಚದುರತನದಿ ಪೂಮಾಲೆಯ ಮುಡಿವ ೪೮

ಜಾಣತನದಿ ಗಂಧ ಇಡುವ ಕುಬ್ಜೆಯ
ಊನವ ತಿದ್ದಿ ಯೌವನವನು ಕೊಡುವ
ಚಾಣೂರ ಮಲ್ಲರ ಗೆಲುವ ಮ–
ದ್ದಾನೆಯ ಕೊಂದು ತಾ ಮುಂದಕ್ಕೆ ನಡೆವ ೪೯

ನಿಮಿಷಮಾತ್ರದಲ್ಲಿ ಬಿಲ್ಲ ಮುರಿವ
ಕೃಷ್ಣ ಅವಸರದಿಂದ ಉಪ್ಪರಿಗೆಯನೇರುವ
ಕಂಸನ ಪ್ರಾಣವನಳಿವ ಇದಕೆ
ಸಂಶಯ ಬೇಡವೆ ಕೇಳಿರೆ ನಿಜವ ೫೦

ದುಷ್ಟ ಕಂಸನ ಕೊಂದು ಸೃಷ್ಟಿಯ ಭಾರವನಿಳುಹಿ
ಪಟ್ಟವ ಉಗ್ರಸೇನಗೆ ಕಟ್ಟಿ ರಕ್ಷಿಸುವನು ಕಾಣೆ
ಕರುಣಾಕರನು ನಿಮ್ಮ ಮೊರೆಯಲಾಲಿಸಿ ಮುನ್ನ
ಸೆರೆಯ ಬಿಡಿಸುವನು ಅರಿಕೆಯಿರಲಿ ನಿಮಗೆ ೫೧

ಬೆಚ್ಚಬೇಡವೆ ಅಮ್ಮ ಅಚ್ಯುತನು ನಿನ್ನ ಮನ–
ದಿಚ್ಛೆಯ ಸಲಿಸಿದರೆ ಮೆಚ್ಚಬೇಡವೆ ನಿನ್ನನು

**ವಚನ** : ವಿವರಿಸಿ ಹೇಳೇನು ಇನ್ನೊಂದು ಸೊಲ್ಲ ಕೇಳೆ
ಭವರೋಗವೈದ್ಯನು ಭಕ್ತಸುರಧೇನು
ಕೌರವರ ಕೊಲ್ಲುವ ಪಾಂಡವರ ಪ್ರತಿಪಾಲಿಸುವ
ಕರವಾ ರಾಕ್ಷಸರ ಸಂಹರಿಸಿ ಮೊರೆವ ರಕ್ಷಿಸುವನೆ ಕೇಳಮ್ಮಯ್ಯಾ

ಹೀನ ಕಂಸನಿಟ್ಟ ಸೆರೆ ಹಿಂಗುವದೆ ನಮಗೆ
ನೂನವಿಲ್ಲದೆ ಹೇಳೆ ನಂಬಿಸಬೇಡವೆನ್ನ
ಕಾಣಬಾಹದಕೆ ಕನ್ನಡಿ ಯಾಕೆ ಕೊರವಂಜಿ
ಏನ ಮಾಡುವೆ ನೀನು ನಮ್ಮ ಪ್ರಾರಬ್ಧಕೆ ೫೨

ನಾವು ದುಷ್ಕೃತಿಗಳು ನಮ್ಮುದರದೊಳಗೆ ತಾನು
ಕಾವ ಕರುಣಿ ಕೃಷ್ಣ ಜನಿಸಿ ತಾನಾಗಿ ಬಂದು
ಸಾವು ತಪ್ಪಿಸಿಕೊಂಡು ಸಲಹುವನೆ ನಮ್ಮನು ೫೩

ಆಸೆಯ ಕೊಡದಿರೆ ಇದ್ದ ಸ್ಥಿತಿಯ ಹೇಳೆ
ದೋಷಕಾರಿಯ ಬೆನ್ನ ಬಂದ ಮೇಲೆ ನಮಗಿನ್ನು ಸಾ
ಹಸವಲ್ಲವೆ ಆಸೆಯಲ್ಲಿಪ್ಪದೆಂದು
ಸೂಸಿದಳು ಕಣ್ಣೀರ ಸರಸಿಜಾಂಬಕಿ ತಾನು ೫೪

ಯಾಕೆ ಚಿಂತಿಪೆ ಯಮ್ಮಯ್ಯ ತ್ರಿಜಗವನು
ಸಾಕುವ ಮಗನಾಗುವ
ನಾಲ್ಕು ದಿವಸ ತಾಳು ನಂಬೆನ್ನ ಮಾತ
ವ್ಯಾಕುಲಗೊಳಬೇಡವೆ ಕೇಳಮ್ಮಯ್ಯ ೫೫

ಹುಸಿಯನಾಡುವಳಲ್ಲವೆ ಎನ್ನಯ ಮಾತ
ಹಸನಾಗಿ ಲಾಲಿಸಮ್ಮ
ಹರವಿಷ್ಣುಸುಜನರಿಗೆ ಎಲ್ಲಾವರಿಗು
ಅರಿಕೆಯುಳ್ಳವಳು ನಾನು ೫೬

ಧರೆಯೊಳು ಜೀವರಾಶಿಗಳ ಪ್ರಾರಬ್ಧವ
ಬರೆವಂಥ ಕೊರವಿ ಕಾಣೆ
ಹುಸಿಯನಾಡುವಳಲ್ಲವೆ ಎನ್ನಯ ಮಾತ
ಹಸನಾಗಿ ಲಾಲಿಸಮ್ಮ ೫೭

ಕೊರವಿ ಕೇಳವ್ವ ಎನ್ನುದರದ ದುಃಖವ
ಅರುಹುವೆನೆಂದರೆ ತುದಿ ಮೊದಲಿಲ್ಲ
ಮರುಳಿನ ಕೈಗೆ ಮಾಣಿಕ್ಯ ಸಿಕ್ಕಿದಂದದಿ
ಸೆರೆಯಮನೆಗೆ ಶೋಭಿತವಾದೆ ೫೮

**ವಚನ** : ಆಮಾತಿಗೆ ಕೊರವಿ ಏನೆಂದಳು ಎಂದರೆ

ಇತ್ತ ನಾಡವಳಲ್ಲ ನಾನು ಸತ್ಯಲೋಕದಿಂದ ಬಂದೆ
ಹೊತ್ತಿದ್ದ ಹರುಷನದಾಣೆ ಪುಸಿಯಲ್ಲವಮ್ಮ
ಚಿತ್ತಜವದನೆ ಕೇಳು ಚಿಂತಿಸಬೇಡವೆ ಅಮ್ಮ
ಹೊತ್ತಿದ್ದ ಹರುಷನದಾಣೆ ಪುಸಿಯಲ್ಲವಮ್ಮ ೫೯

ಎಂದಿನವಳಲ್ಲ ನಾನು ಅನಾದಿಕಾಲದ ಕೊರವಿ
ಹಿಂದಣ ಸಮಸ್ಯೆವೆಲ್ಲ ಒಂದ ಲಾಲಿಸೆ

ಅಂದು ಬಲಿ ಚಕ್ರವರ್ತಿ ಭೂಮಿಯನಾಳುವಾಗಳೆ
ಬಂದಿತು ಕೇಡೆಂದು ಆತಗೆ ಪೇಳಿ ಬಂದೆನೆ
ಹಿಂದೆ ರಾವಣೇಶ್ವರನು ಲಂಕೆಯನಾಳುವಾಗಳೆ
ಬಂದಿತು ಕೇಡೆಂದು ಆತಗೆ ಪೇಳಿ ಬಂದೆನು ೬೦

ತೆರಳುವದಿವನಭಾಗ್ಯ ಶ್ರೀರಾಮಚಂದ್ರರಿಂದಲೆ
ವಿರಳವಾಗಿ ಒಂದು ಮಾತ ಪೇಳಿ ಬಂದೆನೆ
ತೆರಳುವದಿವನ ಪ್ರಾಣ ಶ್ರೀಕೃಷ್ಣದೇವರಿಂದಲೆ
ವಿರಳವಾಗಿ ಒಂದು ಮಾತ ಪೇಳಿದೆನಮ್ಮಾ ೬೧

ಹೊಟ್ಟೆ ಹಸಿಯಿತು ಕೈಮುಟ್ಟಿ ಅನ್ನವನಿಕ್ಕೆ
ಕಟ್ಟಾಣಿ ಮುತ್ತೆ ಕಾಮನ ಸಂಪನ್ನೆ
ಉಟ್ಟ ಸೀರೆಯ ತಾರೆ ಊರ ಉಂಬಳಿಗಳನು
ಬಿಟ್ಟವಳಲ್ಲ ನಿನಗೆ ಮಗನಾದ ಮೇಲೆ ೬೨

ಕುಡಿತೆಗಂಗಳ ನೀರೆ ಕುಂಭಕುಚದ ವಯ್ಯಾರೆ
ಬಡನಡುವಿನ ರಂಭೆ ಪುತ್ಥಳಿಯ ಬೊಂಬೆ

ಆಗದಾಗದುಯೆಂದು ಅನುಮಾನಗೊಳ್ಳದಿರೆ
ಆದೀತು ಅಮ್ಮಯ್ಯ ಅಭಯವನು ಕೊಳ್ಳೆ
ಸಾಗಿಸಿ ಕಳುಹೆನ್ನ ಸವತಿ ಒಳ್ಳೆವಳಲ್ಲ
ಹೋಗಿ ಬರುತೇನೆ ನಿನಗೆ ಮೆಚ್ಚ ಹಾರೈಸಿ ೬೩

ಹಿತದವರ್‍ಯಾರಿಲ್ಲ ಎನಗಿಂತ ಹಿರಿಯರು
ಸತಿಯರು ಕೊರಮಗುಂಟು
ಮತಿವಂತೆ ನೀಎನ್ನ ಮನ್ನಿಸಿ ಕಳುಹವ್ವ ಪತಿಯಾಜ್ಞೆಗಳುಂಟು
ಬಹಳ ಹೊತ್ತಾಯಿತು ಬೈದಾಳು ಸವತಿಯು
ಆಳುವ ಕೊರಮ ಹೀನ
ಬಾಲನ ನೆತ್ತಿಗೆ ಎಣ್ಣೆಯನೆರೆಯವ್ವ ವೀಳ್ಯವ ಕೊಡುಯೆನಗೆ ೬೪

ಕೊರವಿ ನಿನ್ನಮಾತು ಖರೆಯಾದರೆ ಎನ್ನ ಸೆರೆಮನೆ ಹಿಂಗಿದರೆ
ಹಿರಿದಿನ ಭಾಪುರಿ ಕೊಡುವೆನು ನಿನಗೆಯೆಂದು
ಕರದಿ ವೀಳ್ಯವನಿತ್ತಳು
ಮಿತ್ರೆಯಾಡಿದ ಮಾತು ಸತ್ಯವಾದರೆ ಎನ್ನ ಕಷ್ಟಗಳ್ಹಿಂಗಿದರೆ
ಮುತ್ತಿನ ಭಾಪುರಿ ಕೊಡುವೆನು ನಿನಗೆಯೆಂದು
ಹಸ್ತದಿ ವೀಳ್ಯವನಿತ್ತಳು ೬೫

**ವಚನ** :ಈಮಾತು ಹುಸಿಯಲ್ಲ ಸ್ವಾಮಿಯ ಕರುಣುಂಟು
ಸೀತಾಪತಿಯ ಕರುಣುಂಟು ನಿನ್ನ
ಕಾಮಿತಾರ್ಥಗಳೆಲ್ಲ ಕೈಗೂಡೀತು ಕೇಳೇ ಅಮ್ಮಯ್ಯ
ಆಡುವ ಕೂಸಿನಾಣೆ ಬೇಡುವ ಜೀವನಾಣೆ
ಕೂಡಿದ್ದ ಸವತಿಯ ಕಣ್ಣಾಣೆ ಕೇಳೇ ಅಮ್ಮಯ್ಯ

ಕೃಷ್ಣಾವತರಿಸುವ ವೃತ್ತಾಂತವನೆಲ್ಲ ದೇವಕಿಗುರುಹಿ
ಕೊಟ್ಟ ವೀಳ್ಯವನು ಮನ್ನಿಸಿ ತೆಕ್ಕೊಂಡು
ಪಟ್ಟಣವನು ಚರಿಸುತ ನಡದೊ ಶೋಭನವೆ ೬೬

ಕೇರಿ ಕೇರಿಯು ತಪ್ಪದೆ ಬರಲು ಕಂಸಾಸುರನ
ವಾಲಗದಿ ಕಂಡು
ಪುಡುಮಿಗೆ ಪುಟ್ಟಿ ನಿನ್ನ ಕೊಲುವರೆಂದು
ಸಾರುತ ಸತ್ಯಲೋಕಕೆ ನಡದೊ ಶೋಭನವೆ ೬೭

ಪರಮೆಟ್ಟಿಯ ಕೊರವಂಜಿಯ ಪದಗಳ
ಹೆಳವನಕಟ್ಟೆ ವೆಂಕಟನ
ಅರಿದಿಷ್ಟಾರ್ಥಗಳೆಲ್ಲವನು ಧರೆಯ ಮೇಲೆ ಬಲ್ಲ
ವರು ಕೇಳಿ ತಿದ್ದಿ ಶೋಭನವೆ ಶೋಭನವೆ ೬೮

## ಲವಕುಶರ ಹಾಡು

ಹರಿಹರ ಬ್ರಹ್ಮ ತ್ರಿಮೂರ್ತಿಗಳ ಬಲಗೊಂಡು
*ಗುರುಹಿರಿಯರ ಪಾದಕ್ಕೆರಗೀ ।
ಅಜನ ಪಟ್ಟದ ಶ್ರೀ ಸರಸ್ವತಿಯನೆ ಬಲಗೊಂಡು
ತೊಡಗುವೆ ರಾಮರ ಕಥೆಯಾ ೧

ಬಣ್ಣದ ಅಕ್ಷತೆ ಕಣ್ಣು ತುಂಬೆ ಪುಷ್ಪ ಸು
ವರ್ಣ ದಕ್ಷಿಣೆ ತಾಂಬೂಲಾ ।
ಉಮ್ಮಿಯ ಪುತ್ರ ಗಣೇಶಗೆ ಅರ್ಪಿಸಿ
ವರ್ಣಿಪೆ ಲವಕುಶರ ಕಥೆಯಾ ೨

ಕುಲದ ಸ್ವಾಮಿ ಕದ್ರಿ ನರಸಿಂಹನ ಬಲಗೊಂಡು ।
ಗುರು ಮಧ್ವರಾಯರ ನೆನೆದು ।
ಮನದಲ್ಲಿ ವಿಷ್ಣು ದೇವತೆಗಳ ಬಲಗೊಂಡು
ತೊಡಗುವೆ ರಾಮರ ಕಥೆಯಾ ೩

ವೇದಪಾರಾಯಣ ಅಂತ್ಯದ ಪೀಠಕ
ಮಾಧವ ಹರಿ ಸುಗೋತ್ರ ।
ವೇದ ಮೂರುತಿ ಕೊಂಡಪ್ಪನ ಪುತ್ರಿಕೆಗೆ (?)
ಹೇಳಿದಳುಹರಿನಾಮ ಕಥೆಯಾ ೪

ಯಾದಾಢ್ಯ(?) ಕೌರುಣ್ಯ (ಕೌಂಡಿಣ್ಯ?) ಗೋತ್ರದ ವರಸೊಸಿ
ಯಗ್ನ ಸಂತತಿಯೂ ಪೀಠಕವೂ ।
ಸುಜ್ಞಾನಿಗಳು ಹೇಳಿ ತಿಳಿವೋದು ಈ ಕಥಿ
ಅಜ್ಞಾನಿ ಮೂಢಜೀವರಿಗೆ ೫

ಅರದು ಮರದು ಯಶೋಧಿ ಹೇಳಿದ ಕಥಿ
ಹರುವುಳ್ಳ ನಿರಯಾಗಿಗಳೂ ।
ಹರವುಳ್ಳ ಕೈ(?)ಮುನಿವಳ್ಳೇರು ಜಾಣರು
ತಿಳಿವೂದು ಅರ್ಥಸಂದೇಶ ೬

* ಸತ್ಯಬೋಧರ ನೆನೆದು

ನಾಡನ ಕಥೆಯಲ್ಲ ಬೇಡುಂಬ ಪದನಲ್ಲ
ನಾಡೊಳಗೆ ಹರಿನಾಮ ಕೇಳಿದ ಜನರಿಗೆ ।
ಆಯುರಾರೋಗ್ಯವು ದಾರಿದ್ರ್ಯ
ವಿಲ್ಲವಾಗುವುದು ೭

ಸಂದುಗೊಂದುಗಳಲ್ಲಿ ಸಂಗೀತಪದನಲ್ಲ
ಪ್ರಚಂಡರು ರಾಮಲಕ್ಷ್ಮಣರು ।
ಇತ್ತಬೇಟೆಯನಾಡುವ ಕ್ರಮಗಳ
ಚಂದವಿನ್ನೆಂತು ವರ್ಣಿಸಲೆ ೮

ಅಂದು ಶ್ರೀ ರಾಮರು ಅಂಗನೆಯ ತೊಡೆಲಿಟ್ಟು
ತಾಂಬೂಲ ಶ್ರೀಮೊಗದಿಂದೆ ।
ಇಂದುವದನೆಯ ಬಿಗಿದಪ್ಪಿ ಮುದ್ದಾಡಿದ
ಇಂದುವದನೆ ಗರ್ಭವೆಂದ ೯

ನಳಿನನಾಭನು ತನ್ನ ಲಲನೇಯ ಮುಖನೋಡಿ
ಲಲನೆ ನಿನ್ನ ಪ್ರೇಮವೇನೆ ।
ಮುನಿಯು ಆಮುನಿಗಳು ಕೂಡಿದ
ನಂತ್ರ ವನಭೋಜನ ತನಗೆಂದ್ಲೊ ೧೦

ಹಲವು ಕಾಲವು ಸೀತೆ ಅಸುರರ ವಡನಾಡಿ
ನೆನದಳು ಋಷಿಗಳಾಶ್ರಮವಾ ।
ಹಸನವಲ್ಲವು ಸೀತೆ ಇನ್ನು ನೀನುಳಿವದು
ಋಷಿಗಳಾಶ್ರಮಕೆ ಹೋಗೆಂದಾ ೧೧

ಅಯೋಧ್ಯಾಪುರದ ವಾನರರೆಲ್ಲಾ ಬಿಟ್ಟು
ಕೈಹಿಡಿದ ಪುರುಷನ ಬಿಟ್ಟು ।
ಸಕಲ ಸೌಭಾಗ್ಯ ಸಂಪತ್ತು ಎಲ್ಲವ ಬಿಟ್ಟು
ನೆನದಾಳು ಋಷಿಗಳಾಶ್ರಮವ ೧೨

ಅಂದು ಶ್ರೀರಾಮರು ಬೇಟೆಗ್ಹೋದೇವೆಂದು
ಇಂದು ಡಂಗುರವ ಸಾರಿದರೂ ।
ಒಂದು ಗಳಿಗೆ ಮುಹೂರ್ತತಡೆಯಲಾಗದು ಎಂದು
ಮಂದಿ ಮಕ್ಕಳ ಕರಸಿದರೂ ೧೩

ಬಂದರು ಮಂತ್ರಿ ಮಾನ್ಯರು ಪ್ರಹಸ್ತರು
ಬಂದರು ಪ್ರಧಾನೇರು ।
ಬಂದರು ರವಿಗುರಿನವಿಗುರಿಕಾರರು (?)
ಬಂದರು ನಾಲಗದೋರೊಪ್ಪಿದರು ೧೪

ಆಟಪಾಟದೋರು ನೋಟಕ್ಕೆ ದಾರಾರು
ಸೂತ್ರದವರು ಸುವ್ವಿಯವರು ।
ಪಾಟಕ್ಕೆ ದಾರಾರು ಪೊಗಳುವ ಭಂಟರು ರಘು
ನಾಥನೋಲಗದಲೊಪ್ಪಿದರೂ ೧೫

ಹೊನ್ನು ಹಲಗೆಯವರು ಬೆನ್ನಬತ್ತಲೆಯವರು
ಚೆನ್ನಬಿನ್ನಾಣನಾಯಕರೂ ।
ಚೆನ್ನಿಗರಾಮರ ಪೊಗಳುವ ಭಂಟರು
ಬಿನ್ನಾಣದಿಂದೊಪ್ಪುತಿಹರೂ ೧೬

ಉಟ್ಟರು ಪಟ್ಟಾವಳಿ ಹೊಸಧೋತರವು
ಇಟ್ಟರು ಆಭರಣವನ್ನೂ ।
ಇಟ್ಟರು ಮಕರಕುಂಡಲ ಕಿರೀಟವೂ
ಇಟ್ಟರು ನೊಸಲ ಕಸ್ತುರಿಯಾ ೧೭

ಹಾರಪಾಣಿಕನಿಟ್ಟು ಕಾಲುಪೆಂಡೆಯನಿಟ್ಟು
ನ್ಯಾವಳದ ಉಡುದಾರನಿಟ್ಟು ಸೂರ್ಯನ
ಕುಲದ ಕುಮಾರರು ನಾಲ್ವರು
ಏರಿದರು ಹೊನ್ನ ರಥವಾ ೧೮

ವಾಯುವೇಗ ಮನೋವೇಗವೆಂಬೋ ರಥ
ಏರಿದರೆ ರಾಮಲಕ್ಷ್ಮಣರೂ ।
ಜಾಣನೆಂಬೋ ಸೂರ್ಯ ತಾನೆ ರಥವ ನಡೆಸೆ
ಕೂಡ ಬೇಟೆಗೆ ತೆರಳಿದರು ೧೯

ಅತ್ತಿ ಆಲದ ಮರ ಸುತ್ತ ಹೆದ್ದುಮ್ಮರಿ
ಉತ್ತತ್ತಿ ಬೆಳಲು ದಾಳಿಂಬ
ಉತ್ತಮ ಅಶ್ವತ್ಥ ಇಪ್ಪಿಯ ವನಗಳು
ವಿಸ್ತರವನವೊಪ್ಪುತಿಹವೂ ೨೦

ಹಲಸು ನಾರಂಗ ಬೆರಸಿದ ಕಿತ್ತಳಿ
ಹರಿಸಿಣದ ತೋಪು ಎಲಿತ್ವಾಟ
ಅರಸುಮಕ್ಕಳು ರಾಮಲಕ್ಷ್ಮಣರೆಲ್ಲರು
ಬೆರಸಿ ಬೇಟೆಯ ನಾಡುತಿಹರೂ ೨೧

ಯಾರಾಡಿಗಿಡಗಳು ಕ್ಯಾದೀಗಿವನಗಳು
ನಾಗಸಂಪಿಗೆಯ ತೋಪುಗಳು ।
ಜೋಡೀಲಿ ಭರತ ಶತ್ರುಘ್ನರೆಲ್ಲರು
ಕಾಲಾಳು ಬೇಟೆನಾಡಿದರೂ ೨೨

ಗಂಡಭೇರುಂಡ ಉದ್ದಂಡ ಕೇಕಾಪಕ್ಷಿ
ಚಂದಾದ ಬಕನ ಪಕ್ಷಿಗಳೂ ।
ಅಂದಾದ ಆಲಿವಾಣ ಆಲಹಕ್ಕಿಯು ರಾಮ
ಚಂದ್ರನು ಬೇಟೆಯಾಡಿದನು ೨೩

ಬೇಟೆನಾಡಿ ಬಂದು ನಿಂತಾರು ನೆರಳಲ್ಲಿ
ಒಂದುಗಳಿಗೆ ಶ್ರಮವ ಕಳೆದು
ನಂದನವನದಲ್ಲಿ ತನಿಹಣ್ಣು ಮೆಲುವೋರು
ಗಂಗೆಯ ಉದಕ ಕುಡಿಯುವೋರು ೨೪

ನಳಿನನಾಭನು ತಾನು ಬಳಲಿ ಬೇಟೆಯನಾಡಿ
ನೆರಳಲ್ಲಿ ತುರಗ ಮೇಯಿಸಿದ
ಕಿರಿಯಲಕ್ಷ್ಮಣ ದೇವ ತೊಡೆಯನ್ನೆ ಕೊಡು ಎಂದು
ಮಲಗೀದ ಒಂದು ನಿಮಿಷವನೂ ೨೫

ಮುಂದಿನ ಆಗೆಂತ್ರವ(?) ಕಂಡನು ಕನಸಿನಲಿ ರಾಮ
ಕಂಗೆಟ್ಟು ಮೈಮುರಿದೆದ್ದಾ ।
ಕಂದ ಲಕ್ಷ್ಮಣ ಕೇಳೊ ಇಂದೆನ್ನ ಸೊಪ್ನದಲಿ
ಬಂದಿಹಳೊಬ್ಬ ತಾಟಕಿಯೂ ೨೬

ಇಂದುವದನೆಮುಡಿ ಪಿಡಿದಳೆವೊ ದುಕಂಡೆ
ತುಂಡರಾವಣ ಕುಯೋದು ಕಂಡೆ ।
ಇಂದು ನೀ ಸೀತೆಯ ಕರೆದೊಯಿದು ಕಾನನದಿ
ದಿಂಜಾರಿಳಿಸೋದು ಕಂಡೆ ೨೭

ಮುನ್ನ ಅರಿಯದೆ ನಾವು ಬಂದೆವೋ ಲಕ್ಷ್ಮಣ
ಇನ್ನು ಸೀತೆಗೆ ಜಯವಿಲ್ಲಾ ।
ಅಂದು ಶ್ರೀರಾಮರಾ ಬೇಟೆ ಮೂಲಕದಿಂದೆ
ಬಂದಾಳು ಮಾಯದ ಗರತಿ । ೨೮

ಬಂದು ಅಯೋಧ್ಯಾಪುರದ ಬೀದಿಯವಳಗೆ
ಚಂದದಿ ಕುಣಿದಾಡುತಿಹಳು ।
ಅಂದು ಶ್ರೀ ರಾಮರ ಅರಮನೆ ಬಾಗಿಲಿಗೆ
ಚಂದುಳ್ಳ ದ್ವಾರಪಾಲಕರೂ ೨೯

ಬಂದು ಅಸುರೆ ನಿನ್ನ ಬಿಡವಲ್ಲೆನೆಂದರೆ
ಬಂದಡರಿದಳರಮನೆಗೆ
ಕಂಡು ಜಾನಕಿ ತಾನು ಕರಸಿದಳಾಗಲೆ
ಬಂದಳು ಮಾಯದ ಗರತಿ ೩೦

ಬಂದು ಪಾದಕ್ಕೆರಗಿ ಕೈಮುಗಿದು ನಿಂತಳು
ತಂದಳು ನಾಗ ಸಂಪಿಗೆಯಾ ।
ಅಂಗನೆ ಜಾನಕಿ ನೀಮುಡಿಯೆಂದು ಕೊಟ್ಟರೆ
ಸಂದೇಹ ಬಟ್ಟಳಾ ಸೀತೆ ೩೧

ದಾವ ದೇಶ ನೀವು ಏನುಕಾರಣ ಬಂದಿ
ಈನಾಡ ಗರತಿ ನೀನಲ್ಲ ।
ದಾವದು ಸ್ಥಳಕುಲ ದಾರು ಬಂಧುಗಳುಂಟು
ದಾರ ಬಳಿಗೆ ನೀ ಬಂದೀ ೩೨

ಈರೇಳು ಲೋಕವ ಸುತ್ತಿ ತಿರುಗಿ ಬಂದೆ
ನಾಗಲೋಕಕ್ಕೆ ಬಾಹೆನೆಂದು
ನಾಗಲೋಕದಿಂದ ದೇವಲೋಕಕ್ಕೆ ಬಂದೆ
ದೇವಿಗೆ ಕಾಣಿಕೆ ತಂದೇ ೩೩

ಹೊನ್ನು ಹಣವನೀವೆ ಅನ್ನವಸ್ತ್ರವನೀವೆ
ಇನ್ನು ನೀವಲಿದದ್ದು ಈವೆ ।
ಇನ್ನು ನೀವಲಿದದ್ದು ಚೆನ್ನಾಗಿ ಕೊಡುವೆನು
ಬಿನ್ನವಿಸೆ ಗರತಿ ನೀ ಅಂದ್ಲೂ ೩೪

ಹೊನ್ನು ಹಣವನೊಲ್ಲೆ ಅನ್ನವಸ್ತ್ರವನೊಲ್ಲೆ
ನಿನ್ನ ಭಾಗ್ಯವು ನಾನೊಲ್ಲೆ ।
ಮುನ್ನಿನ ಅಸುರರೂಪ ಇನ್ನು ನೀಬರೆದರೆ
ಚೆನ್ನಾಗಿ ಹರಣ ಹೊರುವೆನು ೩೫

ಮುನ್ನಿನ ಅಸುರರೂಪ ಇನ್ನು ನಾ ಬರೆದರೆ
ಮುನ್ನವನು ಕಂಡು ಕೇಳರಿಯ ।
ಪನ್ನಂಗಧರ ರಾಮ ಬಂದರೆ ಬೈದಾರು
ಮುಂದಿನ್ನು ಗಮನ ಮಾಡಂದ್ಲೂ ೩೬

ಅಂದರೆ ಸೀತೆ ತನ್ನಂಗಕ್ಕೆ ಬರಲೆಂದು
ತಂದು ತೊಡೆದಳು ಭಸುಮವನು ।
ಅಂದೆನ್ನ ವನಕೆ ಪ್ರದಕ್ಷಿಣೆ ಬರುವಾಗ
ಉಂಗುಷ್ಟವನು ಕಂಡುಬಲ್ಲೆ ೩೭

ಉಂಗುಷ್ಟದಂದಕ್ಕೆ ಮುಂದೆ ಪಾದವ ಬರಿ
ಹಿಂದೆ ಹಿಂಬುಡ ಮೊಣಕಾಲು ।
ಚಂದಾದ ನಡುದೊಡಿ ಎದೆ ಭುಜವ ಇದ
ಹೊಂದಿಸಿ ಬರೆ ಎಂದಳವಳು ೩೮

ಚಂದಾದ ಕಾಗದ ಲೆಕ್ಕಣಿಕೆ ಪಿಡಿದು ತಂದು
ಕೊಟ್ಟಳು ಸೀತೆ ಕೈಗೆ ।
ಒಂದು ಕಾಯಕೆ ಹತ್ತು ಸಿರಗಳ ಬರೆದಳು
ಮುಂದೆರಡು ಪಾದವ ಬರೆದಳು ೩೯

ಒಂದರ ಹಿಂದೊಂದು ವರ್ಣಿಸಿ ಬರೆದಳು
ತಂದು ನಿಲಿಸಿದಳು ರಾವಣನಾ ।
ಚಂದವಾಯಿತು ದೇವಿ ವರವಕೊಡೆನುತಲಿ
ಎಂದೆಂದಿಗೂ ಅಳಿಯದ್ದಾಗೇ ೪೦

ಅಳಿದು ಉಳಿಯದಿರು ಉಳಿದು ನೀ ಕೆಡದಿರು
ಧರಿಯವಳಗೆ ಅಡಗದಿರು ।
ಕಿರಿಯ ಲಕ್ಷ್ಮಣದೇವ ಹೊಡೆದರೆ ಮಡಿ ಎಂದು
ವರವ ಕೊಟ್ಟಳು ಸೀತೆ ಪಠಕೆ ೪೧

ಮರೆಮೋಸವಾಯಿತು ಮೇಲೆ ಬಿಸುಟಳು ಪಠ
ಹಾರಿದಳು ಗಗನ ಮಂದಿರಕೇ ।
ಮೇಲೆ ಬಿಸುಟಳು ಪಠ ಗಾಳಿಪಟದಂತೆ
ಕೇರಿಯೊಳಗೆ ಬಂದಿಹುದೂ ೪೨

ನಾರೇರೆಲ್ಲರು ಕೂಡಿ ಕಟ್ಟಲು ಪತ ಭೋ
ರೆದ್ದು ಕುಣಿದಾಡುತಿಹುದು ।
ಹಗಲಿರುಳಾದವು ನೆಲಬಾಯಿ ಬಿಟ್ಟವು
ಧರೆ ಅಸ್ತಮಾನ ತೋರಿದವೂ ೪೩

ಉರಿಯೊಳಗಂಜದು ಧರೆಯೊಳಗಡಗದು
ಶರಧಿಯೊಳಗೆ ಮುಣಗದಿಹುದು ।
ಹರದಿ ಜಾನಕಿ ಕೊಟ್ಟ ವರದಕಾರಣದಿಂದ
ಬರುತೆದ್ದು ಕುಣಿದಾಡುತಿಹುದು ೪೪

ಧರಣಿಪತಿರಾಮ ಬರುವ ವ್ಯಾಳ್ಯಾಯಿತು
ಧರಣಿಜೆ ನಡುಗಿ ಚಿಂತಿಸುತಿದ್ಲೂ ।
ಅಂದು ಶ್ರೀ ರಾಮರು ಬಂದರಾದರೆಯೆನ್ನ
ಕುಂದು ನುಡಿವೊರೋ ಬೈವೋರೋ ೪೫

ಇಂದಿನ ವಿಧಿಯ ನಾ ಹೇಗೆ ಕಳೆಯಲೆಂದು
ಬಂದು ಮಂಚದಲಿ ಮಲಗಿದಳು ।
ಚಂದದ ಸೀರಿಯ ಮುಸುಗಿಟ್ಟು ಆಪತ
ಬಂದೊರಗಿತು ತಾಳದಡಿಗೇ ೪೬

ಅಂದು ಶ್ರೀ ರಾಮರು ಬಂದು ಬೇಟೆಯನಾಡಿ
ಕಂಡರು ಅಪಶಕುನವನೂ ।
ಆನಿಕುದರಿ ಮಂದಿ ಮುಗ್ಗರಿಸೋದು ಕಂಡು
ನಿಂದರು ಹರಿ ಹರಿ ಎಂದೂ ೪೭

ಮಚ್ಛಾವತಾರ ಬಂದ ಮಲೆವೊರಕ್ಕಸಹರ ಬಂದ
ಸೃಷ್ಟೀ ನಾಳುವ ದೊರೆ ಬಂದಾ ।
ಮತ್ತೆ ಭೂಮಿಯ ಪೊತ್ತ ಕೂರುಮ ಬಂದನೆಂದು
ಹೆಚ್ಚಿನ ಕಾಳಿ ಹಿಡಿದರೂ ೪೮

ವರಹಾವತಾರ ಬಂದಾ ಹಿರಣ್ಯಸಂಹರ ಬಂದ
ಜಗದ ರಕ್ಷಕ ಹರಿ ಬಂದ ।
ಹರದಿ ಜಾನಕಿದೇವಿಯರಸು ಬಂದನೆಂದು
ಬಿರುದಿನ ಕಾಳೀ ಹಿಡಿದರೂ ೪೯

ಇಂದು ವಾಮನ ಬಂದ ಮಂದರ ಧರ ಬಂದ
ಕುಂಭಸಂಭವಪಿತ ಬಂದ ।
ಚಂದದಿ ಭಾರ್ಗವಾವತಾರ ಬಂದನೆಂದು
ಇಂದು ಕೂಗಿದವೇ ಕಾಳಿಗಳೂ ೫೦

ದಶರಥಸುತ ಬಂದಾ ಅಸುರ ಸಂಹರ ಬಂದಾ
ಕುಸುಮನಾಭ ಕೃಷ್ಣ ಬಂದಾ।
ಚಂದಾದಿ ಬೌದ್ಧಾವತಾರ ಬಂದನೆಂದು
ಇಂದುಕೂಗಿದವೇಕಾಳಿಗಳೂ ೫೧

ಕಲ್ಕ್ಯವತಾರ ಬಂದಕರುಣಾಸಾಗರ ಬಂದ
ಲೋಕರಕ್ಷಕ ಹರಿ ಬಂದ ।
ಹರದಿ ಸೀತಾದೇವಿಪತಿ ರಾಮ ಬಂದನೆಂದು
ಹೆಚ್ಚಿನ ಕಾಳಿ ಹಿಡಿದಾರು ೫೨

ಬಂದರು ಮಂತ್ರಿ ಮಾನ್ಯೇರು ಪ್ರಹಸ್ತರು
ಬಂದರು ಪ್ರಧಾನೇರು ।
ಬಂದರು ರವಿಗುರಿ ನವಗುರಿಕಾರರು
ಬಂದು ವಾಲಗದಲೊಪ್ಪಿದರೂ ೫೩

ನಾಲ್ಕು ವೇದಾ ಬಲ್ಲ ಶಾಸ್ತ್ರ ಸಂಪನ್ನರು
ಬೇಕೆಂಬೊ ಪುರಾಣದವರು ।
ನೀತಿ ಭಾಷೆಗಳುಳ್ಳ ಶಾಸ್ತ್ರಸಂಪನ್ನರು
ರಘುನಾಥನೋಲಗದಲೊಪ್ಪಿದರೂ ೫೪

ಅಂದು ಶ್ರೀರಾಮರ ಅಂಗನೆಯ ಕಾಣದೆ
ಚಂದ್ರಮನಿಲ್ಲದ ಪ್ರಭೆಯಂತೆ ।
ಇಂದುವದನೆ ಬೇಗ ಬರಹೇಳಿರೆನುತಾಲಿ
ಸಂಧಾನವ ಕಳಿಸಿದಾ ೫೫

ಸಂಧಾನವಗೊಂಡು ಬಂದಾರು ನಾರೇರು
ಬಂದು ಸೀತೆಗೆ ಕೈಯ ಮುಗಿದು ।
ಅಂದು ಶ್ರೀ ರಾಮರು ಬರಹೇಳಿ ಕಳುಹಿದರು
ಅಂಗನೆ ಜಾನಕಿ ಪಯಣವಾಗೆ ೫೬

ಅಂದಾರೆ ಜಾನಕಿ ಅಂಜಿಧರೆಗಿಳಿದಾಳು
ಕಂಗೆಟ್ಟು ನಡುಗಿದಳೊಳಗೇ ।
ಇಂದು ರಾಮರ ಕೈಲಿ ಅಳಿವೆನೋವುಳಿವೆನೋ
ಇಂದು ಗೆದ್ದರೆ ಮುಂದೆ ಜಯವೂ ೫೭

ಬಂದಾನಾರೇರಿಗೆಲ್ಲರಿಗೆ ವೀಳ್ಯವ ಕೊಟ್ಟು
ನಡೆದಾಳು ರಾಮರ ಬಳಿಗೆ ।
ನಡೆ ಮುಡಿಗ್ಹಾಸೊರು ಮಡದೆಲೆ ಮಡಿಸೊರು
ಚವರಿ ಕುಂಚಗಳ ಬೀಸೊರು ೫೮

ಕುಡಿನೀರು ಗಿಂಡೀಯ ಹಿಡಿಯೊರು ಕೆಲವೊರು
ಮಡದಿ ಬಂದಳೂ ರಾಮರೆಡೆಗೆ
ಸೀತೆ ಬರಲು ಲಕ್ಷ್ಮಣನೆದುರೆದ್ದಾನೂ
ಭರತ ಶತ್ರುಘ್ನರೊಂದಿಸಲೂ ೫೯

ವಾಲಾಗರೆದ್ದು ಕೈಗೂಡಿಸೆ ಜಾನಕಿ ದೇವಿ
ಬಂದಾಳು ರಾಮರೆಡೆಗೆ ।
ಮಡದಿಯ ಕಡೆಗಣ್ಣು ನೋಡಿದ ಶ್ರೀ ರಾಮ
ಕಡೆಮುದ್ದು ಮುಖವುಬಾಡಿದವು ೬೦

ಹೊಂಬಣ್ಣ ಅರಸಿನ ಹೋಲುವ ಮೈಬಣ್ಣ
ಚಂದ್ರಮನ ಪ್ರಭೆ ಮುಖಕಾಂತಿ ।
ಚಂದಾದ ಮೇಘವು ಹೊಳೆವಂಥ ನಯನವು
ಕಂದಿಕುಂದಿದ ಪರಿಯೇನೆ । ೬೧

ಅಂದರೆ ಜಾನಕಿ ಅಂಜಿ ಧರೆಗಿಳಿದಳು
ಕಂಗೆಟ್ಟು ನುಡಿದಳಾಗ ।
ಇಂದು ನಾ ಮಂಚದಲಿ ಒಬ್ಬಳೆ ಮಲಗಿದ್ದೆ
ಕಂಡೆನು ದುಷ್ಟಕನಸನು ೬೨

ಹಿಂಡುದೇವರ ಗಂಡ ಎಂಬೊ ಬಿರುದು ಎನಗೆ
ಹೊಂದಿತಲ್ಲವೆ ದುರಿತವನು ।
ಬಂದಮಾರಿಯನು ಹಿಂಡಿಬಿಸಾಡುವೆ
ಬಿಡುನಿನ್ನ ಮನದ ಭಯವನು ೬೩

ಅಂದರೆ ಜಾನಕಿ ಸುಮ್ಮನೆ ಇದ್ದುದು ಕಂಡು
ಬಂದ ಮಜ್ಜನ ಮಂಟಪಕೆ ।
ಮಿಂದು ಮಡಿಯನುಟ್ಟು ಗಂಧ ಕಸ್ತೂರಿನಿಟ್ಟು
ಚಂದಾದ ಉಡುಗೊರೆ ಹೊದ್ದು ೬೪

ಅಂಗನೆ ಜಾನಕಿದೇವಿ ಒಡಗೊಂಡು ಶ್ರೀರಾಮ
ಬಂದ ಭೋಜನದರಮನಿಗೆ ।
ಭೋಜನ ಶಾಲೆಗೆ ಬಂದರಾಮ ಆಗಲೆ
ಕರೆಸಿದ ಪ್ರಿಯ ಬಾಂಧವರ ೬೫

ಬಂದರು ಮಂತ್ರಿ ಮಾನ್ಯೇರು ಸ್ನೇಹಿತರು
ಬಂದರು ಹನುಮನಂಗಜ ಸುಗ್ರೀವರು
ಬಂದರು ಭರತ ಶತ್ರುಘ್ನರು ಲಕ್ಷ್ಮಣರು
ಅಂದು ಶ್ರೀರಾಮರ ಪಂಕ್ತಿಭೋಜನಕೆ ೬೬

ಯತಿಗಳು ಋಷಿಯರು ತಪಸ್ಸಿನ ಹಿರಿಯರು
ಯತಿ ಸನ್ಯಾಸಿಯೋಗಿಹಂಸರು ।
ಪ್ರತಿ ವರ್ಷ ರಾಮರ ಪಂಕ್ತಿಭೋಜನಕೆ
ಅತಿಸ್ನೇಹದಿಂದ ಬಂದು ಕುಳಿತರು ೬೭

ಎಡಭಾಗದಲಿ ಮಂತ್ರಿ ಮಾನ್ಯರುಬಲಭಾಗ
ದಲಿ ಯತಿಗಳುಋಷಿಗಳು ನಡುವೆ ।
ನಡುವೆ ಶ್ರೀರಾಮರ ತೊಡೆಯಲಿ ಸೀತೆ
ಕೂಡುವ ಚಲ್ವಪಂಕ್ತಿಗಳು ಒಪ್ಪಿದುವು ೬೮

ಇಟ್ಟರು ಸುತ್ತಾಲಿ ದೀವಿಗೆಗಳನು
ಇಟ್ಟರು ಸುತ್ತಾಲಿ ರನ್ನದಡ್ಡಣಿಗೆ ।
ಇಟ್ಟರು ಸುತ್ತಾಲಿ ಚಿನ್ನದ ಹರಿವಾಣ
ಇಟ್ಟರು ಕೆಲದಲಿ ಪನ್ನೀರು ಪಾತ್ರಿ ೬೯

ಕುಡಿ ನೀರು ಗಿಂಡೀನೆ ತಂದು
ದೊರೆಗಳ ಪಂಕ್ತಿಲಿ ಇಳಿವಿದರಾಗ
ಸೀನೀರ ಗಿಂಡೀನೆ ತಂದು ಬೇಗ
ಶ್ರೀರಾಮರ ಕೆಲವಿಳಿವಿದರು ೭೦

ಉಪ್ಪು ಉಪ್ಪಿನ ಕಾಯಿ ಹಪ್ಪಳ ಸಂಡಿಗಿ
ಮಿತ್ರೇರೆಲ್ಲಿ ಬಡಿಸಲೊಪ್ಪಿದರು
ಹಾಗಲಧ್ವೀರೀ ಹಂದರದವರಿಸಾರು
ಪಡುವಲ ಕುಂಬಳಕಾಯಿ ಸಾರು ೭೧

ಪಳಿದ್ಯ ಸೀಸಾರು ನಾರೇರೆಲ್ಲ ಬಡಿಸಲೊಪ್ಪಿದರು
ಪುಷ್ಪಮಂಜರದ ಅಕ್ಕಿ ಅನ್ನ ಒಪ್ಪೋಕಡಲೆಬೇಳೆ
ತಪ್ವಿಗಳು ಒಪ್ಪೋ ಭಕ್ಷ ಪರಮಾನ್ನ
ಮಿತ್ರೇರೆಲ್ಲ ಬಡಿಸಲೊಪ್ಪಿದರು ೭೨

ದೇವ ಋಷಿಗಳಾಪೋಷಣೆಗೊಂಡರು
ರಾಮಲಕ್ಷ್ಮಣರಾಪೋಷಣೆಗೊಂಡು
ಅಂದು ಸೀತೆಗೆ ಊಟವು ಸೊಗಸದು
ಚಂದದ ನಗೆ ನುಡಿ ಸೇರದು ೭೩

ತಂಡತಂಡದಲಿ । ಅಜ್ಯ ಭಕ್ಷವನು
ತಂದು ಬಡಿಸಿದರು ಉಂಡು ದಣಿವಂತೆ
ಉಂಡುಕೈತೊಳೆದರು ವಿಪ್ರರೆಲ್ಲಾ ೭೪

ಕೊಂಡರು ಕಿರಿಗಟ್ಟಿ ಕರ್ಪೂರದ್ವೀಳ್ಯವನು
ಪುಂಡರಿಕಾಕ್ಷರಾಮ ಶರಣು ಎನುತ
ಬಂದರು ತಮ್ಮ ಬಿಡಾರಕ್ಕೆ ೭೫

ಅಂಜುವ ಸೀತೆಯ ಕೈಹಿಡಿದು ಶ್ರೀರಾಮ
ಬಂದು ಕುಳಿತ ಸಿಂಹಾಸನದ ಮೇಲೆ
ತಂದಿಯ ಕಾಲದ ಹಿರಿದೊಡ್ಡ ಸಿಂಹಾಸನ
ತುಂಡಾದವೆರಡು ಭಾಗದಲಿ ೭೬

ಇಂದೇನು ಕಾರಣವೆನುತ ಶ್ರೀರಾಮರು
ಬಂದು ಲಕ್ಷ್ಮಣನ ಕೇಳಿದರು
ಅಂಗನೆಯ ಕೂಡ ಸಿಂಹಾಸನವೇರಿದೆ
ತುಂಡಾದವೆರಡು ಭಾಗದಲಿ
ಇಂದೇನು ಕಾರಣವೆನುತ ಶ್ರೀರಾಮರು
ಬಂದು ಹಾಸುಕಿಯ ತೆಗೆದರು ೭೭

ಹಾಸುಕೆ ತೆಗೆಯಲು ಹತ್ತುತಲೆಯ ಕಂಡು
ಆಶ್ಚರ್ಯ ಪಟ್ಟು ನಸುನಕ್ಕು
ಏಸುದಿವಸ ಗಾಸಿಯಾಗಿ ಬರೆದೆ ಇವನ
ಏಸುದಿವಸ ಭೋಗಿಸಿದೆ ೭೮

ಮೋಸಮಾಡಿದೆ ಸೀತೆ ಎನಕೂಡ ಹೇಳದೆ
ಘಾತವಾಯಿತು ದೇವಿ ಎಂದ
ಇಂದು ನಿನ್ನಪ್ರಿಯನು ಎಂಬೋದುಂಟಾದರೆ
ಹೊಂದಿಸಿ ಬಿಡುವೆನಿಬ್ಬರನು ೭೯

ಇಂದ್ಯಾಕೆ ಈ ಮಾಯಕೊಳಗಾದಿ ಎಲೆ ದೇವಿ
ಕೊಂದುಹಾಕುವೆ ರಾವಣನ
ಹೆಂಗಸು ಹೆಡತಾಲಿಮಿರ್ತ್ತು ಎಂಬೋರು ಜನರು
ಇಂದು ಕಂಡೆನೆ ಸಾದೃಶವ ೮೦

ಹೆಂಗಸು ಗೆದ್ದವರಿಲ್ಲ ಲೋಕದೊಳಗೆ
ಇಂದು ಮೋಸಮಾಡಿಯನ್ನ
ಬಂದ ಸನ್ಯಾಸಿಯ ಒಡಕೊಂಡು ನೀ ಹೋದಿ
ಹಿಂದಟ್ಟಿ ನಾ ಯೆಳ ತಂದೆ ೮೧

ಭೂಮಿದೇವಿ ಮಗಳೆಂದು ನಾ ತಂದೆನೆ
ನಾಡೊಳಗೆ ಪತಿವ್ರತೆ ಎಂದು
ಪ್ರಾಣದೊಲ್ಲಭೆ ಸತಿ ಎಂದು ನಂಬಿದೆ
ರಾವಣಗೆ ಮರುಳಾಗೋದರಿಯೆ ೮೨

ಅಸುರ ಸಂಹರನೆಂಬೊ ಹೆಸರು ನಾ ಹೊತ್ತೆನೆ
ವಸವಲ್ಲದ ಧನುವನೆತ್ತಿದೆನೆ
ಸಸಿಮುಖಿ ನೀಯೆನ್ನ ಸತಿಯೆಂದು ನಂಬಿದೆ
ಅಸುರಾಗೆ ಮರುಳಾಗೋದರಿಯೆ ೮೩

ಭೂಮಿದೇವಿ ಮಗಳಾಗಿ ನಾ ಜನಿಸಿದೆ
ನಾಡದೇವರ ಮರೆಹೊಕ್ಕೆ ।
ರಾಮರ ಪಾದವೆ ಗತಿ ಎಂದು ನಂಬಿದೆ
ಮಾರಿ ಬಾಹೋದು ನಾ ಕಾಣಲಿಲ್ಲ ೮೪

ತಾಟಗಿತ್ತಿ ಬಂದು ಪಾಪಕ್ಕೆ ಪಠ ಬರೆದು
ನೂಕಿಬಿಟ್ಟಳು ಎನ್ನಮೇಲೆ ।
ಬಂದ ಮಾರಿ ಒಲ್ಲೆನೆಂದರೆ ಬಿಡುವುದೇ
ಇದು ನನ್ನ ವಿಧಿ ಕಾಡಲಾಗಿ ೮೫

ಕಂಡಿರೆ ಮಂತ್ರಿಮಾನ್ಯೇರು ಪ್ರಹಸ್ತರು
ಕಂಡಿರೆ ಪ್ರಧಾನರು ।
ಕಂಡಿರೆ ಹನುಮನಂಗಜ ಸುಗ್ರೀವರು
ಮಂದಿಯೊಳಗಿದು ಸಮ್ಮತವೆ ೮೬

ನೋಡಿರೆ ಮಂತ್ರಿಮಾನ್ಯೇರು ಪ್ರಹಸ್ತರು
ನೋಡೀರೆ ಪ್ರಧಾನರು ।
ನೋಡಿರೆ ಹನುಮನಂಗಜ ಸುಗ್ರೀವರು
ನಾಡೊಳಗಿದು ಸಮ್ಮತವೆ ೮೭

ಅಂದು ಲಕ್ಷ್ಮಣ ಸೀತೆ ಅರಸನಾ ಪಠವನು
ಚಂದಾಗಿ ಮಾತಾಡಿಸೆಂದ
ಇಂದಿನ ಆಗಭೋಗದ ನಗೆನುಡಿಗಳು
ಇಂದು ಕಳೆಯೆ ನಿನ್ನ ಭ್ರಮೆಯ ೮೮

ಅಂದರೆ ಲಕ್ಷ್ಮಣ ಕೊಂದುಹಾಕಿದ ಪಠ
ತಂದು ಶ್ರೀರಾಮಗೊಪ್ಪಿಸಿದ ।
ಪಠ ಬಿದ್ದಲ್ಲಿಗೆ ಸಂಧ್ಯೊಂದು ಮುಗಿಯಿತು
ಮುಂದೆ ವನವಾಸಸಂಧಿಗಳು ೮೯

ಅಂಗನೆ ಜಾನಕಿ ನಿನ್ನ ಬಂಗಾರದೊಡವಿಯನು
ಚಂದಾದ ಪೆಟ್ಟಿಗೆಗೆ ತುಂಬು ।
ಅಂಗಲ್ಯಾಭರಣವು ಮಾಂಗಲ್ಯ ಸೂತ್ರವು
ಚಂದಾದ ಬೆರಳ ಮುದ್ರಿಕೆಯು ೯೦

ಚಂದಾದ ಮೂಗುತಿ ಐದು ಕಡಾಗವು
ಇಂದು ಲಕ್ಷ್ಮಣ ಕೈಯ್ಯಲಿರಲಿ ।
ಅಂದರೆ ಜಾನಕಿ ತನ್ನ ಬಂಗಾರ ತೊಡುಗೇನ
ಒಂದೊಂದಾಗಿ ಬಿಚ್ಚಿದಳು ೯೧

ಚಂದ್ರಿಕೆ ಕಳೆದಳು ಬಿಳಿದಾಳುಟ್ಟಾಳು ಭಾಮೆ
ಚಂದದ ವಾಲೆ ತೊಟ್ಲು ।
ಚಂದದ ಕಾಜಿನ ಬಳೆಯಲ್ಲದೊಂದಿಲ್ಲ
ಬಂದೊಪ್ಪಿದಳು ರಾಮರೆಡೆಗೆ ೯೨

ಚಂದದ ಪೆಟ್ಟಿಗ್ಗೆ ತುಂಬಿ ಮುದ್ರಿಕೆ ಹಾಕಿ
ತಂದು ಶ್ರೀ ರಾಮಾಗೊಪ್ಪಿಸಿದ್ಲು ।
ಮುಂದಿನ ಜನ್ಮಕ್ಕೆ ನಿಮ್ಮನಿಯ ದಾಸ್ಯಾ
ಗೆಂದು ನಂಬಿ ವರವ ಕೊಡೆಂದ್ಲು ೯೩

ಮುಂದಿನ ಜನ್ಮಕ್ಕೆ ನನ್ನ ಸತಿಯೆ ನೀನು
ಇಂದಿಗೆ ಹೋಗಿ ಬಾ ಎಂದ ।
ದೇವ ಲಕ್ಷ್ಮಣ ನಮ್ಮ ದೇವಿಯ ಕರದೊಯ್ದು
ಕಾನನದಡವಿಯ ವಳಗೆ ೯೪

ದೇವಿಗೆ ವನಭೋಜನವ ಮಾಡಿ ಬಾ ಎಂದು
ದೇವ ಲಕ್ಷ್ಮಣಗ್ಹೇಳಿದನು ।
ಸ್ತ್ರೀಹತ್ಯ ಶಿಶುಹತ್ಯ ಗುರುಹತ್ಯ
ಬ್ರಹ್ಮಹತ್ಯ ಮಾಡಿದವರಿಗೆ ೯೫

ಇಂದು ಲೋಕದೊಳಿಲ್ಲ ಸ್ವರ್ಗದ ಗತಿ ಇಲ್ಲ
ತ್ರತಸ್ಯನಾಗಿ (ತ್ರಿಶಂಕು ?) ತೊಳಲುವುದು ॥
ಇಂಥ ಪಾತಕವು ನಾನೆಂತು ಮಾಡಲಿ ಎಂದು
ಚಿಂತಿಸಿದನು ಲಕ್ಷುಮಣನು ೯೬

ಆಳುಕೊಂದ ಪಾಪ ಅರಸಿ ಮಾಡಿದ ಪಾಪ
ಭೂಮಿಯನಾಳುವರಾಯರಿಗೆ ।
ಆಲಸ್ಯವ್ಯಾಕಿನ್ನು ಅರಮನೆಯಿಂ ಹೊರಡೆಂದು
ರಾಯಗದರಿಸಿ ನುಡಿದಾನಾಗ ೯೭

ಅರಮನೆಯಿಂ ಹೊರಡಲು ಕರವನ್ನೆಗಹಿರೆಂದು
ನಡುಮನಿಕಂಬ ತಳರೇಕೆ ।
ಮಡದಿ ಮಕ್ಕಳ ಪಡೆದು ಮರಳಿಬರುವರೆಂದು
ಗ್ರಾ ದೇವತೆ ವಡನುಡಿಯೆ ೯೮

ಅಂಗಳ ಹೊರಡಲಿ ಮಂಗಳಾರುತಿ ಕಂಡು
ತುಂಬಿದ ಕೊಡ ಎರಡು ಕಂಡು ।
ಅಂಗನೆಯರೆಲ್ಲರು ಶುಭವಾಗಲೆನುತಲಿ
ಬಂದರು ಪುರದ ಬಾಗಿಲಿಗೆ ೯೯

ಪುರದ ಬಾಗಿಲಲಿ ದ್ವಯ ಹಂಸ ಕಂಡು
ಗರುಡನ ತೆಕ್ಕೆಯ ಕಂಡು ।
ಹಿರಿಯ ಬ್ರಹ್ಮರ ಕಂಡು ನರಿಗಳೆರಡರ ಕಂಡು
ಶುಭವಾದವೆನುತ ನುಡಿದರು ೧೦೦

ಅಳುವ ಕಾಲಕಿನ್ನು ಅನುಮಾನವೇತಕ್ಕೆ
ಶುಭಗಳಿನ್ಯಾತಕೆ ನಮಗೆ
ಶುಭಗಳೆಲ್ಲವು ನಮ್ಮ ಧರಣೀಶಗಾಗಲಿ
ಕಿರಿಯ ಲಕ್ಷ್ಮಣಗಾಗಲೆಂದ್ಲು । ೧೦೧

ಅಂದು ಅಯೋಧ್ಯದ ಪುರದ ನಾರೇರೆಲ್ಲ
ರಾಮರಿಗೆ ಬಿನ್ನಪ ಮಾಡೆ ।
ದೇವಿಯ ತಪ್ಪನು ಕಾಯಬೇಕೆನುತಲಿ
ಪಾದಕ್ಕೆರಗಿದರು ನಾರೇರು ೧೦೨

ಇಂದಿನ ತಪ್ಪನು ಕಾದರೇನಹುದು
ಎಂದಿಗಾದರು ಸೀತೆ ಅಸುರರ ।
ಕೂಡಿದವಳು ಮುಂದೆ ನಮಗೆ ಆಗೋಳಲ್ಲ ೧೦೩

ಕಾಣದವರು ನೀವು ಕೇಳಬಹುದು ತಾಯೆ
ಬಾಳನೊಂದೆನು ಈಕೆ ಕೂಡ
ಮಾಯಾಚೊರಿ ಈಕೆ ಮರ್ಮಕಂಡವರಿಲ್ಲ
ನಾ ಬಲ್ಲೆ ಈಕೆಯ ಗುಣವಾ ೧೦೪

ನೆರೆದಿದ್ದನಾರೇರು ಕರವೆತ್ತಿ ಮುಗಿದರು
ಧಾರುಣಿಯ ಮೇಲಡ್ಡ ಬಿದ್ದು ।
ಹಡದವರಿದ್ದರೆ ನಮ್ಮ ಮನವ ಸಂತೈಸೋರು
ಕಡೆಗಣ್ಣಲುದಕ ಕಾರೋರು ೧೦೫

ನಾರೆಯರೆಲ್ಲರು ನಡದು ಬಂದಿರಿ ದೂರ
ಮರಳಿ ಹೋಗ್ರಮ್ಮ ಮನೆಗಳಿಗೆ ।
ಧರಣೀಶ ಪತಿರಾಮ ಅಳಲುತರಿದ್ದರು
ಮನವ ಸಂತೈಸಲ್ಹೋಗ್ರಮ್ಮ ೧೦೬

ನಾರೇರೆಲ್ಲರ ಪುರಕೆ ಕಳುಹಿಸಿ ಸೀತೆ
ನಡೆದಳೂ ತಾಮುಂದೆ ಪಥವ ।
ನಡೆದು ಬರಲಾರೆ ಕಿರಿಯಲಕ್ಷ್ಮಣ ದೇವ
ವಡೆಯರ್ಹೇಳಿದ ಬುದ್ಧಿ ಕಲಿಸೆ ೧೦೭

ಅಡವಿಯ ಫಲಗಳು ಮಡುವಿನ ಉದಕವು
ತಳಿಲೆಲೆಯ ಮೇಲೆ ಹಾಸುಕೆಯು ।
ಹದಿನಾಲ್ಕು ವರುಷ ಪರಿಯಂತ್ರದಿ ಕಾದಿದ್ದೆ
ಕಡಿಯಲಾರೆನು ತಾನು ಎಂದ । ೧೦೮

ಆಳಿದ ವಡೆಯರು ಹೇಳಿದುದ್ಯೋಗವ
ಮಾಡಿದವರಿಗೆ ಪಾಪವಿಲ್ಲ ।
ಕಡಿದುಯನ್ನಕಾಯ ಕೆಡವಿನಿನ್ಹೋಗಿ
ವಡೆಯರಾಮರ ಕೂಡೆಂದ್ಲು ೧೦೯

ಒಂದು ಬಾರಿ ಖಂಡೆಯ ಸೆಳದ್ಹಾಕಿದಾಗ
ಚಂದದಿ ಮಾಲಿಸುತ್ತಿದವೂ ।
ಎರಡುಬಾರಿ ಖಂಡೆಯ ಸೆಳೆದ್ಹಾಕಿದ
ಗಗನದೇವತೆ ಅಡ್ಡವಾಗೆ । ೧೧೦

ಮೂರು ಬಾರಿ ಖಂಡೆಯಸೆಳೆದು ಹಾಕಿದ
ಭೂಮಿದೇವತೆ ಸಾಕ್ಷಿ ನುಡಿಯೆ ।
ಖಂಡೆಯ ನೆಳೆಯಲಿ ಕಂದರಿಬ್ಬರ (ಕಂಡು )
ಖಂಡೆಯು ನೆಲಕೆ ಜಡೆದಾನು . ೧೧೧

ಆಯುಧವ ಶೆಳೆಯಲು ಬಾಲರಿಬ್ಬರ ಕಂಡು
ಕಾರಣ ಪುರಷರಿವರೆಂದು \
ಕಾರಣವಿದ್ದೀತು ಕಥೆ ನಡೆಯಬೇಕೆಂದು
ಕಾಯವನುಳುಹಿ ತೋರಿಸಿದನೂ ೧೧೨

ಕಾಯವನುಳುಹಿದ ತಾಯಿತಂದೆದಾರು
ದಾರ ಆಸಿಯಲಿ ಬದುಕಲಿ ।
ರಾಮರರಸಿ ಸೀತೆ ಓಡಿಹೋದಳೆಂದು
ನಾಡೊಳಗೆ ಅಪಕೀರ್ತಿ ೧೧೩

ಕೆಂಡಕ್ಕೆ ಇರುವೆ ಮುತ್ತುವುದುಂಟೆ ಎಲೆದೇವಿ
ಚಂದ್ರಮಕೆ ರವಿ ಬೀಸಲುಂಟೆ ।
ಮುಂದೇಳು ಲೋಕವನ ಹೊರುವ ಜಗನ್ಮಾತೆಗೆ
ನಿಂದ್ಯಾಪಕೀರ್ತಿಗಳುಂಟೇ ೧೧೪

ಕಿಚ್ಚಿನೊಳಗೆ ಸರಸ ಬೆರಸಿದವರುಂಟೆ
ಸರ್ಪನೊಳಗೆ ಸ್ನೇಹವುಂಟೆ ।
ಸಪ್ತಸಾಗರದಲ್ಲಿ ಹುಟ್ಟಿದ ಲಕ್ಷೀಗೆ
ಮತ್ತಪಕೀರ್ತಿಗಳುಂಟೆ ೧೧೫

ಇಂದು ಅರಣ್ಯದ ಹುಲಿ ಕರಡಿ ಬಾಯಿಗೆ
ಹೊಂದಿಸ್ಹೊಗೋದುಚಿತವೆ ।
ಚೆಂದ ಕಾಯವನು ನಾಘ್ಯೇಗೆ ಹೊರೆಯಲೆಂದು
ನಿಂದೊದರಿದಳು ಆ ಸೀತೆ ೧೧೬

ತಾಯೆ ನೀ ಅಳದಿರೆ ಈ ವನವನು ಸೇರೆ
ದೇವ ರಕ್ಷಿಗಳಿಹರಿಲ್ಲಿ
ಕಾಯವು ಕೆಡದಂತೆ ದೇವಿ ಸತ್ಕಾರ್ಯವ
ಮಾಡಿ ಕಾಲವ ಕಳೆಯೆಂದ ೧೧೭

ಇಂದು ಆ ವನವನು ಹೊಂದಿಸಿ ಸೀತೆಯ
ಬಂದ ಆ ಲಕ್ಷ್ಮಣ ತನ್ನ ಪುರಕೆ ।
ಅಡವಿ ಮೃಗವ ಕಡಿದು ಆಯುಧ ರಕ್ತವ ಮಾಡಿ
ವಡೆಯರ ಮುಂದಿಳಿವಿದನು ೧೧೮

ವಡೆಯರೆ ಸೀತೆಯ ಕಡಿದು ಬಂದೆವು ನಾವು
ಅರಮನೆಯನು ಹೊಗಬಹುದೇ ।
ಕಡಿ ಎಂದ ಮಾತಿಗೆ ಕಡಿವರೆನೋ ತಮ್ಮ
ಕಡುಮುದ್ದು ಸೀತೆಯನೊಯಿದು ೧೧೯

ಹಗೆಯ ಕಳೆದಂತೆ ಆಯುಧ ರಕ್ತವಮಾಡಿ
ಎದುರಿಗೆ ತಂದು ನಿಲಿಸಿದಿಯಾ ।
ನನ್ನ ಕೋಪವ ತಾಳಿ ನಿನ್ನ ಕೈಯಲಿ ಕೊಟ್ಟೆ
ಪುಣ್ಯ ಪಾಪವು ನಿನ್ನದೆಂದೆ ೧೨೦

ಕಣ್ಣು ಮರೆಯಮಾಡಿ ವುಳುಹದೆ ಸೀತೆಯ
ತಮ್ಮ ಬಯಲಿಗೆ ನಿಲಿಸಿದಿಯ ।
ದೇವ ನಿಮ್ಮಪ್ಪಣೆ ಮೂರು ಬಾರಿ ಕೇಳಿದೆ
ದೇವಿಯನುಳಹಲಿಲ್ಲವೆಂದ ೧೨೧

ದೇವರ ಆಜ್ಞವು ಮೀರಲಾಗದು ಎಂದು
ದೇವಿ ದೃಢಮನಸು ಮಾಡಿದಳು ।
ಸಿಟ್ಟೀನಾ ವ್ಯಾಳ್ಯಕೆ ಮೂಗು ಕೊಯಿದು ಕೊಂಡರೆ
ಅಣ್ಣ ಶಾಂತ ವ್ಯಾಳ್ಯಕೆ ಹತ್ತಬಹುದೆ ೧೨೨

ಸೀತೆಯ ನೆನೆಯಲ್ಯಾತಕೆ ತಾಪವ ಪಡೆಯಲ್ಯಾತಕೆ
ಕೋಪವೇತಕೆ ಸ್ವಾಮಿ ಎಂದ ।
ಪಾಪವಿನಾಶಕೆ ಸ್ನಾನ ಪಾನವ ಮಾಡಿ
ಶೋಕನಾಶವ ಮಾಡಿದರು ೧೨೩

ಅತ್ತ ಶೋಕನಾಶವನ್ನು ಮಾಡಲು ಸೀತೆ
ಇತ್ತ ಬಂದಳು ಸೀತೆ ವನಕೆ ।
ಅತ್ತಿ ಆಲದ ಮರ ಸುತ್ತ ಹೆದ್ದುಂಮ್ಮರಿ
ಉತ್ತತ್ತಿ ಬೆಳಲು ದಾಳಿಂಬ ೧೨೪

ಇಂದು ಆ ವನವನ್ನು ಕಂಡಳು ಸೀತೆಯು
ನಿಂದಳೂ ವನದ ಮಧ್ಯದಲಿ ।
ಗಂಗೆಯ ನೀರಿಗೆ ಬಂದನಾರೇರೆಲ್ಲ
ನಿಂದೆಲ್ಲ ಜನರು ನೋಡಿದರು ೧೨೫

ಹರನ ರಾಣಿಯೊ ಈಕಿ ಸುರನ ರಾಣಿಯೊ
ಅಜನ ಪಟ್ಟದ ಸರಸ್ವತಿಯೊ।
ಹರಿನಾರಾಯಣನ ಹೃದಯದ ಲಕ್ಷ್ಮಿಯೊ
ನೆರೆದೆಲ್ಲಾ ಜನರು ನೋಡಿದರು ೧೨೬

ಇಂದ್ರನ ರಾಣಿಯೊ ಚಂದ್ರಮನ ರೋಹಿಣಿಯೊ
ಶಂಭುಶಂಕರನ ಮಡದಿಯೊ।
ಪನ್ನಂಗಧರನರಸಿ ಮಡದಿ ಸೀತಾಂಗನೆಯೊ
ನಿಂದೆಲ್ಲಾ ಜನರು ನೋಡಿದರು ೧೨೭

ತಂಡ ತಂಡದಲಿ ನೋಡಿ ನಾರೇರೆಲ್ಲ
ಬಂದು ವಾಲ್ಮಿಕಿಗ್ಹೇಳಿದರು ।
ಬಂದು ಹೇಳಲು ಮುನಿ ಕಂಡನು ಸೀತೆಯ
ಬನ್ನಿರೆಂದುಪಚರಿಸಿದನು ೧೨೮

ಇಂದು ತಾಯೆ ನಿಮಗೆ ವನದ ಪ್ರವೇಶವು
ಬಂದ ಕಾರಣವ ಹೇಳೆಂದ।
ತಾಟಗಿತ್ತಿ ಬಂದು ಪಾಪಕ್ಕೆ ಪಟ ಬರೆದು
ನೂಕಿಬಿಟ್ಟಳು ಯನ್ನ ಮೇಲೆ ೧೨೯

ಅಂದು ಶ್ರೀ ರಾಮರು ಕೊಂದು ಬಾ ಎಂದರೆ
ತಂದುಳುಹಿದ ಲಕ್ಷ್ಮಣನು ।
ಬೆಂದಕಾಯವ ನಾನು ಹೇಗೆ ಹೊರೆಯಲೆಂದು
ನಿಂದೊದರಿದಳು ಆ ಸೀತೆ ೧೩೦

ಆದರೇನಾಯಿತು ತಾಯಿ ಚಿಂತಿತೆಗಳ್ಯಾಕೆ
ಇಂದು ನಮ್ಮ ಆಶ್ರಮದೊಳಗೆ।
ಕಂದಾರ ಪಡೆದು ಸುಖದಲೆ ಇರುತಾಯೆ
ಮುಂದಕ್ಕೆ ಜಯಪ್ರದವುಂಟು ೧೩೧

ಆಗ ವಾಲ್ಮಿಕನು ನಾರೀಯ ಕರೆದನು
ಬಾಲೆಯನುಪಚರಿಸೆಂದು
ಆಗ ಶಶಿಲದೇವಿ ಬಾಲೆಯನುಪಚರಿಸಿ
ಕೂಡಿ ಬಂದು ತಮ್ಮ ಮನೆಗೆ ೧೩೨

ನಾರೆರೆಲ್ಲರು ಪನ್ನೀರ ಬೆರಸೋರು
ದೇವಿಗೆ ಅಭಿಷೇಕ ಮಾಡುವರು ।
ಹಾರ ಮಾಣಿಕನಿಟ್ಟು ದೇವಾಂಗನುಡಕೊಟ್ಟು
ಹಾಲು ಸಕ್ಕರೆ ಉಣಲಿಟ್ಟು ೧೩೩

ತೂಗೋ ಮಂಚದ ಮೇಲೆ ಮಡದೆಲೆ ಮಡಿಸೊರೊ
ದೇವಿ ಇದ್ದಳು ಸುಖರಾತ್ರಿ
ಅಂದಿಗೆ ಆರು ತಿಂಗಳು ಗರ್ಭ ದೇವಿಗೆ
ಸೀಮಂತ ಮಾಡಬೇಕೆಂದರು ೧೩೪

ನೊಸಲಿಗೆ ತಂದರು ಬೇಗ ಹೊಸ ಮುತ್ತೀನಾಕ್ಷತೆ
ಋಷಿ ಪತ್ನೇರು ಕರೆವುದಕೇ
ಏನು ಶಶಿಲಾದೇವಿ ನೀನು ನಡೆದು ಬಂದಿ
ಏನು ಬಾಗಿಣ ಏನುವ್ರತವು ೧೩೫

ರಾಮರರಸಿ ವನ ಭೋಜನಕೆ ಬಂದಾಳೆ
ಈ ವನದೊಳಗೆ ಪ್ರವೇಶ ।
ದೇವ ಋಷಿಗಳು ನಾರೇರೆಲ್ಲರು
ನಮ್ಮ ದೇವಿ ಸೇವೆ ಮಾಡ ಬನ್ನಿ ೧೩೬

ಬಂದಾನಾರೇರೆಲ್ಲ ಚಂದದ ಹಸೆಹಾಕಿ
ಅಂಗನೇಯ ಕರೆದು ಕುಳ್ಳರಿಸಿ ।
ಚಂದದ ಅಕ್ಷತೆ ಹರಸಿ ಹಣೆಗಿಟ್ಟು
ತಂದು ಕಂಪೆಣ್ಣೆ ಒತ್ತುವರು ೧೩೭

ಪೊಂಗೊಡಲುದಕವ ಅಂಗನೇಗೆ ಎರೆದರು
ತಂದು ದೇವಾಂಗದುಡುಕೊಟ್ಟು ।
ಚಂದದ ನೊಸಲಿಗೆ ಗಂಧ ಚಂದ್ರವನಿಟ್ಟು
ಬಂಗಾರ ತಂದು ಇಳವಿದರು ೧೩೮

ರಾಮರನಗಲಿ ನಮಗೆ ಸೀಮಂತವೇತಕ್ಕೆ
ದಾವದುತ್ಸವವಿನ್ಯಾಕೆ
ತಾಯಿತಂದೆ ನಿಮ್ಮ ನೆರಳಲ್ಲಿ ಸೇರಿಹೆನು
ರಾಮರ ಭಜಿಸುತ್ತಲಿಹೆನು ೧೩೯

ಆದರೇನಾಯಿತು ತಾಯಿ ಚಿಂತೆಗಳ್ಯಾಕೆ
ನಾರೇರಿಗೆ ತವರುಮನೆಯು ।
ತಾಯಿತಂದೇರು ಕಣ್ಣೆತ್ತಿ ನೋಡೋರು
ಹುವ್ವಮುಡಿಸುವ ಕ್ರಮವೆಂದ್ರು ೧೪೦

ಸಣ್ಣ ಮಲ್ಲಿಗೆ ದಂಡೆ ಸೂಸಕ ಮುಡಿದಂಡೆ
ರನ್ನಮಾಣಿಕ್ಯದ ತೊಂಡಲವು ।
ಪನ್ನಗಧರನರಸಿ ಮಡದಿ ಸೀತಾಂಗನೆಗೆ
ಸಣ್ಣಮಲ್ಲಿಗೆ ಮುಡಿಸೋರು ೧೪೧

ಅಚ್ಚಮಲ್ಲಿಗೆ ದಂಡೆ ಸೂಸಕ ಮುಡಿದಂಡೆ
ಮುತ್ತು ಮಾಣಿಕದ ತೊಂಡಲವು।
ಪಕ್ಷಿವಾಹನನರಸಿ ಮಡದಿ ಸೀತಾಂಗನೆಗೆ
ಅಚ್ಚಮಲ್ಲಿಗೆ ಮುಡಿಸೋರು ೧೪೨

ಮಾಟಮುತ್ತಿನ ರಾಜನೇಮಿತ್ತ್ರೇ(?) ರುಡಿಯತುಂಬಿ
ಮುತ್ತಿನ ಅಕ್ಷತೆ ಹಣೆಗಿಟ್ಟು ।
ಪುತ್ರರ ಪಡೆದು ಶ್ರೀರಾಮರ ಕೂಡೆಂದು
ಮುತ್ತಿನಾರತಿಯ ಮಾಡೊರೂ ೧೪೩

ಆಗ ಬ್ರಾಹ್ಮಣರೆಲ್ಲ ವೇದ ಮಂತ್ರವ ಹೇಳಿ
ಬಾಲರಪಡೆದು ಸುಖದಲ್ಲಿ ।
ಶ್ರೀರಾಮರ ಕೂಡಿ ಅಯೋಧ್ಯೆಯ ಆಳೆಂದು
ಮೋದದಕ್ಷತೆ ತಳೆದರು ೧೪೪

ಅಂದು ವಾಲ್ಮಿಕನ ಆಶ್ರಮದೊಳಗೆಲ್ಲ
ಭೋಜನಪಂಕ್ತಿ ಸಾಗಿದವು
ಹಾಲುಂಡಿ ಹೊಯ್ಗಡುಬು ಕ್ಷೀರ ಶಾವಿಗಿ ಘೃತ
ಶಾಲ್ಯಾನ್ನ ಶಾಕ ಪಾಕಗಳು ೧೪೫

ಚಂದದ ಅಜ್ಯ ಭಕ್ಷ್ಯವು ಪರಮಾನ್ನವು
ತಂದು ಬಡಿಸೋರು ನಾರೇರು ।
ಆಗ ಶಶಿಲದೇವಿ ತುಪ್ಪವ ಬಡಿಸಲು
ಭ್ಯೋಜಂತ್ರವೆಂದ್ರು ನಾರೇರೂ ೧೪೬

ಉಂಡು ಕೈತೊಳೆದರು ಕೊಂಡು ತಾಂಬೂಲವ
ಬಂದು ಸೀತೆಗೆ ಕೈಯ ಮುಗಿದು
ಅಂದು ವಾಲ್ಮಿಕನ ಮಹಿಮೆಯ ಪೊಗಳುತ್ತ
ಬಂದರು ತಮ್ಮ ಆಶ್ರಮಕೆ ೧೪೭

ನವಮಾಸ ತುಂಬಿತು ಮೈಭಾರವಿಸಿತು
ಲಲನೆ ಮಕ್ಕಳ ಪಡೆದಳಂದೂ।
ನಾರೇರೆಲ್ಲರು ವಾಲ್ಮಿಕಗ್ಹೇಳಲು ದೇವಿ
ಮಕ್ಕಳ ಪಡೆದಳೆಂದು ೧೪೮

ಕೇಳಿ ವಾಲ್ಮಿಕನು ಬಹಳ ಸಂತೋಷದಲೆ
ವ್ಯಾಳ್ಯಮುಹೂರ್ತಗಳ ನೋಡಿದನು ।
ಶುಭವಾರ ಶುಭತಿಥಿ ಶುಭಯೋಗ ಶುಭಕರಣ
ಶುಭಲಗ್ನ ಶುಭದನಕ್ಷತ್ರ ೧೪೯

ಚಂದ್ರವು ತಾರಾಬಲ ಅಮೃತ ಸಿದ್ಧಿಯೋಗವೂ
ಇಂದಿನ ದಿನಕರ ಲೇಸು ।
ಬಾಲರು ಜನಿಸಿದ ವ್ಯಾಳ್ಯ ಬಲವಂತರು
ಬಾಲರು ರಾಜ್ಯವಾಳುವರೂ ೧೫೦

ಅಂದು ರಾಮರ ಸೀತೆ ಮಂಡೆಕಟ್ಟನು ಕಟ್ಟಿ
ಕಂದಾರ ಸೋಗಿಲೊಳಿಟ್ಟೊ ।
ಮುಂದೆ ಶ್ರೀರಾಮರ ಪಾದವೆ ಗತಿ ಎಂದು
ಬಂದು ಮಂಚದಲಿ ಮಲಗಿದಳು ೧೫೧

ಶ್ರೀ ರಾಮ ಶರಣೆನ್ನಿ ಶ್ರೀ ರಾಮ ಶರಣೆನ್ನಿ
ಶ್ರೀ ರಾಮ ಶರಣೆನ್ನಿ ಜನರು ।
ಮಡದಿ ಮಕ್ಕಳ ಪಡೆದು ಮಂಚದಲೊಪ್ಪಿದಳು
ನಾರಾಯಣ ಶರಣೆನ್ನಿ ೧೫೨

ಹತ್ತನೆ ದಿನದ ಕುಯಿಲು ನಿಂದು ಜಾನಕಿ
ಒಪ್ಪುವ ಬೇವು ಕುಡುಗೋಲು ।
ಮಿತ್ರೆರೆಲ್ಲರು ಕುಯಿಲೊಕ್ಕು ಮಿಂದರು
ಅರ್ತಿ ಯೀರ್ಲು ಮಾಡೋರು ೧೫೩

ಕಂದನ್ನೆತ್ತಿ ಸೀತೆ ನೀರ ಹೊಳೆಗ್ಹೋಗೆ
ವಾನರಂಗಳು ವಯ್ದುವೆಂದು ।
ದೇವಿ ಮುನಿದರೆ ಶಾಪತಟ್ಟುವುದೆಂದು
ಬಾಲನ ದರ್ಭೆಯಲಿ ನಿರ್ಮಿಸಿದ ೧೫೪

ರಾಮಾಮೃತವೆಂಬೊ ಜೀವಕಳೆ ತುಂಬಿ
ಬಾಲನ ನಿರ್ಮಿಸಿದನಾಗೆ ।
ಕಂದನೆತ್ತಿ ಸೀತೆ ಬಂದಳು ವಳಗೆ
ತಂದೆಯ ಕರೆದು ಹೇಳಿದಳು ೧೫೫

ಇಂದು ನಮ್ಮ ತೊಟ್ಟಿಲೊಳಗೆ ಮಲಗಿರುವ
ಕಂದಯ್ಯ ಯಾರ ಬಾಲಕನೋ
ವನದೊಳಗ್ಹಾಸಿಗೆ ಇಲ್ಲದಿರಲು ಕಂಡು
ವಾನರಂಗಳೊಯ್ದರೆಂದು ೧೫೬

ನೀನು ಮುನಿದರೆ ಎನಗೆ ಶಾಪ ಬರುವದೆಂದು
ಬಾಲನ ದರ್ಭೆಯಲಿ ನಿರ್ಮಿಸಿದೆ ।
ರಾಮಾಮೃತವೆಂಬೋ ಜೀವಕಳೆಯ ತುಂಬಿ
ಬಾಲನ ನಿರ್ಮಿಸಿದೆನೆಂದ ೧೫೭

ಅಂದರೆ ಜಾನಕಿ ನಂಬಿಗೆ ಪಟ್ಟಳು
ತಂದೆಯ ಕರೆದು ಕೇಳಿದಳು ।
ಆತನು ಹಿರಿಯನು ಈತನು ಕಿರಿಯನು
ಸೀತೆಗವಳಿ ಮಕ್ಕಳೆಂದು ೧೫೮

ಲೋಕಮಾತೆ ಪೆತ್ತಮಕ್ಕಳು ಲವ ಕುಶರು
ನಾಲ್ಕುವೇದವ ಸಾರುತಿಹರು।
ಹನ್ನೆರಡನೆ ದಿನದಲ್ಲಿ ಪುಣ್ಯಾವರ್ಚನೆ ಮಾಡಿ
ಚೆನ್ನಾಗಿ ಋಷಿಗಳ ಕರೆಸಿ ೧೫೯

ಗಂಧ ಅಕ್ಷತೆ ತಾಂಬೂಲ ದಕ್ಷಿಣೆ ಕೊಟ್ಟು
ಬಂದು ಕಲಶವ ಪೂಜೆ ಮಾಡಿ।
ಹೊನ್ನಹರಿವಾಣದಲಿ ಹೊನ್ನಕ್ಕಿ ಉಂಗುರ
ಕನ್ಯೇರು ತಂದು ಇಳುವಿದರು ೧೬೦

ಚಿನ್ನರಿಬ್ಬರ ನಾಮನಕ್ಷತ್ರ ಬರೆವುದಕೆ
ಚೆನ್ನಾಗಿ ಮುನಿಗಳ ಕರೆಸಿದರು
ಜಾತಕರ್ಮವ ಮಾಡಿ ಮಧುವಿಟ್ಟು ಮುದದಿಂದ
ವಾಲ್ಮಿಕ ದಕ್ಷಿಣೆಯ ಕೊಟ್ಟನು ೧೬೧

ಪ್ರೀತಿಯಿಂದಲಿ ದೇವರ್ಕಳು ತಂದರು
ಜಾತಿ ಪಟ್ಟಾವಳಿ ತೊಡುಗೆ
ಸೆರಗು ಸಾವಿರಕ್ಕೆ ಬೆಲೆಯಾದ ದೇವಾಂಗವು
ಮಗಳಿಗೆ ತಂದ ವಾಲ್ಮಿಕ ೧೬೨

ಅಂದು ಆ ನಾರೇರು ತಂದರಾಭರಣವ
ತಂದರೇ ಬಾಲದೊಡಗೆಯಾ।
ಅಂಗಿಟೊಪ್ಪಿಗಿ ಅಸಲಿ ಪೂತ ಪತಿಗಳು
ಕಂದಾರ ಶೃಂಗಾರಿಸಿದರು ೧೬೩

ತಂದೆಯ ತೋಳು ತೊಡೆಯ ಮೇಲೆ ಆಡದೆ
ಕಂದರಿನ್ಯಾರಿಗೆ ಮುದ್ದೆ
ಕಂಡು ಸೀತೆಯು ತನ್ನ ಮನದಲ್ಲು ಮಾಯವು
ತುಂಬಿತು ಸಾಗರದಂತೆ ೧೬೪

ಮನದಲ್ಲುಮ್ಮಳಿಸುವತಾಯಿಯ ಮುಖನೋಡಿದನು
ನುಡಿದನು ಕುಶಲ ತಾನಿಂತು
ದಾರ ನೆನೆದು ನೀವು ಮನದಲ್ಲುಮ್ಮಳಿಸಿದಿರಿ
ಬಾಲರುಪಿಡಿದು ಕಾಡಿದರು ೧೬೫

ಪಿಡಿದು ಕಾಡುವ ತನಯರನೆತ್ತಿ ಮುದ್ದಾಡಿ
ಮನದುಮ್ಮಳಿಕೆ ಹೇಳಿದಳು
ಭೂಮಿದೇವಿ ಮಗಳು ಸಾಗರೆನ ತಂದಿ
ರಾಮಭದ್ರನು ನಿಮ್ಮೊಡೆಯ ೧೬೬

ದಶರಾಥರಾಯನ ಸುತರು ನಾಲ್ವರುಂಟು
ಸತಿಯರುಂಟು ಮೂರುಮಂದಿ
ಶಶಿಮುಖಿ ಕೌಸಲ್ಯಸುತ ರಾಮಚಂದ್ರನು
ಅಸುರ ಸಂಹಾರಿ ನಿಮ್ಮಯ್ಯ ೧೬೭

ಆ ಪುರವನು ಬಿಟ್ಟು ಇಲ್ಲಿಗೇತಕೆ ಬಂದಿ
ಈತ ವಾಲ್ಮಿಕ ಎನುವರು
ಆತ ನಮ್ಮಯ್ಯಗೆ ಏನು ತಪ್ಪನು ಮಾಡಿದೆಯೊ
ನೂಕಿಬಿಟ್ಟರು ವನದಾಗೆ ೧೬೮

ತಾಟಗಿತ್ತಿ ಬಂದು ಪಾಪಕ್ಕೆ ಪಠ ಬರೆದು
ನೂಕಿಬಿಟ್ಟಳು ಯನ್ನ ಮೈಗೆ
ಬಂದಮಾರಿ ವಲ್ಲೆನೆಂದರೆ ಬಿಡುವುದೆ
ಇದು ನನ್ನ ವಿಧಿ ಕಾಡಲಾಗಿ ೧೬೯

ಮುಂಜಿ ಕೃಷ್ಣಾಂಜಿನ ದಂಡ ಕಯ್ಯಲಿ ಕೊಟ್ಟು
ಚಂದದ ಯಜ್ಞಪವಿತ್ರಾ ।
ಚಂದದ ಶ್ರೀರಾಮ ಗಾಯತ್ರಿ ಉಪದೇಶ
ಸಂಧ್ಯವಂದನವ ಕಲಿಸಿದರು ೧೭೦

ಕುಲವಿದ್ಯ ಗುರುವಿದ್ಯ ರಣವಿದ್ಯ ಧನುವಿದ್ಯ
ಹಲವು ವಿದ್ಯವ ಕಲಿಸಿದರು
ಹಲವು ವಿದ್ಯವ ತಾವು ಕಲಿತಕುಮಾರರು
ಪ್ರೌಢತ್ವದಿಂದೊಪ್ಪುತಿಹರು ೧೭೧

ಇತ್ತ ಸಿಂಗರಿಸಿದರಯೋಧ್ಯಾಪಟ್ಟಣವನ್ನು
ಚಂದದ ರಾಜ ಬೀದಿಗಳು
ಚಂದದ ಯಜ್ಞಮಂಟಪಯಾಗಶಾಲೆಯು
ಚಂದದ ಹೋಮಕುಂಡಗಳು ೧೭೨

ಪಟ್ಟಣ ಬಾಗಿಲಿಗೆ ಕಟ್ಟೋರು ತೋರಣ
ಚಿತ್ರ ವಿಚಿತ್ರ ಮಂಟಪವು
ಚಿತ್ರವಿಚಿತ್ರದ ಮೇಲು ಕಟ್ಟುಗಳಿಂದೆ
ಪಟ್ಟಣವ ಸಿಂಗರಿಸಿದರು ೧೭೩

ಹೊನ್ನಿನ ಬಾಗಿಲಿಗೆ ಸಣ್ಣಮಾವಿನ ತೊಳಲು
ಪನ್ನೀರು ತಳಿಯನೆ ಕೊಟ್ಟು
ಕನ್ನೇರು ಮುತ್ತಿನ ರಂಗವಲ್ಲಿ ಹಾಕೋರು
ಹೂವಿನ ತೋರಣ ಕಟ್ಟೋರು ೧೭೪

ಸೃಷ್ಟೀಶ ಪತಿರಾಮ ಯಜ್ಞಮಾಡುವನೆಂದು
ಅಷ್ಟದಿಕ್ಕಿನ ಜನರೆಲ್ಲಾ ।
ದಿಕ್ಕು ದಿಕ್ಕಿಂದ ರಾಯರು ಬರಬೇಕೆಂದು
ಪತ್ರವ ಬರೆಸಿ ಕಳುಹಿದರು ೧೭೫

ಪೊಡವೀಶ ಪತಿ ರಾಮಯಜ್ಞಮಾಡುವನೆಂದು
ಹದಿನಾಲ್ಕು ಲೋಕದವರೆಲ್ಲ
ದೊರೆಗಳು ರಾಯರು ಬರಬೇಕೆಂದು
ಬರೆಸಿ ಪತ್ರವ ಕಳಿಸಿದರು ೧೨೬

ಸೃಷ್ಟೀಶ ಮಾಡುವಂಥ ಯಜ್ಞ ನೋಡುವೆವೆಂದು
ಅಷ್ಟದಿಕ್ಕಿನ ಜನರೆಲ್ಲ
ದಿಕ್ಕುದಿಕ್ಕಿಂದಾರಾಯರು ಉಲುಪೆ ತಂದರು
ತಪ್ಪದಯೋಧ್ಯಾ ಪಟ್ಟಣಕೆ ೧೨೭

ತಂದರು ದಧಿಕ್ಷೀರ ಆಜ್ಯಾದ ಕೊಡಗಳು
ತಂದರು ಮಧು ಅಮೃತವನ್ನೇ ।
ತಂದರು ಯಜನದ ದರ್ಭೆಸಮಿಧೇಯ
ತಂದು ಪ್ರವರ್ಗಪಾತ್ರೆಯಲ್ಲಿ ೧೨೮

ಮಂಗಳ ಮಜ್ಜನ ಮಾಡಿ ಪೊಂಬಟ್ಟೆನಿಲದುಟ್ಟು
ತಂದು ಸುರುದಾರು ಪೊನ್ನರಾಶಿ
ಚಂದದ ಋಷಿಗಳ ವಡಗೊಂಡು ಶ್ರೀರಾಮ
ಮುಂದೆ ಹೋಮವ ತೊಡಗಿದನು ೧೨೯

ಚೆನ್ನದ ಸೀತೆಯ ವಡಗೊಂಡು ಶ್ರೀರಾಮ
ಪ್ರವರ್ಗ ಧಾರೆಯನೆರೆದಾ।
ಪ್ರವರ್ಗ ಪಾತ್ರೆಯಲ್ಲಿ ಆಜ್ಯವನೆರೆಯಲು
ಪ್ರಜ್ವಲನಾದ ಪಾವಕನು ೧೮೦

ಸೃಷ್ಟಿಯೊಳಗೆ ಉಳ್ಳ ದಾನ ಧರ್ಮಂಗಳ
ಕೊಟ್ಟನು ಶ್ರೀರಾಮಚಂದ್ರ ।
ಅಶ್ವದಾನ ಗಜದಾನವ ಮಾಡಿದ
ಗೋದಾನವ ಕೊಟ್ಟ ರಾಮ ೧೮೧

ಅನ್ನದಾನ ಕನ್ಯಾದಾನವ ಮಾಡಿದ ಚೆನ್ನಾಗಿ
ಮಹಿಷದಾನವನು
ಸುವರ್ಣದಾನವ ಮಾಡಿದ ಶ್ರೀರಾಮ
ಬ್ರಹ್ಮರಥವನೇರಿದನು ೧೮೨

ಪುಣ್ಯಮೂರುತಿ ಬಂದ ಧರ್ಮಸಿಂಹಾಸನಕೆ
ಚೆನ್ನಾಗಿ ಮಂಗಳಾಕೃತಿಯ
ಚೆನ್ನಾಗಿ ಸುರರು ಹೂಮಳೆ ಕರೆದರು
ಅಗ್ನಿ ಶಾಂತಿಗಳಾದವು ಅಲ್ಲಿ ೧೮೩

ದಶರಥರಾಯನ ಸುತ ರಾಮಚಂದ್ರನು
ಅಶ್ವಮೇಧ ಯಾಗವ ಮಾಡಿದನು ।
ಹೆಸರು ಬಿರುದಾವಳಿ ನೊಸಲರಿಕೆಯಕಟ್ಟಿ
ಅಶ್ವ ಬಿಟ್ಟರು ಪ್ರದಕ್ಷಿಣೆಗೆ ೧೮೪

ಭೂಮಿ ಪ್ರದಕ್ಷಿಣೆ ಮಾಡಿ ಅಶ್ವವು ಬರಲು
ಆಗ ವಾಲ್ಮಿಕನ ಆಶ್ರಮಕೆ ।
ಬಾಲರಿಬ್ಬರು ಕಂಡು ಹಿಡಿದು ಕಟ್ಟಲು ತೇಜಿ
ಆಗ ಕಂಡರು ನೊಸಲ ರೇಖೆ ೧೮೫

ಪಾದಕೆರಗಿ ತೇಜಿ ಪ್ರದಕ್ಷಿಣೆ ಮಾಡಿ
ರಾಮ ಮುದ್ರಿಕೆ ಶಿರದಲ್ಲಿಟ್ಟು
ಬಾಲರಿಬ್ಬರು ಬಂದು ತಾಯಿಗೆರಗಿದರು
ತೇಜಿಯ ತಂದೆವಮ್ಮಯ್ಯ ೧೮೬

ಎಲ್ಲಿತೇಜಿಯ ತಂದೆ ಎಲ್ಲಿ ಹುಯ್ಯಲು ತಂದೆ
ಇಲ್ಲಿ ವಾಲ್ಮಿಕನ ಆಶ್ರಮಕೆ
ಕೊಲ್ಲಲಾರದೆ ಲಕ್ಷ್ಮಣ ಉಳುಹಿ ಹೋದರೆ
ಇಲ್ಲಿಗೇತಕೆ ತಂದೆ ಮಗನೆ ೧೮೭

ಬಾಲರೆ ನಿಮಗಿಂಥ ತೇಜಿ ವಶವಾಗುವುದೆ
ತಳುವದೆ ಮೆಟ್ಟಿ ಕೊಲ್ಲುವುದು
ಮನದ ಭಯವ ತೋರಿ ಬಿಡಿ ಬಿಡಿ ಎಂದರೆ
ಹಿಡಿದೆವಮ್ಮಯ್ಯ ೧೮೮

ಅಶ್ವಸಂಗಡಲವರು ಹತ್ತುಸಾವಿರ ಕೋಟಿ
ಶತ್ರುಘ್ನ ದಂಡೆತ್ತಿ ಬಂದ
ಶಿಶುಗಳ ಕಂಡಿರಾ ಋಷಿಗಳ ಆಶ್ರಮದಾಗೆ
ವಶವಲ್ಲ ರಾಮರ ದಂಡು ೧೮೯

ಬಾಲರಿಬ್ಬರು ಬಂದು ತಾಯಿಗೆರಗಿದರು
ದಂಡುಬಂದಿದೆ ಅಮ್ಮಯ್ಯ
ಕುಶದರ್ಭಿಯಿಂದಲಿ ಬಿಲ್ಲು ಬಾಣವ ಮಾಡಿ
ಶಿಶುಗಳಿಗೆ ಕೊಟ್ಟಳಾ ಸೀತೆ ೧೯೦

ಬಿಲ್ಲುಬಾಣವ ಹಿಡಿದು ಬಂದರು ಬಾಲರು
ನಿಂದರು ತುರಗದ ಮುಂದೆ
ಕಂಡು ಶತ್ರುಘ್ನನು ಮನವ ಹಾರೈಸುತ
ಕಂದರ ಕರೆದು ಕೇಳಿದನು ೧೯೧

ವನದೊಳಗಾರಿಲ್ಲಿ ತುರಗವ ಹಿಡಿದವರು
ಬಿಡಿನಮ್ಮ ತುರಗವ ಎಂದ
ಹಿಡಿದ ತುರಗವ ಬಿಡುವರೇನೋ ಜಾಣ
ಬಿಡುವರ ಬಿರುದು ಸಲ್ಲುವುದೊ ೧೯೨

ಹುಡುಗರೆ ನಿಮಗಿಂಥ ಹಿರಿಯ ತೇಜಿಗಳೇಕೆ
ನಡುತೇಜಿ ಕೊಡಿಸುವೆ ಬನ್ನಿ
ನಡೆಯರ ಪಾದವ ಕಾಣಿಸಿ ನಿಮಗೊಂದು
ಪಡಿ ಜೀತವನೆ ಹಾಕಿಸುವೆ ೧೯೩

ಹಿರಿಯ ತೇಜಿಯು ನಿಮ್ಮ ವಡೆಯರಿಗಾಗಲಿ
ನಡುತೇಜಿ ನಿಮಗಾಗಲಿ ।
ಅಯ್ಯಪಡಿಜೀತವು ನಿಮ್ಮ ಗೌಡಿ ಮಕ್ಕಳಿಗಿರಲಿ
ವಡೆಯರ ಭಾಗ್ಯ ನಮಗುಂಟು ೧೯೪

ಮಾತಿನ ಕೆಳಗಿವ್ವರು ಮಣಿವ ಹಾಗಿಲ್ಲವರು
ನೂಕಿರೊ ಬಿಲ್ಲು ಬಾಣವನು
ಆತ ಶತ್ರುಘ್ನನು ಬಿಲ್ಲು ಬಾಣವ ಹಾಕೆ
ದಾಟಿಹೋದವು ಲವಕುಶರ ೧೯೫

ಕುಶ ಹಾಕಿದ ಒಂದು ಕುಶದರ್ಭೆ ಬಾಣವು
ಬಸವಲ್ಲದೆ ಬಿದ್ದಿತಾ ಮಂದಿ
ಅತಿಗಾಯವಾಯಿತು ಶತ್ರುಘ್ನ ಬಳಲಿದ
ಬಸವಲ್ಲವೆಂದು ನಡೆದರು ೧೯೬

ಬಂದು ಹೇಳಲು ಭರತರಾ ದಂಡು ತೆರಳಿತು
ಮಂದಿ ಕುದರಿ ದಾಳಿ ಒಡ್ಡಿ ।
ಚಂದಾದ ಭೇರಿ ತಮ್ಮಟೆ ಕಾಳಿ ಬಿಡಿಬಿಡಿ
ದಂಡು ತೆರಳಿತು ಅಶ್ವದೆಡೆಗೆ ೧೯೭

ಕಂಡು ಭರತ ತಾನು ಮನವ ಹಾರೈಸುತಾ
ಕಂದರ ಕರೆದು ಕೇಳಿದನು
ವನದೊಳಗಾರಿಲ್ಲಿ ತುರುಗವ ಹಿಡಿದವರು
ಬಿಡಿನಮ್ಮ ತುರುಗವ ಎಂದ ೧೯೮

ಹುಡುಗರೆ ನಿಮಗಿಂಥ ಬಿಗುವಿನ ಮಾತ್ಯಾಕೆ
ಬಿರುದುಗಳ್ಯಾಕೆ ನಮಕೂಡ ।
ಹುಡುಗರೆ ನಮ್ಮನೆಯ ಕರುವುಕಾಯುವಿರಿ
ನೀವು ಕದನವ ಗೆದ್ದುಕೊಂಡು ಹೋಗಿ ೧೯೯

ಕದನವ ಗೆಲ್ಲುವಿರ ತರಳರೆ ನಿಮಗೀಗ
ಕಿರುಬೆರಳಲೊಲಲಮ್ಮಿರೀ ।
ಕಿರಬೆರಳು ಬಲ್ಲಿದರಾದ ಕಾರಣದಿಂದ
ಹಿರಿಯರು ಅಡವಿ ಸೇರಿಸಿದರು ೨೦೦

ತೊತ್ತು ಮಾತನು ಕೇಳಿ ಪಟ್ಟಕ್ಕೆ ಕುಳಿತವರ
ಅಟ್ಟಿದಿ ನೀಕಾನನಕೆ ।
ಉತ್ತಮರು ರಾಮಲಕ್ಷ್ಮಣರಾದ ಕಾರಣ
ಮತ್ತೆ ಕೈಹಿಡಿದರು ನಿಮ್ಮ ೨೦೧

ಗೌಡಿಮಾತನು ಕೇಳಿ ಮಲತಾಯಿ ಮಕ್ಕಳ
ಕಳುಹಿದಿರಿ ಕಾನನಕೆ
ಹಗೆಯ ಕಳದ್ದಂಗೆ ರಾಜ್ಯವನಾಳೆವೆಂದ್ರಿ
ಮರಳಿ ಬಂದನು ರಾಮಚಂದ್ರ ೨೦೨

ತಾಯಿಮಾತನು ಕೇಳಿ ಸೋದರರಿಬ್ಬರು
ಅರಣ್ಯವನು ಚರಿಸುತಿರಲು
ಸೀಮಿಭಂಡಾರವ ನೀವೆ ಆಳೇನೆಂಬೊ
ಅಳವೆ ನಮಕೂಡ ನಿಮಗೆ ೨೦೩

ನಿಮ್ಮ ತಾಯಿ ನಿಮ್ಮ ಪಡೆದುದುಂಟಾದರೆ
ನಮ್ಮ ಪಡೆದವಳು ನಮ್ಮ ತಾಯಿ ।
ಕಣ್ಣೆರಡು ಮುಚ್ಚಿ ಬೆಕ್ಕು ಹಾಲು ಕುಡಿದರೆ
ಮುನ್ನಿನವರು ಕಾಣದಿಹರೆ ೨೦೪

ಮಾತಿನ ಕೆಳಗಿವರು ಮಣಿವಹಾಗಿಲ್ಲವು
ನೂಕಿರೊ ಬಿಲ್ಲುಬಾಣವನು ।
ಆತ ಭರತ ತಾನು ಬಿಲ್ಲು ಬಾಣವ ಹಾಕೆ
ದಾಟಿಹೋದವು ಲವಕುಶರ ೨೦೫

ಒಂದೆರಡು ಬಾಣವ ಲವಕುಶರು ಹಾಕಲು
ತುಂಡು ತುಂಡಾಗಿ ಕೆಡವಿದರು
ಕೋಟಿಬಾಣ ಸೋಸಿ ಭರತ ತಾ ಹಾಕಲು
ಆಕಾಶ ಬಾಣ ಸೋಕಿದವು ೨೦೬

ಇಂದು ನೋಡಿದ ಭರತ ಕಂದರ ಸಾಹಸ
ಮಂದಿ ಕುದರಿ ಮಡುವಿದರು
ಕೊಲ್ಲಲಾರದೆ ಉಳುವಿದೆ ನಾನಾದಡೆ
ಅಲ್ಲಿ ಶ್ರೀರಾಮ ಕೋಪಿಸುವ ೨೦೭

ಬಲ್ಲಿದ ಭರತನು ಪೊನ್ನಂಬು ಜೋಡಿಸಿ
ಅಲ್ಲಿ ಲವನ ಕೆಡವಿದನು
ಬಾಣ ತಾಕಿ ಲವ ಮೂರ್ಛೆಯ ಹೊಂದಿದನು
ದೂರದಲಿ ಕಂಡ ಕುಶನು ೨೦೮

ಆದರೇನಾಯಿತು ತಮ್ಮನ ಕೊಂದಿರಿ
ನಾಳೆನೋಡಿ ಬೆಳಗಾಗಿ
ದಾಳಿಹರಿದು ನಿಮ್ಮ ಪುರಕೆ ತೋರಣ ಕಟ್ಟಿ
ಓಡಿಬಹೆನು ತಮ್ಮ ಮನೆಗೆ ೨೦೯

ಬಳಲಿದ ಬಾಲನ ತೆಗೆದೆತ್ತಿಕೊಂಡಾರು
ವಡೆಯರ ಮುಂದಿಳಿವಿದರು ।
ಬಾಲನ ಕಡೆಗಣ್ಣ ನೋಡಿದ ಶ್ರೀ ರಾಮ
ಮೋಹತುಂಬಿ ಮನಕರಗಿ ೨೧೦

ಹಾಲುಕುಡಿವ ಬಾಲನ ಕೊಂದು ಕಾಳಗ
ಸಾಹಸ ಎಂತು ಮಾಡಿದಿರೊ
ಏನು ಹೇಳಲಿ ಅಣ್ಣ ಬಾಲರ ಸಾಹಸ
ಯಾವ ರಾಯರು ಅವರಿಗೆದುರು ೨೧೧

ತಾಯಿಕೊಟ್ಟದ್ದೊಂದು ಹುಲ್ಲುಬಾಣವ ಹಾಕಿ
ಕಾಳಗ ತೃಣವು ಸಮಾನ ।
ಹಿಂದಕ್ಕೆ ನಮ್ಮನು ಬನಕೆ ಕಳಿದೇವತೆ
ಕಂಡಂತೆ ಕಾಣಿಸಿ ಆಡುವರೂ ೨೧೨

ಹಿಂದಕ್ಕೆ ರಾಜ್ಯವ ತಾಯಿ ಆಳುವಳಂತೆ
ತೇಜಿ ತಮಗೆ ಸಲ್ಲೊದಂತೆ ।
ಸಣ್ಣವರೊಂದೊಂದು ಮರ್ಮಗಳಾಡಿದರು
ಎಣ್ಣೆಸಾಸಿವೆ ಸಿಡಿದ್ಹಾಂಗೆ ೨೧೩

ಮುನ್ನ ಈ ಬಾಲನ ಜತನ ಮಾಡಿರೆಂದು
ತಮ್ಮ ಮಂತುಣಿಗೆ ಹೇಳಿದನು ।
ತಮ್ಮನೆಳೆದೊಯ್ದರು ಅಣ್ಣ ಬಂದನು ಮನೆಗೆ
ಕಣ್ಣು ಜಲಗಳ ಸಿಡಿಸುತಲಿ ೨೧೪

ಅಮ್ಮಯ್ಯ ಕೇಳೆ ನಮ್ಮ ತಮ್ಮನೆಳೆದೊಯ್ದರು
ಹೊನ್ನಂಬು ತಾಕಿ ಬಳಲಿದನು
ಕೇಳುತ ಸೀತೆಯು ಜಮ್ಮನೆ ಜರೆದಳು
ಬಿದ್ದಾಳು ಭೂಮಿಯ ಮೇಲೆ ೨೧೫

ಕಿರಿಯ ಲಕ್ಷ್ಮಣ ದೇವ ಉಳುಹಿ ಪ್ರಾಣವನು
ಮುನಿವಾಲ್ಮಿಕ ಸಲಹಿದನು ।
ತನಯರಿಬ್ಬರ ಹಿಡಿದು ತಪಸು ಮಾಡುತಲಿದ್ದೆ
ತುರಗಕ್ಕೆ ಬಲಿಕೊಲ್ಲ್ಯವನಾ ೨೧೬

ಅಮ್ಮಾ ನೀನಳದೀರೆ ನಮ್ಮ ತಮ್ಮಗೆ ಭಯವಿಲ್ಲ
ನಿನ್ನ ಉಂಗುರ ಕೊಡು ಎಂದ ।
ಕನ್ಯೆಜಾನಕಿ ತನ್ನ ಬೆರಳ ಮುದ್ರಿಕೆ ತೆಗೆದು
ಚಿನ್ನಾನ ಕೈಗಿಟ್ಟಳಾಗ ೨೧೭

ಬೆರಳಿಗುಂಗುರವಿಟ್ಟು ಬಂದನು ಬಾಲನು
ನಿಂದನು ನೀರ ಹೊಳೆಯಲ್ಲಿ ।
ಗಂಗೆಯ ನೀರಿಗೆ ಬಂದಾಳು ಮಂತುಣಿ
ಕಂಡು ಕುಶಲ ಕೇಳಿದನು ೨೧೮

ಇಂದು ತಾಯೆ ನೀನು ದಾರ ಮನೆಯಲ್ಲಿ
ದಾಸಿ ಹೇಳೆಂದ ಊರ ಮುಂದೆ
ಇರುವ ಮಾರಿ ಮಂತುಣಿ ಈಗ ನೂರೊಂದು
ಹರವಿ ಅಭಿಷೇಕ ೨೧೯

ಈ ಹರವಿ ನೀರಾನು ಬಾಲಗೆ ಎರೆವೆನು
ಮಾರಿಗೆ ಬಲಿಕೊಡುವೆನವನ
ತುಂಬಿದ ಕೊಡದೊಳಗೆ ಉಂಗುರು ಮೀಟಿ
ತಂದೂ ಬಾಲಗೆ ಎರದಳಾಗ ೨೨೦

ಉಂಗುರ ಮೈಸೋಕಿ ತುಂಬಿತು ಪ್ರಾಣವು
ಕಣ್ಣಳ ತೆರೆದು ನೋಡಿದನು
ಕಂದಾನ ಚಲ್ವಿಕೆ ಕಂಡಾಳು ಮಂತುಣಿ ಬಂದು
ಪಾದಕೆ ಎರಗೆಂದಳು ೨೨೧

ಪೂಜೆ ಇಲ್ಲದೆ ಮಾರಿ ಪಾದಕ್ಕೆರಗುವರೆ
ಹೂವು ಪತ್ತುರಿ ತರುವೆನೆಂದಾ ।
ಬೆರಳಿನುಂಗುರವಿಟ್ಟು ಬಂದ ತಮ್ಮನ ಬಳಿ
ಕಂಡುಕುಶಲತಕ್ಕೈಸಿ ೨೨೨

ಇಂದುಮಾರಿಗೆದ್ದು ಬಂದೊ ಅಣ್ಣಾ ನೀನು
ಇಂದು ನಮ್ಮಮ್ಮ ಪಡೆದಳು
ಬಾಲನ ಬೆನ್ನಟ್ಟಿ ಬಂದಳಾ ಮಂತುಣಿ
ಬಾಣದಲ್ಲಿಟ್ಟು ಕೆಡವಿದರು ೨೨೩

ಬಾಲರಿಬ್ಬರು ಮಂತುಣಿಯ ಹೊತ್ತುಕೊಂಡು
ಊರು ಪಾರವ ತಿರುಗಿಸಿದರು
ಊರ್ಗಮನಕೆ ಜಯರಾಮ ಲಕ್ಷ್ಮಣ
ಜಯಬಾಲರಿಬ್ಬರಿಗೆ ಜಯವೆಂದ್ರು ೨೨೪

ಬಾಲರಿಬ್ಬರು ತಮ್ಮ ಹಗೆಯ ಕಳೆದೇವೆಂದು
ವಾಲೆಯ ಬರೆದು ಕಟ್ಟಿದರು
ಹಿಂದಕ್ಕೆ ರಾಮರ ವನವಾಸ ಕಳಿಸಿದ
ಹೆಂಗಸು ದೈತ್ಯ ಮಂತುಣಿಯು ೨೨೫

ಬಾಲರಿಬ್ಬರು ಬಂದು ತಾಯಿಗೆರಗಿದರು
ಬಾಲಾರ ಬಿಗಿದಪ್ಪಿ ಸೀತೆ ।
ಹೋಳಿಗೆ ತುಪ್ಪ ಮಕ್ಕಳಿಗುಣಲಿಟ್ಟು
ಮೇಲೆ ನೊರೆಹಾಲು ಸುರವಿದಳು ೨೨೬

ಮಂಡಿಗೆ ತುಪ್ಪವು ಮಕ್ಕಳಿಗುಣಲಿಟ್ಟು
ತಂದುನೊರೆ ಹಾಲು ಸುರುವಿದಳು
ಶ್ರೀರಾಮ ಶರಣೆನ್ನ ಶ್ರೀರಾಮ ಶರಣೆನ್ನಿ
ಶ್ರೀರಾಮ ಶರಣೆನ್ನಿ ಜನರು ೨೨೭

ಮಾರಿಯ ಹಬ್ಬಕ್ಕೆ ಊರಜಾತರೆ ಬನ್ನಿ
ಸಾರಿದರು ಪುರದೊಳಗೆ
ಸತ್ತ ಬಾಲನು ಎತ್ತ ಓಡಿಹೋದನೆಂದು
ಎತ್ತಿಕೊಂಡೊಯ್ದವರ್‍ಯಾರು ೨೨೮

ಮಾರಿಯ ಹಬ್ಬವು ಆಶ್ಚರ್ಯವಾಗಿದೆ
ಏನುಕಾರಣ ವಿಸ್ಮಯ ಪಟ್ಟು ಶ್ರೀರಾಮ
ಪುರಬಾಗಿಲ ಮುಂದೆ ಮಡಿದ ಮಂತುಣಿ ಕಂಡು
ಬೆರಗಾದರಾಮ ಭೂಪಾಲ ೨೨೯

ಕಾರ್ಯಕತನವಿಲ್ಲ ರಾಜಕಾರ್ಯಗಳಿಲ್ಲ
ಕಾಳಗ ಗೆದ್ದವರ್‍ಯಾರು ।
ಬಾಲರಿಬ್ಬರು ಕಾಳಗಗೆದ್ದರೆಂಬೊ
ವಾಲೆಯ ತೆಗೆದು ನೋಡಿದರು ೨೩೦

ಕಂದರಿಬ್ಬರು ಕಾಳಗವ ಗೆದ್ದೆವೆಂಬೊ
ಚಂದದ ವಾಲೆ ಓದಿದರು
ಬಾಲರ ಸಾಹಸ ನೋಡಬೇಕೆನುತಲಿ
ತೆರಳಿದ ರಾಮ ಭೂಪಾಲ ೨೩೧

ತಾಳದಂಡಿಗಿ ಪಾಡುವ ಭಾಗವತರು
ಮೇಳದವರು ಮಂದಿ ನಡೆಯೆ
ಪಟ್ಟಾಭಿರಾಮನು ತುರಗಕ್ಕೆ ಬಂದನೆಂಬ
ಮಿತ್ರೆಗೆ ದೂರು ಮುಟ್ಟಿದವು ೨೩೨

ಕೋದಂಡ ರಾಮನು ತುರಗಕ್ಕೆ ಬಂದನೆಂದು
ನಾರೀಗೆ ದೂರು ಮುಟ್ಟಿದವು
ಪುಂಡರೀಕಾಕ್ಷನು ತುರಗಕ್ಕೆ ಬಂದನೆಂದು
ತಂದುನವಗಜನ್ನ ಹಾಕಿದರು ೨೩೩

ಬಾಲರಿಬ್ಬರು ಬಂದು ತಾಯಿಗೆರಗಿದರು
ದಂಡು ಬಂದಿದೆ ಅಮ್ಮಯ್ಯ
ಇಂದಿನ ಕಾಳಗ ಗೆಲ್ಲುವ ತೆರನು ಹ್ಯಾಗೆ
ಮುಂದೇನು ಬುದ್ದಿ ಹೇಳಮ್ಮ ೨೩೪

ಮುಂದೆ ಬುದ್ಧಿಯ ನಾನು ಏನು ಹೇಳಲಿ ಮಗನೆ
ಕೊಂಡವರ ತೇಜಿಯ ಕೊಟ್ಟು
ಮುಂದೆ ಶ್ರೀ ರಾಮರ ಪಾದವೆಗತಿ ಎಂದು
ಮುಂದಿನ್ನ ಸುಖದಲ್ಲೀರೆಂದ್ಲು ೨೩೫

ಕಾಳಗಗೆಲ್ಲಬೇಕು ತೇಜೀಯ ಬಿಡಬೇಕು
ರಾಮರ ಕೈಹಿಡಿಯ ಬೇಕು
ತಾಯಿ ನಿನ್ನ ವ್ರತಚಂದ ವಂದಿಸಬೇಕು
ನಾವು ರಾಜ್ಯವನಾಳಬೇಕು ೨೩೬

ಬಾಲರು ಷೋಡಶವುಪಚಾರ ಪೂಜೆಯ ಮಾಡಿ
ಸೂರ್ಯ ಪ್ರದಕ್ಷಿಣೆಯ ಮಾಡಿದರು
ಪ್ರಾತಃ ಕಾಲದಲಿ ಬ್ರಹ್ಮಸ್ವರೂಪನೇ
ತ್ರಿಮೂರ್ತಿ ದಿವಾಕರನೆ ೨೩೭

ಭಾನು ಕೋಟಿ ಸೂರ್ಯಭಗವಾನನೆ ರಕ್ಷಿಸೊ
ದೇವ ನಮ್ಮನು ರಕ್ಷಿಸೆಂದ್ರು
ದೇವ ಭಗವಾನರು ಬಾಣದಿ ಮಂತ್ರಿಸಿ
ಬಾಲರ ಕೈನೀಡಿ ಕೊಟ್ರು ೨೩೮

ಬಾಲರೆ ನೀವ್ಹಾಕಿದ ಬಾಣ ಶ್ರೀರಾಮರಿಗೆ
ಪಾದಪೂಜೆಯ ಮಾಡಲೆಂದ್ರು
ರಾಮರು ಹಾಕಿದಬಾಣ ನಿಮ್ಮಿಬ್ಬರಿಗೆ
ಹುವ್ವಿನ ಅರಳಾಗಲೆಂದ್ರು ೨೩೯

ಬಿಲ್ಲು ಬಾಣವ ಹಿಡಿದು ಬಂದುರು ಬಾಲರು
ನಿಂದರು ತುರುಗದ ಮುಂದೆ ।
ನಿಂದರು ಸಿರಬಾಗಿ ಕರವೆತ್ತಿ ಮುಗಿದರು
ಕಂಡರು ರಾಮಲಕ್ಷ್ಮಣರು ೨೪೦

ಕಂಡು ಮೋಹವ ತುಂಬಿ ಕಂದಂಗಳಿಬ್ಬರ
ಸಂಧಾನಕೆ ಕರಿ ಎಂದ
ಬಂದು ಲಕ್ಷ್ಮಣ ಎದುರಾಗಿ ನಿಂತನು ಬೇಗ
ಕಂದರ ಕರೆದು ಕೇಳಿದನು ೨೪೧

ಇಂದು ಶ್ರೀರಾಮರು ದಂಡೆತ್ತಿ ಬಂದರು
ಕಂದರೆ ನೀವು ಕಡಿಗಾಗಿ
ಮಂದಿ ಕುದುರಿ ನಿಮ್ಮ ಆಶ್ರಮ ಹೊಕ್ಕಾವು
ನಿಮ್ಮ ಆಶ್ರಮಕ್ಹೋಗ್ರಿ ೨೪೨

ಇಂದು ಶ್ರೀರಾಮರು ಬಂದರೇನಾಯಿತು
ಬಂದು ಕಾಳಗವ ಕೊಡಹೇಳಿ
ಮಂದಿ ಕುದುರಿ ನಮ್ಮ ಆಶ್ರಮ ಹೊಕ್ಕಾರೆ
ಕಲಿಸೇವು ತಕ್ಕ ಬುದ್ಧಿಗಳ ೨೪೩

ಕಂದಾರೆ ನಿಮ್ಮೇಲೆ ಕತ್ತೀಯ ನೆತ್ತೇವು
ಅಂಜಿಕಡಿಗೆ ಹೋಗೆಂದ
ತಂದಿ ಹಾಕಿದ ಬಾಣ ತನಯರಿಗೆ ತಾಕೊದೆ
ಅಂಜಿದರೊಮ್ಮೆ ಬಿಡುವುದೆ ೨೪೪

ಬಾಲರೆ ನಿಮ್ಮೊರು ಏಸು ನೋಂಪಿಯನೋತು
ಏಸು ಪುಣ್ಯವ ಮಾಡಿದರು
ಏಸು ಪುಣ್ಯವ ಮಾಡಿ ಮಕ್ಕಳ ಪಡೆದಾರು
ಕಾಳಗಕಿಂತು ಕಳುಹಿದರು ೨೪೫

ಮುನ್ನೂರ ಅರವತ್ತು ನೋಪಿಯನೊಂತಾಳು
ನಮ್ಮಮ್ಮ ನಮ್ಮ ಪಡೆದಳು
ಅನ್ಯಾಯದ ಸತಿ ಪಡೆದ ಮಕ್ಕಳಲ್ಲ
ಪುಣ್ಯವಂತೆಯ ಮಕ್ಕಳೆಂದ್ರು ೨೪೬

ಪುಣ್ಯವಂತೆಯ ಮಕ್ಕಳು ನೀವಾದರೆ ನಮ್ಮ
ತೇಜಿಯ ಹಿಡಿಯ ಬಹುದೆ
ಪುಣ್ಯ ಪಾಪಗಳು ವಿಚಾರಣೆ ಮಾಡದೆ
ನಿಮ್ಮ ಸತಿಯ ಕೊಲಿಸಬಹುದೆ ೨೪೭

ಅನ್ಯಾಯದಿ ಸತಿಕೊಲಿಸಿದ ಕಾರಣ ನಿಮ್ಮ
ತೇಜಿಯ ಹಿಡಿದೆವೆಂದ್ರು
ಸಣ್ಣವರಾಡಿದ ಮಾತಿಗೆ ಶ್ರೀ ರಾಮ
ತನ್ನ ಮನದಿ ಕಡು ನೊಂದ ೨೪೮

ಕನ್ಯೆ ಜಾನಕಿಯನ್ನು ಕೊಲಿಸಿದ ಕಾರಣ
ಮರ್ಮಗಳಾಡಿದರೆಂದ
ಮರ್ಮಗಳಾಡಲಿ ನಮ್ಮ ದಾಯದರಿಲ್ಲ
ನಮ್ಮ ತಮ್ಮಗೆ ಮಕ್ಕಳಿಲ್ಲ ೨೪೯

ಚೆನ್ನಾಗಿ ಅಸುರರ ಪಡೆಯ ಸಂಹರಿಸಿದೆ
ಮಕ್ಕಳ್ಯಾರಿಲ್ಲ ನಮಗೆ
ಸ್ಥಳಕುಲವು ನಿಮ್ಮ ತಾಯಿತಂದೆ ಹೆಸರು
ಗೋತ್ರವ ಹೇಳೆಂದ ೨೫೦

ನಿಮ್ಮ ಕುಲಗೋತ್ರವೆ ನಿಮ್ಮ ಪ್ರದೇಶವೆ
ನಿಮ್ಮ ಗುರುವೆ ನಮ್ಮ ಗುರುವು
ಚೆನ್ನಾಗಿ ಸೂರ್ಯ ಕುಲವನ್ನು ಧರಿಸೀದ
ಪುಣ್ಯಮೂರುತಿ ಮಕ್ಕಳೆಂದ್ರು ೨೫೧

ನೋಡೊ ಲಕ್ಷ್ಮಣ ಇವರ ಪಾಡುಪಂಥಗಳ
ಸೂರ್ಯ ಕುಲಮಕ್ಕಳಂತೆ
ನೀಡೊ ಲಕ್ಷ್ಮಣ ನಮ್ಮ ಬಿಲ್ಲು ಬಾಣವನೆಂದು
ಜೋಡಿಲಿ ಹಿಡಿದರಂಬುಗಳ ೨೫೨

ದೇವ ಸುಮಿತ್ರನು ಬಿಲ್ಲು ಬಾಣವ ಹಾಕೆ
ಏಳುಯೋಜನವ ದಾಟಿದವು
ಬಾಲರ ಕೂಡನಮಗೆ ಕಾಳಗ ಸೊಗಸದು
ಎಂದು ಕೊಟ್ಟನು ರಾಮರೆಡೆಗೆ ೨೫೩

ಅಕ್ಕಿಎಳ್ಳು ಬೆರೆಸಿದಂತೆ ಕಾಳಗವಾಡೆ
ಮಕ್ಕಳ ಕೂಡ ಶ್ರೀ ರಾಮ ।
ಎಳ್ಳು ಅಕ್ಕಿ ಬೆರೆಸಿದಂತೆ ಕಾಳಗವಾಡೆ
ಬಲ್ಲಿದ ರಾಮ ಭೂಪಾಲ ೨೫೪

ಸುತ್ತಲ ಸುರರೆಲ್ಲ ಗಗನಮಾರ್ಗದೊಳಗೆ
ಮಕ್ಕಳ ಕೊಂಡಾಡಿದರು
ಆಗ ವಾಲ್ಮಿಕನ ವರಪಿಂಡ ಕುಶಲನು
ರಾಮರಿಗೆ ಬಾಣ ಎಸೆದನು ೨೫೫

ಬಾಣತಾಕಿ ರಾಮಲಕ್ಷ್ಮಣರಿಬ್ಬರು
ಭೂಮಿಮೇಲೆ ಮೂರ್ಛೆಗೈಯೆ ।
ಹನುಮ ಜಾಂಬವಂತನ ಹೆಗಲನೇರಿಸಿಕೊಂಡು
ಜಾನಕಿಯ ಮುಂದಿಳಿಹಿದರು ೨೫೬

ನೋಡೆ ಅಮ್ಮ ಇವರ ಚೋದ್ಯದರೂಹವ
ರಾಮರ ಭೃತ್ಯರಂತಿವ
ದೇವಿಯ ಪಾದಕ್ಕೆ ಎರಗಿದ ಹನುಮಂತ
ರಾಯರಿಗೆ ಬಾಣ ಎಸೆದವು ೨೫೭

ಆಹಾ ಬಾಲರು ಕೆಡಸಿದರೆ ಎನುತಲಿ
ಭೂಮಿಮೇಲೆ ಮೂರ್ಛೆಗೈಯೆ
ಪಾಪಕ್ಕೆ ಪಠವನು ಏತಕ್ಕೆ ಬರೆದೆನೊ
ಯಾಕೆ ಲಕ್ಷ್ಮಣವುಳುವಿದನೊ ೨೫೮

ಯಾಕೆ ಈ ಬಾಲಾರು ಜನಿಸಿದ ಕಾರಣ
ಕಾಕು ಆಯಿತು ಮನವರ್ತಿ
ಜನಕರಾಯಗೆ ಸುತಳಾಗಿ ನಾ ಜನಿಸಿದೆ
ರಘುಪತಿಗೆ ಮಾಲೆ ಹಾಕಿದೆನು ೨೫೯

ಸುರಪತಿಯ ಕೈಹಿಡಿದೆ ಆದ ಕಾರಣದಿಂದ
ಅಸುರರ ಶಾಪತಟ್ಟಿದವು
ಮುನ್ನೂರ ಅರವತ್ತು ನೋಂಪಿಯ ನೋತೆನು
ಚೆನ್ನಾಗಿ ಹರನಪೂಜಿಸಿದೆ

ಇನ್ನು ಶ್ರೀರಾಮರ ಅಗಲದೆ ಇರು ಎಂದು
ಬ್ರಹ್ಮದೇವತೆ ವರಪಡೆದೆ
ನಿತ್ಯ ಗೌರಿವ್ರತ ತಪ್ಪದೆ ಮೂಡಿದೆ
ಮುಟ್ಟಿ ಹರನ ಪೂಜಿಸಿದೆ ೨೬೦

ಸೃಷ್ಟೀಶ ಪತಿರಾಮ ಎತ್ತಲದಿ ಇರಲಾಗಿ
ಮುತ್ತೈದಿತನ ಇರಲಾಗಿ
ಪೊಡವೀಶ ಪತಿರಾಮ ಎತ್ತಲದಿ ಇರಲಾಗಿ
ಸಾವಿತ್ರಿತನ ಇರಲಾಗಿ ೨೬೧

ನಂಬಿಕೊಂಡಿದ್ದೆನು ಕಂದರು ಕೆಡಿಸಿದರು
ಎಂದೊದರಿದಳಾ ಸೀತೆ ।
ತಾಯಿನೀನಳದೀರೆ ರಾಮರಿಗೆ ಭಯವಿಲ್ಲ
ಬಾಣತಾಕಿ ಬಳಲಿದರು ೨೬೨

ಆಗ ವಾಲ್ಮಿಕನು ಬ್ರಹ್ಮದೇವರ ಕುರಿತು
ರಾಮರಿಗೆ ಜಪವು ಮಾಡಿದನೂ ।
ತಂದು ಕಮಂಡಲದುದಕವ ತೊಳೆದರು
ಎದ್ದಾರು ರಾಮಲಕ್ಷ್ಮಣರು ೨೬೩

ಜೋಡಿಲಿ ಭರತ ಶತ್ರುಘ್ನರೆಲ್ಲರು
ಕಾಲಾಳು ದಳವೆದ್ದಿತಾಗ
ಏನಯ್ಯ ಮುನಿರಾಯ ಬಾಲರಿಬ್ಬರು ಬಂದು
ಪ್ರಾಣಕ್ಕೆ ಮುನಿದರೆಂತೆಂದೆ ೨೬೪

ಪ್ರಾಣಕ್ಕೆ ಮುನಿದರು ಪುನರುಸೃಷ್ಟಿಯ ಮಾಡಿ
ಪ್ರಾಣವನುಳವಿ ತೋರಿದರು ।
ಎಲ್ಲಿ ಬಾಲರಿವರು ಎತ್ತಲಿಂದಾ ಬಂದರು
ದೇವರುಷಿಗಳ ಶಿಶುಗಳಲ್ಲಾ ೨೬೪

ದಶರಥ ರಾಮನ ಉದರದಲಿ ಜನಿಸೀದ
ಸುತರಿವರು ಲವಕುಶರೆಂದ
ಸತಿಯು ನಮಗಿಲ್ಲ ಸುತರೆಲ್ಲಿ ಬಂದರು
ಖುಷಿಗಳೆ ಹಾಸ್ಯ ಮಾಡುವಿರ ೨೬೬

ಹಾಸ್ಯವಲ್ಲವು ಸ್ವಾಮಿ ಈಶ್ವರನ ಸಾಕ್ಷಿ ಇಕೊ
ಸೀತೆ ನಮ್ಮ ಆಶ್ರಮದೊಳಗೇ ।
ಅಂದಿಗೆ ಆರು ತಿಂಗಳು ಗರ್ಭದೇವಿಗೆ
ಬಂದಾಳು ನಮ್ಮ ಆಶ್ರಮಕೇ ೨೬೭

ಮುಂದೆ ಮೂರು ತಿಂಗಳಿಗೆ ಕಂದಾರ ಪಡೆದಾಳು
ಇಂದಿಗೆ ಹನ್ನೆರಡು ವರುಷ
ಬಂದಿ ರಾಮ ಲಕ್ಷ್ಮಣರೂ ನೀವಿಲ್ಲಿಗೆ
ಇಂದಿಗೆ ಶಾಪನಿಶ್ಶಾಪಾ ೨೬೮

ಅಂದರೆ ಶ್ರೀರಾಮ ಸಂದೇಹ ಪಟ್ಟನು
ಬಂದು ಲಕ್ಷ್ಮಣನ ಕೇಳಿದನು
ಏನಯ್ಯ ಲಕ್ಷ್ಮಣ ದೇವಿಯ ಕರೆದೊಯ್ದು
ಕೊಲ್ಲಲಿಲ್ಲವೆ ಹೇಳೆಂದ ೨೬೯

ಜ್ಞಾನಿ ಲಕ್ಷ್ಮಣ ಧ್ಯಾನಿಸೀ ನೋಡಿದ
ದೇವಿಯನುಳಿಹಿದೆನೆಂದ
ಯಾಕೆ ಉಳಿಹಿದಿ ಎಲ್ಲಿರಿಸಿ ಬಂದಿ
ಯಾರ ವಶವಮಾಡಿ ಬಂದಿ ೨೭೦

ಸೀತೆ ಓಡಿಹೋಗಿ ಸುತರ ಪಡೆದಾಳೆಂ
ಲೋಕದೊಳಗೆ ಅಪಕೀರ್ತಿ
ಕೆಂಡಕ್ಕೆ ಇರುವೆ ಮುತ್ತುವದುಂಟೆ ಎಲೆಸ್ವಾಮಿ
ಚಂದ್ರಮಗೆ ರವಿಬಿಸಲುಂಟೆ ೨೭೧

ಕಿಚ್ಚಿನೊಳಗೆ ಸರಸಬೆರಸಿದವರುಂಟೆ
ಸರ್ಪನೊಳಗೆ ಸ್ನೇಹವುಂಟೇ
ಸಪ್ತಸಾಗರದಲ್ಲಿ ಹುಟ್ಟೀದ ಲಕ್ಷ್ಮೀಗೆ
ಮತ್ತಪಕೀರ್ತಿಗಳುಂಟೇ ೨೭೨

ಅಂದರೆ ಶ್ರೀರಾಮ ನಂಬಿಕೆಪಟ್ಟನು
ಇಂದುವದನೆ ಕರಿಎಂದ
ಬಂದು ವಾಲ್ಮಿಕನು ಮಗಳ ಸಂತೈಸಿದ
ಚಂದ್ರಗಾವಿಯ ನುಡುಗೊಟ್ಟಾ । ೨೭೩

ಸಾರಾವಳಿಯನುಡಿಸಿ ಸೋಗಿಲಕ್ಕಿಯ ಹೊಯ್ದು
ದೇವಿಯ ಕರತಂದನಾಗ
ದೇವಿ ನಿನ್ನನಗಲಿ ಆಳಿದೆನೆ ಪಟ್ಟ
ಬಾಲಾರನೆಂತು ಪಡೆದಿಯೆ ೨೭೪

ದೇವ ನೀನಲ್ಲದೆ ಬೇರೆ ಪರಪುರುಷನ
ಮಾರಿಯ ನೋಡಿದರೆ ನಾನು
ಭೂಮಿದೇವಿ ಸಾಕ್ಷಿ ಬಾಲರಿಬ್ಬರ ಸಾಕ್ಷಿ
ದೇವ ಋಷಿಗಳ ಪಾದ ಸಾಕ್ಷಿ ೨೭೫

ದೇವ ಸುಮಿತ್ರಸೂನು ದೇವಿಯ ಪಾದಕ್ಕೆ
ಪ್ರೇಮದಿಂದಲಿ ಎರಗಿದನು
ಆರಣ್ಯದೊಳಗಿನ್ನು ಅಗಲಿ ಬಂದೆನು
ತಾಯೆದೇವಲಕ್ಷ್ಮಣ ಅಳಲಿದನು ೨೭೬

ದೇವ ನೀ ಪ್ರಾಣವ ಉಳುಹಿದ ಕಾರಣ
ಬಾಲರು ಜನಿಸೂ ಕಾರಣವು
ದೇವ ವಾಲ್ಮಿಕನು ಸಲಹಿದ ಕಾರಣ
ಅರಣ್ಯ ಅಯೋಧ್ಯವಹುದು ೨೭೭

ಬಾಲರು ಭರತ ಶತ್ರುಘ್ನರಿಬ್ಬರಿಗೆ
ಪ್ರೇಮದಿಂದಲಿ ಎರಗಿದರು
ಬಾಲಕತನದಿಂದ ನೋಯ ನುಡಿದೆವು ನಾವು
ರಾಮರ ಸರಿ ನೀವು ನಮಗೆ ೨೭೮

ಬಾಲರೆ ನಿಮ್ಮೇಲೆ ಘಾತವು ಮಾಡಿದೆವು
ಬಾಣದಲ್ಲಿಟ್ಟು ಕೆಡಹಿದೆವು
ಹ್ಯಾಗೆ ಉಳಹಿತು ಪ್ರಾಣ ದಾರು ಕಾಯ್ದರು ನಿಮ್ಮ
ಹೇಗೆ ಮಂತುಣಿ ಗೆದ್ದಿರೆಂದ ೨೭೯

ಪೂರ್ವದ ಪುಣ್ಯ ಪ್ರಭಾವದ ಕಾರಣ
ತಾಯಿಗರ್ಭದ ಪುಣ್ಯದಿಂದೇ
ದೇವ ರಘುರಾಮರು ಪಡೆದ ಕಾರಣದಿಂದ
ಆಯುಷ್ಯ ಮಿಗಿಲಾದುವೆಂದ್ರು ೨೮೦

ಬಾಲರು ಬೇಕಾದ ಆನೆಕುದುರೆ ಏರಿ
ದೇವ ಲಕ್ಷ್ಮಣ ರಥವೇರಿ
ದೇವಿ ಜಾನಕಿ ಹೊನ್ನಂದಣವನು ಏರಿ
ಕೂಡೆ ತೆರಳಿತು ತಮ್ಮದಂಡು ೨೮೧

ದಂಡು ಸಜ್ಜಾದವು ತಮ್ಮೊಳೆ ಕರೆದವು
ಬಂದರಯೋಧ್ಯಾಪಟ್ಟಣಕೆ
ಅಂದು ಅಯೋಧ್ಯೆಯ ಪುರದನಾರೇರೆಲ್ಲ
ತಂದರು ಎದುರು ಆರುತಿಯ ೨೮೨

ಚಂದದ ಸೊಡರ ನಿವಾಳಿಸಿ ಹಾಕೋರು
ಮಂಗಳಾರತಿಯ ಮಾಡೋರು
ರಾಮ ಸೀತೆಯರು ಇಬ್ಬರೊಂದಾದರು
ಸಿಂಹಾಸನವ ಏರಿದರು ೨೮೩

ನೋಡಿದ ನಾರೇರು ಎಲ್ಲರು ಆಗಿನ್ನು
ಸಂತೋಷವನೆ ಪಡುವರು ।
ಮಚ್ಛಾವತಾರ ಬಂದ ಮಲೆವೊರಕ್ಕಸಹರ ಬಂದ
ಸೃಷ್ಟಿನಾಳುವ ದೊರಿ ಬಂದ ೨೮೪

ಮತ್ತೆ ಭೂಮಿ ಹೊತ್ತಾ ಕೂರ್ಮ ಬಂದಾನೆಂದು
ಹೆಚ್ಚಿನ ಕಾಳಿಹಿಡಿದರು
ವರಾಹಾವತಾರ ಬಂದ ಹಿರಣ್ಯಾ ಸಂಹರ ಬಂದ
ಜಗದ ರಕ್ಷಕ ಹರಿಬಂದ ೨೮೫

ಹರದಿ ಜಾನಕಿದೇವಿ ಅರಸು ಬಂದಾನೆಂದು
ಬಿರುದಿನ ಕಾಳಿಹಿಡಿದರು
ಕಂದಾರ ಲವಕುಶರ ಕಥೆಯ ಕೇಳಿದವರಿಗೆ
ಬಂಜೆತನವು ಹಿಂಗುವುದು ೨೮೬

ಎಂದೆಂದಿಗೂ ಮುತ್ತೈದೆತನವು ಸ್ಥಿರವಾಗುವುದು
ಶ್ರೀರಂಗ ಕೊಡುವನು ವಿಷ್ಣು ಸಂಪತಿಯ
ಬಾಲರು ಲವಕುಶರ ಕಥೆಯ ಕೇಳಿದವರಿಗೆ
ದಾರಿದ್ರ್ಯವಿಚ್ಛಿನ್ನವಾಗುವುದು ೨೮೭

ಬಿತ್ತುವ ಬೆಳೆಧಾನ್ಯ ಒಕ್ಕುವ ರಾಶಿಯು
ಅಕ್ಷರ ನಯನವು ಬರಲಿ

ಋಣ ಹರಿಯಲಿ ದಾರಿದ್ರ್ಯ ನಾಶಾಗಲಿ
ಶ್ರೀಹರಿ ನಮ್ಮ ಹೃದಯದೊಳಿರಲಿ ೨೮೮

ಹೆಳವನಕಟ್ಟಿ ಗಿರಿಯಮ್ಮ ಮಾಡಿದ ಕಥೆಯು
ಧಾರುಣಿಯ ಮೇಲೆ ಹರಿಯಲಿ
ಕೇಳಿದ ಜನಕೆಲ್ಲ ಆಯುಷ್ಯ ಮಿಗಿಲಾಗಿ
ಸುಖದಿಂದ ಇರಲಿನ್ನು । ೨೮೯

ಆತಂಥ – ಹಿಡಿದಂಥ
ಆತ್ಮಜ – ಮಗ
ಆನಂದ್ಯತಿ – ಅರುಂಧತಿ
ಆಯತವಾಗು– ನೆರವೇರು
ಆರಡಿ – ದುಂಬಿ
ಆರಭಾರ – ಚಿಂತೆ, ಹಿತ, ಹೊಗೆ
ಆರಯ್ – ಹುಡುಕು
ಆಲಂಬ – ಆಧಾರ
ಆಲಯ – ಮನೆ
ಆಲಿ – ಕಣ್ಣಾಲಿ, ಸಾಲು
ಆಲಿಸು – ಕೇಳು
ಆವಾಗ – ಯಾವಾಗಲೂ
ಇಂದುಧರ – ಶಿವ
ಇಂದುಹಾಸ – ಚಂದ್ರಹಾಸ
ಇಂದ್ರಜ – ಅರ್ಜುನ
ಇಕ್ಷು ದಂಡ – ಕಬ್ಬಿನ ಜಲ್ಲೆ
ಇಳೆ – ಭೂಮಿ
ಈರ್ಲು – ಮುಟ್ಟು ಮೈಲಿಗೆಯಿಂದ ಮಕ್ಕಳಿಗೆ ಬರುವ ಶೀತಭೇದಿ
ಉಂಬಳಿ – ಮಾನ್ಯವಾಗಿ ಕೊಡುವ ಭೂಮಿ
ಉಚ್ಚಿ – ಬಿಚ್ಚಿ
ಉತ್ತಮಾಂಗ – ತಲೆ
ಉತ್ತಾರಮಾಡು–ಕತ್ತರಿಸು
ಉದಕ – ನೀರು
ಉದಿಸು – ಹುಟ್ಟು
ಉದ್ದಂಡ – ಪ್ರಬಲವಾದ
ಉನ್ನಂತ – ಶ್ರೇಷ್ಠ
ಉಬ್ಬು – ಅಹಂಕಾರ
ಉಮ್ಮಿ – ಉಮಾ, ಪಾರ್ವತಿ,
ಉರ – ಎದೆ
ಉರಗ – ಸರ್ಪ
ಉರುಹು – ಸುಡು
ಉರ್ಬಿ – ಉರ್ವಿ, ಭೂಮಿ
ಉಲುಪೆ – ಮಂಗಳ ಪ್ರಸಂಗಗಳಲ್ಲಿ ಉಚಿತವಾಗಿ ಕೊಡುವ ಆಹಾರ ಸಾಮಗ್ರಿ
ಉಲುಹು – ಶಬ್ದ
ಊಡು – ಕುಡಿಸು
ಊಳಿಗದವರು–ಕೆಲಸದವರು
ಎಚ್ಚು – ಬಾಣಬಿಡು
ಎಣ್ಣೋರಿಗೆ – ಎಣ್ಣೆಯಲ್ಲಿ ಬೇಯಿಸಿದ ಹೋಳಿಗೆ
ಎರಡಂಗ – ನರಸಿಂಹ
ಎರವಲ್ಲ – ಹೊರಗಿನವನಲ್ಲ
ಎರಳೆ – ಜಿಂಕೆ
ಎಸೆ – ಶೋಭಿಸು
ಏಕಾವಳಿ – ಒಂದೆಳೆಯಸರ
ಏಣ – ಜಿಂಕೆ
ಐದೆಯರು–ಮುತ್ತೈದೆಯರು
ಒಡಲು – ದೇಹ
ಒಡ್ಯಾಣ – ಡಾಬು
ಒರೆ – ಹೇಳು
ಒಸಗೆ – ಅಭಿನಂದನೆ, ಶುಭೇಚ್ಛೆ
ಓಗರ – ಅನ್ನ
ಓಸರಿಸಿ – ಓರೆಮಾಡಿ
ಔಂಚು – ಅವಚು – ಅಪ್ಪು
ಕಂಚುಕ – ಕುಪ್ಪಸ
ಕಂಚುಳಿಕೆ – ಕುಪ್ಪಸ, ಅಂಗಿ

ಕಂಟಕ – ವಿಪತ್ತು
ಕಂಠೀರವ – ಸಿಂಹಿಣಿ, ಧೀರೆ
ಕಂಡೆಯ – ಕತ್ತಿ
ಕಂತು – ಮನ್ಮಥ
ಕಂದರ್ಪ – ಮನ್ಮಥ
ಕಂದು – ಕಳಾಹೀನ
ಕಂಧರ – ಕೊರಳು
ಕಂಬು – ಶಂಖ
ಕಕ್ಕಸ – ಕಠಿಣ
ಕಟಕ – ರಾಜಧಾನಿ, ಸೈನ್ಯ
ಕಡಹ – ಕದಂಬ ವೃಕ್ಷ
ಕಡಿಖಂಡ – ಕಡಿದು ತುಂಡು ತುಂಡು
ಕಡೆಹಾಯಿಸು – ಪಾರು ಮಾಡು
ಕಣಿಕ – ಕಲಸಿದ ಗೋಧಿ ಹಿಟ್ಟು
ಕದಂಬ – ಕೆನ್ನೆ
ಕದಲಾರತಿ – ಕುಂಕುಮ ಕದಡಿದ ನೀರು
ಕದಳಿ – ಬಾಳೆಗಿಡ
ಕನಕ – ಚಿನ್ನ
ಕರ್ನಿಕೆ – ಕನ್ನಿಕೆ, ಕನ್ಯೆ
ಕಮಲಜಸುತ – ನಾರದ
ಕಮ್ಮೆಣ್ಣೆ – ಪರಿಮಳದ ಎಣ್ಣೆ
ಕರ್ತುೞ, ಕರ್ತೃ – ದೇವರು
ಕರಬೋನ > ಕರಬಾನು–ಅಗಲವಾದ ಬಾಯುಳ್ಳ ಚಿಕ್ಕ ಜಲಪಾತ್ರೆ.
ಕಯ್ತ್ರ – ವೀಳ್ಯದಲ್ಲಿ ಬಳಸುವ ಕಾಚು
ಕರಿ – ಆನೆ
ಕಲಿ – ವೀರ
ಕಲ್ಲಿಯಕೂಳು–ಬಲೆಯ ಚೀಲದಲ್ಲಿ ಒಯ್ದ ಬುತ್ತಿ
ಕವಣೆ – ಕಲ್ಲಿನಿಂದ ಬೀಸಿ ಹೊಡೆಯಲು ಮಾಡಿದ ಜಾಳಿಗೆಯ ಸಾಧನ
ಕಳತ್ರಂ > ಕಳತ್ರ– ಹೆಂಡತಿ
ಕಾಂಚಿ – ಡಾಬು
ಕಾಂಗಡಿ > ಕಾಗಡಿ ? ತೊಟ್ಟಿಲು
ಕಾಟಿನವ – ಕೋಲಿನವ, ಬೇಡ
ಕಾತರಿಸು – ತವಕಗೊಳ್ಳು
ಕಾತು – ಕಾಯಿಬಿಟ್ಟು ?
ಕಾನನ – ಕಾಡು
ಕಾಮಿತಾರ್ಥ – ಇಷ್ಟಾರ್ಥ
ಕಾಮಿನಿ – ಸ್ತ್ರೀ
ಕಾರಣಿ – ಗೋಡೆಯ ಕೆಳಭಾಗದಲ್ಲಿ ಬರೆಯುವ ಬಣ್ಣದ ಗೆರೆ
ಕಾರಣಿಕ – ಅವತಾರ ಪುರುಷ
ಕಾಳಾಂಜಿ – ಪನ್ನೀರಿನ ಪಾತ್ರೆ, ಉಗುಳುವ ಪಾತ್ರೆ
ಕಿಂಕರ – ಸೇವಕ
ಕಿರಾತ – ಬೇಡ
ಕೀರ – ಗಿಳಿ
ಕುಂಜರ – ಆನೆ
ಕುಂಜು – ಹಾರು
ಕುಂದಣಗಿಂಡಿ–ಚಿನ್ನದ ಗಿಂಡಿ
ಕುಂದು – ತಪ್ಪು
ಕುಂಭ – ಮಡಿಕೆ
ಕುಂಭಿಣಿ – ಭೂಮಿ

ಕುಕ್ಷಿ – ಹೊಟ್ಟೆ
ಕುಟಿಲಕುಂತಳ– ಗುಂಗುರು ಕೂದಲು
ಕುಠಾರ – ಕೊಡಲಿ
ಕುಡಿತೆಗಂಗಳು– ಬೊಗಸೆಗಂಗಳು
ಕುತ್ತರಿಸು – ಉಪಚರಿಸು
ಕುರುಂಬಾಳೆ – ಹೊಂಬಾಳೆ
ಕುರುಳು – ಕೂದಲು
ಕುಶ – ದರ್ಭೆ
ಕುಹಕ – ಮೋಸ
ಕೂರ್ಗಣೆ – ಚೂಪಾದ ಬಾಣ
ಕೂರಂಬು – ಚೂಪಾದ ಬಾಣ
ಕೂರ್ಪು – ಪ್ರೀತಿ
ಕೃಷ್ಣಮೃಗ – ಕಪ್ಪು ಬಣ್ಣದ ಜಿಂಕೆ
ಕೃಷ್ಣಾಜಿನ – ಜಿಂಕೆಯ ಚರ್ಮ
ಕೇಕಾಪಕ್ಷಿ – ನವಿಲು
ಕೃಪ – ಲಂಗೋಟಿ
ಕೈರಗುಳಿಗೆ – ತಾಂಬೂಲದೊಡನೆ ಸೇವಿಸುವ ಸುಗಂಧದ ಮಾತ್ರೆ
ಕೈಲಾಗವ – ಕೈಕುಲುಕು
ಕೊಂಡೆಯ – ಚಾಡಿ
ಕೊಡಗೂಸು – ಕನ್ಯೆ
ಕೊಪ್ಪು – ಕಿವಿಯ ಆಭರಣ
ಕೊರವಿ – ಕೊರವಂಜಿ
ಕೋಡಗ – ಕಪಿ
ಖಂಡ್ರಿಸು – ಖಂಡಿಸು
ಖಗ – ಪಕ್ಷಿ
ಖಳ, ಖೂಳ– ದುಷ್ಟ
ಖಾರಚರ್ವಣೆ– ಬಾಣಂತಿ
ಖೇದ – ದುಃಖ
ಗಂತಿ – ಹುಣ್ಣು
ಗನ್ನಗತಕ – ಮೋಸ
ಗಬ್ಬಿ – ಸಮರ್ಥ
ಗಮಕ – ಗಾಂಭೀರ್ಯ
ಗರಳ – ವಿಷ
ಗಹ್ವರ – ಗುಹೆ
ಗಾಡಿಕಾರ್ತಿ – ಚೆಲುವೆ
ಗಾರುಡಿಗ ಮಾಯಕಾರ
ಗಿಡಿಬಿಡಿ – ಒಂದು ವಾದ್ಯ
ಗುಂಜಿದಂಡೆ – ಗುಲಗಂಜಿಯ ಸರ
ಗುಪ್ಪವಡೆ – ಗುಂಪಾಗು
ಗುಪಿತ – ಗುಟ್ಟು
ಗುಳಿಗೆಯ – ಒಂದು ನಾಣ್ಯ
ಗೇಟಿ – ದಪ್ಪವಾದ ಗಜ್ಜುಗ
ಗೊರಲಿ – ಗೆದ್ದಲು ಹುಳ
ಗೌಳಿ – ಹಲ್ಲಿ
ಗೋಷ್ಠಿ – ಸಭೆ
ಘ್ರಾಣೇಂದ್ರಿಯ–ಮೂಗು
ಚಚ್ಚರ – ಎಚ್ಚರಿಕೆ
ಚದುರನುಡಿ – ಜಾಣ್ನುಡಿ
ಚರಣ – ಪಾದ
ಚಮ್ಮಟಿ – ಚಾವಟಿ
ಚಳೆಯ – ಸಿಂಪಡಿಸು
ಚರ – ಗೂಢಚಾರ
ಚಾಪ – ಬಿಲ್ಲು
ಚಾರು – ಸುಂದರ
ಚಾಲುವರಿ – ಅಂಗಲಾಚು
ಚಿಣ್ಣ – ಬಾಲಕ
ಚೀಣಾಂಬರ – ರೇಷ್ಮೆ ಬಟ್ಟೆ
ಚೀರು – ಕಿರಚು
ಚೂತ – ಮಾವು
ಚೆಳ್ಳುಗುರು – ಚೂಪಾದ ಉಗುರು

ಚೊಗೆ – ಕವಚ, ಅಂಗಿ
ಚೋದ್ಯ – ಸೋಜಿಗ
ಛಪ್ಪನ್ನ – ಐವತ್ತಾರು
ಜಂಘೆ – ಕಿರುದೊಡೆ
ಜಂಬೀರರಸ – ನಿಂಬೆಹಣ್ಣಿನ ರಸ
ಜಂಬುಕ – ನರಿ
ಜಡಿತ – ಜೋಡಿಸಿದ
ಜತನ – ಕಾಪಾಡುವಿಕೆ
ಜರೆ – ಮುಪ್ಪು
ಜಲ್ಲಿಸು – ಜರಡಿಹಿಡಿ
ಜವ – ವೇಗ
ಜವಾಜಿ – ಪುನುಗು
ಜಾಗರ – ಎಚ್ಚರ
ಜಾಲ – ಕಪಟ
ಜಿಹ್ವೆ – ನಾಲಿಗೆ
ಜೀಯ – ಒಡೆಯ
ಜುಲ್ಮಿಂದ – ಒತ್ತಾಯದಿಂದ
ಜೂಟ – ಜಡೆ
ಜೋಡುರೂಪ–ನರಸಿಂಹಾವತಾರ
ಠಕ್ಕು ಠವಳಿ – ಮೋಸ
ಠಾವು – ಸ್ಥಳ
ಡೊಳ್ಳು – ಹೊಟ್ಟೆ
ತಂಡುಲ – ಅಕ್ಕಿ
ತಂಬಿಸು – ಸಂತಯಿಸು
ತಕ್ಕೈಸು – ಆಲಂಗಿಸು
ತಟ್ಟಕ – ತಟಾಕ– ಜಲಾಶಯ
ತನುಜ – ಮಗ
ತರಳ – ಬಾಲಕ
ತಲ್ಲಣ – ತಳಮಳ
ತಳಿ – ಚೆಲ್ಲು
ತಳಿಗೆ – ತಟ್ಟೆ
ತಳಿತ – ಚಿಗುರಿದ
ತಳಿಲಗಾವಿ – ತಳಿರಿನಂತೆ ಕೆಂಪಗಿರುವ ಕಾವಿವಸ್ತ್ರ
ತ್ವರಿತ – ಬೇಗ
ತಾಡನ – ಏಟು , ಪೆಟ್ಟು
ತಾತ – ತಂದೆ
ತಾಪತ್ರಯ –ಆದಿದೈವಿಕ,ಆದಿಭೌತಿಕ, ಆಧ್ಯಾತ್ಮಿಕ ಎಂಬ ಮೂರು ಬಗೆಯ ಕಷ್ಟಗಳು
ತಿಗುರು – ಲೇಪಿಸು
ತಿರಿ – ಭಿಕ್ಷೆ ಬೇಡು
ತಿರ್ದ – ತಿದ್ದಿ
ತೀಡು – ಹಚ್ಚು
ತುಂಬೂರ ಗೊಳ್ಳಿ – ಕಾಡುಮಾವಿನ ಮರ
ತುಡುಕು – ಮುಟ್ಟು
ತುಬ್ಬು – ಹಬ್ಬು
ತುರಂಗ – ತುರಗ, ಕುದುರೆ
ತುರು – ಆಕಳು
ತೂಪಿರಿ – ದೃಷ್ಟಿದೋಷವನ್ನು ಪರಿಹರಿಸಲು ಬೂದಿ ಮುಂತಾದುವನ್ನು ಗಾಳಿಗೆ ಊದಿ ಮಂತ್ರಹಾಕುವುದು
ತೃಣ – ಹುಲ್ಲು
ತೃಷೆ – ಬಾಯಾರಿಕೆ
ತೆತ್ತೀಸ – ಮೂವತ್ಮೂರು
ತೇಜಿ – ಕುದುರೆ
ತೊಂಗಲು – ಗೊಂಚಲು
ತೊಂಡಿಲ್ –ತಲೆಯಲ್ಲಿ ಧರಿಸುವ ಮುತ್ತಿನ ಆಭರಣ

ತೊಡರು – ಬಂಧನ
ತೊಪ್ಪಲು – ಎಲೆ, ಸೊಪ್ಪು
ತ್ವರಿತ – ಬೇಗ
ತ್ರಾಸು – ಸಣ್ಣತಕ್ಕಡಿ
ದಂತ – ಹಲ್ಲು
ದಟ್ಟಡಿ – ತಪ್ಪುಹೆಜ್ಜೆ
ದಧ್ಯನ್ನ – ಮೊಸರನ್ನ
ದನುಜ – ರಾಕ್ಷಸ
ದರ್ಪಣ – ಕನ್ನಡಿ
ದಾಡೆ – ಕೋರೆಹಲ್ಲು
ದಾನವ – ರಾಕ್ಷಸ
ದಾವ – ಯಾವ
ದಿಗಂಬರಧರ – ಬೌದ್ಧಾವತಾರ
ದಿನಕರ – ಸೂರ್ಯ
ದುಂಡಿ – ತುಂಬು ಮೈಯವಳು
ದುಂದುಭಿ – ನಗಾರಿ
ದುಕೂಲ – ರೇಷ್ಮೆ ಬಟ್ಟೆ
ದುರಿತ – ಕಷ್ಟ, ಪಾಪ
ದುರುಳ – ದುಷ್ಟ
ದುಷ್ಕೃತ – ಪಾಪಕಾರ್ಯ
ದೂರ್ವೆ – ಗರಿಕೆ
ದೇವಾಂಗ – ರೇಷ್ಮೆ ವಸ್ತ್ರ
ದೇವೋತ್ತುಂಗ–ದೇವ ಶ್ರೇಷ್ಠ
ದೇಶಿಗ – ಪ್ರಯಾಣಿಕ, ಪರದೇಸಿ
ದೈತ್ಯ – ರಾಕ್ಷಸ
ದೌಹಿತ್ರ – ಮಗಳ ಮಗ
ಧಗೆ – ಶಾಖ
ಧರಣಿ – ಭೂಮಿ
ಧರೆ – ಭೂಮಿ
ಧಾರುಣೀ – ಭೂಮಿ
ಧುರ – ಯುದ್ಧ
ಧೂರ್ಜಟಿ – ಶಿವ
ಧೇನು – ಹಸು
ನಕ್ರ – ಮೊಸಳೆ
ನಖ – ಉಗುರು
ನಜರು > ನದರು – ಕಾಣಿಕೆ, ದೃಷ್ಟಿ
ನಾರಂಗ – ಕಿತ್ತಳೆ
ನಿಂದ್ಯ – ನಿಂದೆ
ನಿಗಳ – ಸಂಕೋಲೆ
ನಿಚ್ಚಣಿಕೆ – ಏಣಿ
ನಿಧಾನ – ನಿಧಿ
ನಿಪುಣತನ – ಜಾಣ್ಮೆ
ನಿಬ್ಬಣ – ದಿಬ್ಬಣ,ಮದುವೆ ಮೆರವಣಿಗೆ
ನಿರ್ಜರ – ದೇವತೆ
ನಿರೂಪ – ಅಪ್ಪಣೆ
ನೀಲಕಂಠ – ಶಿವ
ನೀಲವರ್ಣ – ಕೃಷ್ಣ
ನೆಗಹು, ನೆಗಪು – ಚಿಮ್ಮು, ಎತ್ತು
ನೆಗಳು – ಮೊಸಳೆ
ನೆರಹು – ಒಟ್ಟುಗೂಡಿಸು
ನೆಲವು – ಪಾತ್ರೆಗಳನ್ನು ಇಡುವುದಕ್ಕೆ ಇಳಿಬಿಡುವ ಹಗ್ಗದ ಜಾಳಿಗೆ
ಪಂಚಭಕ್ಷ್ಯ – ಅತಿರಸ, ಹೋಳಿಗೆ, ಲಡ್ಡು, ಜಿಲೇಬಿ, ಅಪೂಪ ಅಥವಾಅಪ್ಪಂ
ಪಂಥ – ಸಂಕಲ್ಪ
ಪನ್ನಂಗ – ಪಲ್ಲಕ್ಕಿಯ ಮೇಲುಹೊದಿಕೆ ಹಾವು

ಪನ್ನಗಾರಿ – ಗರುಡ
ಪರಪುಟ್ಟ – ಕೋಗಿಲೆ
ಪಲ್ಲವ – ಚಿಗುರು
ಪಾಟಿಸು – ತೆಗೆ
ಪಾಥೇಯ – ಬುತ್ತಿ
ಪಾರಗ – ಪಂಡಿತ
ಪಾರಣೆ – ಉಪವಾಸದ ಅನಂತರ ಮಾಡುವ ಊಟ
ಪಾವಕ – ಅಗ್ನಿ
ಪಾವುಡೆ – ವಸ್ತ್ರ
ಪಾಹಿ – ರಕ್ಷಿಸು
ಪಿಸುಣ – ಚಾಡಿಕೋರ
ಪುಂಡರೀಕ – ಬಿಳಿಯ ತಾವರೆ
ಪುರಂದರ – ಇಂದ್ರ
ಪುಳಿಂದ – ಬೇಡ
ಪೊರೆ – ಕಾಪಾಡು
ಪೊಳಕು – ಆಕೃತಿ
ಪೌತ್ರ – ಮಗನ ಮಗ
ಪ್ರವರ್ಗ – ಮಗ್ಗಿನ ಯಜ್ಞಪಾತ್ರೆ
ಪ್ರಾಕಾರ – ಗೋಡೆ
ಫಾಲನೇತ್ರ – ಶಿವ
ಫೌಜು – ಸೈನ್ಯ
ಬಂಟ – ಸೇವಕ
ಬಟ್ಟೆ – ದಾರಿ
ಬನ್ನ – ಕಷ್ಟ
ಬನ್ನಣೆ – ಬಲಶಾಲಿ, ಜ್ಞಾನಿ
ಬಲುಮೆ – ಸಾಮರ್ಥ್ಯ
ಬಸವಳಿ – ಬಳಲು
ಬಸಿರು – ಹೊಟ್ಟೆ
ಬಳ್ಳು – ನರಿ
ಬಾಸೆ – ನಾಭಿಯಿಂದ ಎದೆಯ ವರೆಗೆ ಇರುವಕೂದಲು
ಬಾವುಗ – ಗಂಡು ಬೆಕ್ಕು
ಬ್ರಾಹ್ಮರು – ಬ್ರಾಹ್ಮಣರು
ಬಿನ್ನಪ – ವಿನಂತಿ
ಬಿಸಜ – ಕಮಲ
ಬುಧಜನ – ವಿದ್ವಾಂಸರು
ಬೆಚ್ಚರದೆ – ಕಂಗೆಡದೆ
ಭರ್ಗ – ಶಿವ
ಭಾಂಡ – ಪಾತ್ರೆ
ಭಾವೆ – ಹೆಂಗಸು
ಭಾಳ – ಹಣೆ
ಭುಜಗ – ಹಾವು
ಭೂಮಿಜೆ – ಸೀತೆ
ಭೂಸು – ಬ್ರಾಹ್ಮಣ
ಭೃತ್ಯ – ಸೇವಕ
ಬೋರನೆ – ವೇಗವಾಗಿ
ಮಂಜಾಡಿ – ಗುಲಗಂಜಿ
ಮಂಡೆ – ತಲೆ
ಮಂದಾರ – ಪಾರಿಜಾತ
ಮಕರಂದಪತ್ರಿಕೆ > ಮಕರಿಕಾಪತ್ರ ? ಸ್ತ್ರೀಯರು ಕಪೋಲದಮೇಲೆ ಬಣ್ಣಗಳಿಂದ ಬರೆದು ಕೊಳ್ಳುವ ಚಿತ್ರ
ಮಕುಟ – ಕಿರೀಟ
ಮಚ್ಚರ – ಮತ್ಸರ
ಮಡುಹು – ಕೊಲ್ಲು
ಮತ್ತ – ಮದಿಸಿದ
ಮಥನ – ಕಡೆಯುವುದು
ಮರ್ದಿಸು – ನಾಶಮಾಡು

ಮಲಯಜ – ಶ್ರೀಗಂಧ
ಮಲ್ಲ – ವೀರ
ಮಲೆತ – ಗರ್ವಿಸಿದ
ಮಸ್ತಕ – ತಲೆ
ಮಹಿ – ಭೂಮಿ
ಮಾಜು – ಮುಚ್ಚಿಡು
ಮಾಣದೆ – ಬಿಡದೆ
ಮಾರ್ಜಾಲ – ಬೆಕ್ಕು
ಮಾನಿನಿ – ಹೆಣ್ಣು
ಮಾರಾಂತ – ಎದುರಿಸಿದ
ಮಾರಿ> ಮೋರೆ – ಮುಖ
ಮಿಸುನಿ – ಚಿನ್ನ
ಮೀಟಾದ – ಶ್ರೇಷ್ಠವಾದ
ಮುಪ್ಪುರ – ತ್ರಿಪುರ
ಮೂಷಕ – ಇಲಿ
ಮೃಗ – ಜಿಂಕೆ
ಮೃಗಮದ – ಕಸ್ತೂರಿ
ಮೃಡ – ಶಿವ
ಮೇಘ – ಮೋಡ
ಮೇಧಾವಿ – ಗೋಪಿಚಂದನ, ಬುದ್ಧಿವಂತ
ಮೇಲುಕಟ್ಟಿ – ಪಕ್ಷವಹಿಸಿ
ಮೇಲುದ – ಉತ್ತರೀಯ
ಮೋತಿ – ಮುತ್ತು
ಮೋದ – ಹರುಷ
ಮೌಂಜಿ – ಮುಂಜಿ ಹುಲ್ಲಿನಿಂದ ಮಾಡಿದ ದಾರ
ಯಂತ್ರವಾಹಕ–ಯಂತ್ರಚಾಲಕ, ವಿಷ್ಣು
ರಂಬಿಸು – ಸಂತೈಸು
ರಚ್ಚೆಗಿಕ್ಕು – ರಂಪಮಾಡು
ರಾಹು > ರಾವು ಒಂದು ಗ್ರಹ
ರಾವುತ > ರಾಹುತ –ಕುದುರೆಯ ಸವಾರ
ರಿಪು – ಶತ್ರು
ಲಂಡ – ದುಷ್ಟ
ಲಲಾಟ – ಹಣೆ
ಲಾಗಿಸು – ಹಾರು
ಲಾಜ – ಬತ್ತದ ಅರಳು
ಲಾಲಿಸು – ಕೇಳು
ವನಜ – ಕಮಲ
ವತ್ಸರ – ವರ್ಷ
ವರ್ಮ – ಮೋಸ
ವಲ್ಲಭೆ – ಪತ್ನಿ
ವಳೆಯಕೆ – ಒಳಕ್ಕೆ
ವಾಜಿ – ಕುದುರೆ
ವಾಮದೇವ – ಶಿವ
ವಾಮಭಾಗ – ಎಡಭಾಗ
ವಾಯಸ – ಕಾಗೆ
ವಾರಣ – ಆನೆ
ವಾರಿಜಸಖ –ಸೂರ್ಯ
ವ್ಯಾಕುಲ – ಚಿಂತೆ
ವ್ಯಾಧ – ಬೇಡ
ವ್ರಾತ – ಸಮೂಹ
ವಿಕ್ರಮ – ಶೂರ
ವಿಚ್ಛೇದನ – ನಾಶ ಮಾಡುವವ
ವಿನುತ – ಹೊಗಳಲ್ಪಟ್ಟ
ವಿಪ್ಪನ್ನ – ಕಷ್ಟಕ್ಕೆ ಗುರಿಯಾದ
ವಿಪ್ರ – ಬ್ರಾಹ್ಮಣ
ವೃಷ್ಟಿ – ಮಳೆ
ವೆಗ್ಗಳಿಸಿ – ಹೆಚ್ಚಾಗಿ

ಶಂಕೆ – ಅನುಮಾನ
ಶಕುನ – ಹಕ್ಕಿ, ನಿಮಿತ್ತ
ಶತಪತ್ರ – ತಾವರೆ
ಶತರಂಗಿ – ವಿವಿಧ ಬಣ್ಣಗಳಿಂದ ಕೂಡಿದ
ಶರಧಿ – ಸಮುದ್ರ
ಶರ್ವಾಣಿ – ಪಾರ್ವತಿ
ಶಸ್ತ್ರಕಟಿ – ಕತ್ತಿಯಂತೆ ತೆಳುವಾದ ನಡುವುಳ್ಳವಳು
ಶ್ವಾನ – ನಾಯಿ
ಶಿಖಿ – ಬೆಂಕಿ
ಶೂರ್ಪ – ಮೊರ
ಶೂಲ – ಈಟಿ
ಶೇಷ – ಆದಿಶೇಷ, ಉಳಿದುದು
ಶೋಣಿತ – ರಕ್ತ
ಸಂಗ್ರಾಮ> ಸಮರಂಗ–ಯುದ್ಧ
ಸಗ್ಗಳೆ – ನೀರು ತುಂಬುವ ಚರ್ಮದ ಚೀಲ
ಸಟೆ – ಸುಳ್ಳು
ಸಮಿತೆ> ಸಮಿದೆ– ಸಮಿತ್ತು ,
ಸರ್ಬ>ಸರುವ – ಸರ್ವ, ಎಲ್ಲ
ಸಲ>ಸಲಿ? – ನಾಯಿ
ಸಲಿಗೆ,ಸರಿಗೆ – ಕಂಠಾಭರಣ
ಸಾದರ – ಮನ್ನಣೆ
ಸಾಮ – ಸಾಮವೇದ
ಸಾಯುಜ್ಯ – ಮೋಕ್ಷದ ನಾಲ್ಕು ಪ್ರಕಾರಗಳಲ್ಲಿ ಒಂದು
ಸಾರೂಪ್ಯ > ಸಾರೋಪ್ಯ – ಮೋಕ್ಷದ ನಾಲ್ಕು ಪ್ರಕಾರಗಳಲ್ಲಿ ಒಂದು
ಸಿಂಗ – ಸಿಂಹ
ಸಿಂಧು – ಸಮುದ್ರ
ಸುಧೆ – ಅಮೃತ
ಸುಪರ್ಣ – ಗರುಡ
ಸುರತರು – ಕಲ್ಪವೃಕ್ಷ
ಸುರಧೇನು – ಕಾಮಧೇನು
ಸುರಪತಿ – ಇಂದ್ರ
ಸೂತಕ – ಹೊಲೆ, ಮೈಲಿಗೆ
ಸೂರೆಪಾನ – ದೇವರ, ರಾಜರ ಮೆರೆವಣಿಗೆಯಲ್ಲಿ ಗೌರವಾರ್ಥವಾಗಿ ಕೊಂಡಯ್ಯುವ ಒಂದು ಬಗೆಯ ಫಲಕ
ಸೂಸಕ – ಬೈತಲೆ ಬಟ್ಟು
ಸೆಜ್ಜೆವಾಹರಿ – ಶಯನ ಗೃಹ?
ಸೆಳೆಮಂಚ – ತೂಗು ಮಂಚ
ಸೇಸೆ – ಮಂತ್ರಾಕ್ಷತೆ
ಸೊಡರು – ದೀಪ
ಸೊನ್ನೆದಾಮ – ಚಿನ್ನದ ಡಾಬು
ಸೊಲ್ಲು – ಮಾತು
ಸೋಗಿಲು – ಉಡಿ, ಮಡಿಲು
ಸೋಮ – ಚಂದ್ರ
ಸೋಮಶಾಲೆ – ಬಿಸಲು ಮಚ್ಚು
ಸ್ವನ – ಧ್ವನಿ, ಇಂಚರ
ಹಂಗ – ಶಕುನದ ಹಕ್ಕಿ
ಹಂಸವಾಹನ – ಬ್ರಹ್ಮ
ಹಚ್ಚಕಿಮಾತು – ಚಾಡಿ ಮಾತು
ಹಯ – ಕುದುರೆ

ಹರದಿ – ಪತಿವ್ರತೆ
ಹರವರಿ – ಅನಿರ್ಬಂಧತೆ, ಅವಸರ
ಹರಿ–ಸಿಂಹ, ಕುದುರೆ, ವಿಷ್ಣು
ಹರಿಣಿ – ಜಿಂಕೆ
ಹರುಷಣ – ಆನಂದದಾಯಕ
ಹಲ್ಲಣಿಸುವ – ಕೆನೆಯುವ
ಹವ್ಯವಾಹನ – ಅಗ್ನಿ
ಹಸಾದ – ಪ್ರಸಾದ
ಹಸ್ತಿ – ಆನೆ
ಹಿಕ್ಕು – ಸಿಕ್ಕು, ಬಾಚು
ಹುಲ್ಲೆ – ಜಿಂಕೆ
ಹೆಗ್ಗಳಿಸು – ಹೆಚ್ಚಾಗು
ಹೆಗ್ಗಾಲು ಮರೆ–ದೊಡ್ಡಪಾದರಕ್ಷೆ ?

ಹೆರೆ – ಹತ್ತಿರ, ಚಂದ್ರ
ಹೆಳವ – ಕುಂಟ
ಹೆಬ್ಬೇರಿ – ದೊಡ್ಡ ಭೇರಿ
ಹೇಮ – ಚಿನ್ನ
ಹೇರಂಬ – ಗಣಪತಿ
ಹೇರು – ಹೊರೆ
ಹೇವ – ನಾಚಿಕೆ
ಹೊಂತಕಾರಿ – ಪರಾಕ್ರಮಿ, ಬುದ್ಧಿವಂತ, ಮೋಸಗಾರ
ಹೊಡೆಮಗುಚು–ಹೊಟ್ಟೆ ಅಡಿಯಾಗಿಸಿ ತಿರುಗುವುದು
ಹೊಳಲು – ಪಟ್ಟಣ

# ಅನುಬಂಧ - ೨

## ಟಿಪ್ಪಣಿಗಳು

### ಕೀರ್ತನೆ ೧

(೧) ಮತ್ಸ್ಯ : ಬ್ರಹ್ಮನು ನಿದ್ದೆಯಲ್ಲಿದ್ದಾಗ ಆತನ ನಾಲ್ಕು ಬಾಯಿಗಳಿಂದ ಹೊರ ಬರುತ್ತಿದ್ದ ವೇದರಾಶಿಯನ್ನು ಹಯಗ್ರೀವನೆಂಬ ರಾಕ್ಷಸನು ಅಪಹರಿಸಿ ಪ್ರಳಯಜಲದಲ್ಲಿ ಅಡಗಿದ್ದಾಗ, ಹರಿಯು ಮತ್ಸ್ಯ ರೂಪದಿಂದ ಬಂದು ವೇದಗಳನ್ನು ಹಿಂದೆ ತಂದನು (ನು. ೧-೨)

(೨) ಕೂರ್ಮ : ಅಮೃತಕ್ಕಾಗಿ ದೇವಾಸುರರು ಕ್ಷೀರಸಾಗರವನ್ನು ಮಥಿಸುತ್ತಿದ್ದಾಗ, ಕಡೆಗೋಲಾಗಿದ್ದ ಮಂದರಪರ್ವತ ಭಾರದಿಂದ ಮುಳುಗಲಾರಂಭಿಸಿತು. ಆಗ ಹರಿ ಕೂರ್ಮಾವತಾರಿಯಾಗಿ ಮಂದರಪರ್ವತವನ್ನು ತನ್ನ ಬೆನ್ನ ಮೇಲೆತ್ತಿಕೊಂಡು ನಿಂತು ಸಮುದ್ರಮಥನಕ್ಕೆ ಸಹಾಯಕನಾದನು

(೩) ವರಾಹ : ಹಿರಣ್ಯಾಕ್ಷನೆಂಬ ರಾಕ್ಷಸ ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು ಸಮುದ್ರದ ತಳಕ್ಕೆ ಒಯ್ದಾಗ ಹರಿ ಹಂದಿಯ ರೂಪದಿಂದ (ವರಾಹ) ಬಂದು, ಅವನನ್ನು ಕೊಂದು ಭೂಮಿಯನ್ನು ತನ್ನ ಕೋರೆದಾಡೆಗಳಿಂದ ಎತ್ತಿತಂದನು.

(೪) ನರಸಿಂಹ : ಇದು ಹರಿಯ ನಾಲ್ಕನೆಯ ಅವತಾರ. ತನ್ನ ಭಕ್ತನಾದ ಪ್ರಹ್ಲಾದನ ಕರೆಗೆ ಓಗೊಟ್ಟು ನರಸಿಂಹನಾಗಿ ಬಂದು, ಪ್ರಹ್ಲಾದನ ತಂದೆಯಾದ ಹಿರಣ್ಯ ಕಶಿಪುವನ್ನು ಕೊಲ್ಲುತ್ತಾನೆ.

(೫) ವಾಮನ : ಬಲಿಚಕ್ರವರ್ತಿಯ ಸೊಕ್ಕನ್ನು ಮುರಿಯುವುದಕ್ಕಾಗಿ ಹರಿಯು ವಟುವೇಷದಿಂದ ಅವನಲ್ಲಿಗೆ ಬಂದು ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಬೇಡಿ ಆ ನೆವದಿಂದ ಅವನನ್ನು ಸುತಳಕ್ಕೆ ಮೆಟ್ಟಿದನು.

(೬) ಪರಶುರಾಮ : ಉನ್ಮತ್ತರಾದ ಕ್ಷತ್ರಿಯರ ಕುಲವನ್ನೇ ಸವರಿ ಹಾಕುವ ಪಣತೊಟ್ಟ ವಿಷ್ಣು ಗಂಡುಗೊಡಲಿ ಹಿಡಿದು ಪರಶುರಾಮನಾಗಿ ಅವತರಿಸಿದ

(೭) ರಾಮ : ರಾವಣನೇ ಮೊದಲಾದ ರಾಕ್ಷಸರ ಬಾಧೆಯನ್ನು ಪರಿಹರಿಸಲು ಹರಿ ಇಕ್ಷ್ವಾಕುವಂಶದ ದಶರಥನ ಮಗನಾಗಿ ಅವತರಿಸಿದ.

(೮) ಕೃಷ್ಣ : ದುಷ್ಟರ ನಿಗ್ರಹಕ್ಕಾಗಿ ಹರಿ ಯಾದವಕುಲದಲ್ಲಿ ಕೃಷ್ಣನಾಗಿ ಅವತರಿಸಿದ

(೯) ಬುದ್ಧ : ವೈದಿಕಮಾರ್ಗದಲ್ಲಿ ಬಹಳ ಶ್ರದ್ಧೆಯಿಂದ ಇದ್ದ ತ್ರಿಪುರಾಸುರರನ್ನು ವಂಚಿಸಲು ಹರಿ ಪಾಷಂಡವೇಷಿಯಾಗಿ ಬಂದು ಅವರಿಗೆ ಪಾಷಂಡಧರ್ಮವನ್ನು ಉಪದೇಶಿಸುವನು. ತ್ರಿಪುರಾಸುರರ ಪತ್ನಿಯರ ಪಾತಿವ್ರತ್ಯಕ್ಕೆ ಭಂಗ ತರುವ ಸಲುವಾಗಿ ಬೆತ್ತಲೆಯಾಗಿ ಅವರೆದುರು ನಿಂತನೆಂದು ಒಂದು ಕತೆಯುಂಟು

(೧೦) ಕಲ್ಕಿ : ಕಲಿಯುಗದಲ್ಲಿ ಅನಾಚಾರಗಳು ಮೇರೆಮೀರಿದಾಗ ಕರ್ಮಭ್ರಷ್ಟರನ್ನು ಶಿಕ್ಷಿಸಲು ಹರಿ ಕಲ್ಕಿಯ ಅವತಾರ ತಾಳಿ ಕುದುರೆಯೇರಿ ಬರುವನು.

## ಕೀರ್ತನೆ ೩

ದಶಾವತಾರದ ವಿವರಗಳು ಮತ್ತೆ ಮತ್ತೆ ಬಂದಿದೆ.

ನೋಡಿ ಕೀ-೧ ಟಿಪ್ಪಣಿ

**ಶುಕ್ರನ ಕಣ್ಣಿರಿದು : (ನುಡಿ-೧):** ವಾಮನಾವತಾರಿ ಹರಿಗೆ ಬಲಿಯು ದಾನಕೊಡಲು ಒಪ್ಪಿ, ಸಂಕಲ್ಪ ಮಾಡುವಾಗ ಶುಕ್ರಾಚಾರ್ಯರು ಅರ್ಘ್ಯಕಲಶದಲ್ಲಿ ಅಡ್ಡಿಯಾಗಿ ಕುಳಿತುಕೊಂಡರು. ವಾಮನಾವತಾರಿ ಹರಿ ದರ್ಭೆಯನ್ನು ಹಾಕಿ ಧಾರೆಯನ್ನು ಸರಿಪಡಿಸುವಾಗ ಆ ದರ್ಭೆಯ ಏಟಿನಿಂದ ಶುಕ್ರಾಚಾರ್ಯರ ಒಂದು ಕಣ್ಣು ಹೋಯಿತು.

**ಶಿಲೆಯನೊದ್ದು ನಿಜಸತಿಯುಳ ಮಾಡಿ : (ನುಡಿ- ೧):** ರಾಮಾಯಣದ ಬಾಲಕಾಂಡದಲ್ಲಿ ಶ್ರೀ ರಾಮ ಶಿಲೆಯನ್ನು ಮೆಟ್ಟಿ ಅಹಲ್ಯೆಯನ್ನು ಉದ್ಧರಿಸಿದ ಪ್ರಸಂಗ

**ಮಾತೆಯ ಶಿರವ ಚೆಂಡಾಡಿ : (ನುಡಿ-೨):** ಪರಶುರಾಮನ ತಾಯಿ ರೇಣುಕೆ ಒಮ್ಮೆ ನದಿಗೆ ನೀರು ತರಲು ಹೋದವಳು ಗಂಧರ್ವನನ್ನು ಕಂಡು ಮೋಹವಶಳಾಗಿ, ತಡವಾಗಿ ಆಶ್ರಮಕ್ಕೆ ಹಿಂದಿರುಗಿದಾಗ ಕ್ರುದ್ಧನಾದ ಜಮದಗ್ನಿ ಅವಳ ತಲೆ ಕಡಿಯುವಂತೆ ತನ್ನ ಮಕ್ಕಳಿಗೆ ಹೇಳುತ್ತಾನೆ. ಹಿರಿಯ ನಾಲ್ಕು ಮಂದಿ ಪುತ್ರರು ನಿರಾಕರಿಸುತ್ತಾರೆ. ಪರಶುರಾಮ ತಂದೆಯ ಮಾತಿನಂತೆ ತಾಯಿಯನ್ನು, ನಾಲ್ವರು ಅಣ್ಣಂದಿರನ್ನು ಕೊಂದು, ಸಂತುಷ್ಟನಾದ ತಂದೆಯ ವರದಿಂದ ಮರಳಿ ಎಲ್ಲರನ್ನೂ ಬದುಕಿಸಿಕೊಳ್ಳುತ್ತಾನೆ.

**ಸಮರಂಗದಿ ಸುರಧೇನು ತಂದು : (ನುಡಿ–೩):** ಒಮ್ಮೆ ಜಮದಗ್ನಿಮುನಿಯ ಐದುಮಂದಿ ಕುಮಾರರೂ ಆಶ್ರಮದಿಂದ ಹೊರಕ್ಕೆ ಹೋಗಿರಲು, ಅನೂಪದೇಶದ ರಾಜ ಕಾರ್ತವೀರ್ಯಾರ್ಜುನನು ಜಮದಗ್ನಿಯ ಆಶ್ರಮಕ್ಕೆ ಬಂದು ಕಾಮಧೇನುವಿನ ಕರುವನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಹೋಗುತ್ತಾನೆ. ಆಮೇಲೆ ಪರಶುರಾಮನು ಆಶ್ರಮಕ್ಕೆ ಬಂದು ಕರುವಿಗಾಗಿ ಅರಚಿಕೊಳ್ಳುತ್ತಿರುವ ಕಾಮಧೇನುವನ್ನು ಕಂಡು ಕ್ರೋಧಾವೇಶದಿಂದ ಕಾರ್ತವೀರ್ಯಾರ್ಜುನನನ್ನು ಅಟ್ಟಿಕೊಂಡು ಹೋಗಿ ಅವನನ್ನು ಕೊಂದು ಕರುವನ್ನು ಮರಳಿ ತರುತ್ತಾನೆ.

## ಕೀರ್ತನೆ ೫

**ಕೌಸ್ತುಭಹಾರ (ನುಡಿ–೧):** ದೇವದಾನವರು ಕ್ಷೀರಸಮುದ್ರವನ್ನು ಮಥಿಸಿದಾಗ ಹುಟ್ಟಿದ ಈ ರತ್ನವನ್ನು ವಿಷ್ಣು ಎದೆಯಲ್ಲಿ ಧರಿಸಿದ.

**ಗರುಡವಾಹನ : (ನುಡಿ–೨):** ದೇವಲೋಕದಿಂದ ಅಮೃತವನ್ನು ತಂದು ತನ್ನ ತಾಯಿಯ ದಾಸ್ಯವನ್ನು ಬಿಡಿಸಿದ ಗರುಡನ ಸಾಮರ್ಥ್ಯವನ್ನು ಕಂಡು ಮೆಚ್ಚಿದ ವಿಷ್ಣು ಆತನನ್ನು ತನ್ನ ವಾಹನವನ್ನಾಗಿ ಮಾಡಿಕೊಂಡ.

**ಸರಸಿಯೊಳು ಕರಿಯ ಸಲಹಿದೆ (ನುಡಿ–೨) :** ಪೂರ್ವದಲ್ಲಿ ಇಂದ್ರದ್ಯುಮ್ನನೆಂಬ ವಿಷ್ಣುಭಕ್ತ ಅಗಸ್ತ್ಯರ ಶಾಪದಿಂದ ಆನೆಯ ಜನ್ಮವನ್ನು ಪಡೆದನು. ತ್ರಿಕೂಟಪರ್ವತದ ತಪ್ಪಲಿನಲ್ಲಿದ್ದ ಆ ಆನೆ ಒಮ್ಮೆ ಪದ್ಮಸರೋವರದಲ್ಲಿ ನೀರು ಕುಡಿಯುತ್ತಿದ್ದಾಗ ಒಂದು ಮೊಸಳೆ ಅದರ ಕಾಲನ್ನು ಹಿಡಿಯಿತು. ಬಿಡಿಸಿಕೊಳ್ಳಲಾರದೆ ಆನೆ ಹರಿಯನ್ನು ಪ್ರಾರ್ಥಿಸಲು ಅವನು ಬಂದು ಚಕ್ರಾಯುಧದಿಂದ ಮೊಸಳೆಯನ್ನು ಸೀಳಿ ಆನೆಯನ್ನು ರಕ್ಷಿಸುತ್ತಾನೆ.

## ಕೀರ್ತನೆ ೮

**ನೀರೊಳಗೆ ಮನೆ --- ಮೆರಿವೆ (ನುಡಿ–೩):** ದಶಾವತಾರ ನೋಡಿ ಕೀ ೧ ರ ಟಿಪ್ಪಣಿ ನು–೪, ೫, ೬, ೭ ರಲ್ಲೂ ದಶಾವತಾರದ ಪ್ರಸ್ತಾಪವಿದೆ.

## ಕೀರ್ತನೆ ೯

ಪುಂಗನೂರಿನ ರಾಜಕುಮಾರನಿಗೆ ಕಣ್ಣು ಕಾಣಿಸದಂತಾದಾಗ ಆತನು ಗಿರಿಯಮ್ಮನ ಬಳಿ ಬರಲು, ಆಕೆ ದೇವರದೀಪದ ಕಪ್ಪನ್ನು ಕಣ್ಣಿಗೆ ಹಚ್ಚಿ ದೃಷ್ಟಿ ಬರಿಸಿದಳೆಂದು ಪ್ರತೀತಿ. ಆ ಸಂದರ್ಭದಲ್ಲಿ ಹಾಡಿದ ಹಾಡು ಇದು ಎಂದು ಹೇಳುತ್ತಾರೆ.

**ಕಲ್ಲೊಳು ಕಾಂತೆಯ ಮಾಡಿದ (ನು. ೧):** ನೋಡಿ ಕೀ–೩,ನು–೧ರ ಟಿಪ್ಪಣಿ

**ಕುಬುಜೆಯಳ-----ಯುವತಿಯನ್ನಾಗಿ ಮಾಡಿದ (ನು. ೨):** ಕಂಸನ ಅಪ್ಪಣೆಯಂತೆ ಕೃಷ್ಣಬಲರಾಮರು ಮಧುರೆಗೆ ಬಂದು, ಚಾಣೂರ ಮುಷ್ಟಿಕರೆಂಬ ಜಟ್ಟಿಗಳೊಂದಿಗೆ ಕಾಳಗಕ್ಕೆ ಹೊರಟಾಗ ನಡುದಾರಿಯಲ್ಲಿ ಕಂಸನಿಗೆ ಚಂದನವನ್ನು ಒಯ್ಯುತ್ತಿದ್ದ ಕುಬ್ಜೆ ಸಿಕ್ಕುತ್ತಾಳೆ. ಆಗ ಕೃಷ್ಣ ಬಲಾತ್ಕಾರದಿಂದ ಚಂದನವನ್ನು ತೆಗೆದು ಕೊಂಡು ತನ್ನ ಮೈಗೆ ಪೂಸಿಕೊಂಡು ಅವಳ ಗೂನು ಬೆನ್ನನ್ನು ಸರಿಪಡಿಸಿ ಸುಂದರ ಯುವತಿಯಾಗಿ ಮಾಡುತ್ತಾನೆ.

## ಕೀರ್ತನೆ ೧೧

**ಕೈಕಾಲಿಲ್ಲದೆ --- ಅಶ್ವವೇರಿ ಓಡಿದ (ನು-೧):** ದಶಾವತಾರದ ವಿವರ ನೋಡಿ ಕೀ ೧ರ ಟಿಪ್ಪಣಿ ನುಡಿ ೨,೩ ರಲ್ಲೂ ದಶಾವತಾರದ ವಿವರಗಳಿವೆ. ಶುಕ್ರನ ಕಣ್ಣ ಮುರಿದ (ನು- ೩) ನೋಡಿ ಕೀ ೩ರ ನು-೧ರ ಟಿಪ್ಪಣಿ

## ಕೀರ್ತನೆ ೧೩

ಮತ್ಸ್ಯರೂಪಿಲಿ-----ಚರಿಸುತ್ತ ಬಂದೆ (ನು-೧-೩)

ದಶಾವತಾರ ವರ್ಣನೆ ನೋಡಿ ಕೀ-೧ರ ಟಿಪ್ಪಣಿ.

## ಕೀರ್ತನೆ ೧೪

ಮೂರು ನುಡಿಗಳಲ್ಲೂ ಮತ್ತೆ ಮತ್ತೆ ದಶಾವತಾರದ ವರ್ಣನೆ ಇದೆ. ನೋಡಿ ೫೧ರ ಟಿಪ್ಪಣಿ.

## ಕೀರ್ತನೆ ೧೬

ದಶಾವತಾರದ ವರ್ಣನೆ ನೋಡಿ ಕೀ ೧ರ ಟಿಪ್ಪಣಿ.

## ಕೀರ್ತನೆ ೨೦

**ಸುಮತೀಂದ್ರ (ನು-೩):** ಮಂತ್ರಾಲಯದ ಸ್ವಾಮಿಗಳು. ಇವರ ಕಾಲ ಕ್ರಿ.ಶ.೧೬೯೧-೧೭೨೫. ರಾಮನನ್ನು ಕುರಿತ ಈ ಹಾಡಿನಲ್ಲಿ ಗಿರಿಯಮ್ಮ ಇವರನ್ನು ಗುರುಭಾವದಿಂದ ಸ್ಮರಿಸಿದ್ದಾಳೆ.

## ಕೀರ್ತನೆ ೨೨

**ಚಾಣೂರಮರ್ದನ (ನು-೧):** ಕಂಸನ ಆಸ್ಥಾನದಲ್ಲಿದ್ದ ಜಟ್ಟಿಗಳಲ್ಲಿ ಒಬ್ಬ. ಬಲರಾಮ ಕೃಷ್ಣರು ಮಧುರೆಗೆ ಹೋಗಿದ್ದಾಗ, ಇವನೂ ಇವನ ಜೊತೆಗಾರನಾದ ಮುಷ್ಟಿಕನೂ ಕಂಸನ ಪ್ರೇರಣೆಯಿಂದ ರಾಮಕೃಷ್ಣರನ್ನು ಕೊಲ್ಲಹೋಗಿ, ಮುಷ್ಟಿಯುದ್ಧದಲ್ಲಿ ತಾವೇ ಹತರಾದರು.

**ಅಕ್ರೂರ (ನು-೨):** ಕಂಸನ ಅಷ್ಟಮಂತ್ರಿಗಳಲ್ಲಿ ಒಬ್ಬ. ಕಂಸನ ಅಪ್ಪಣೆಯಂತೆ ಬಲರಾಮಕೃಷ್ಣರನ್ನು ಮಧುರೆಗೆ ಕರೆತರುವಾಗ ಯಮುನೆಯಲ್ಲಿ ಸ್ನಾನ ಮಾಡುತ್ತಿದ್ದ ಅಕ್ರೂರನಿಗೆ ಕೃಷ್ಣ ತನ್ನ ದಿವ್ಯರೂಪವನ್ನು ತೋರಿದ.

**ಅಂಬರೀಷ (ನು-೨):** ಒಬ್ಬ ವಿಷ್ಣು ಭಕ್ತ. ಒವ್ಮೆ ಏಕಾದಶೀ ವ್ರತ ಪಾರಾಯಣನಾಗಿದ್ದ ಇವನ ವ್ರತಕ್ಕೆ ಭಂಗವನ್ನುಂಟುಮಾಡುವ ಉದ್ದೇಶದಿಂದ ಇವನಲ್ಲಿಗೆ ಬಂದ ದೂರ್ವಾಸಮುನಿ ಇವನನ್ನು ಶಪಿಸಿದನು. ವಿಷ್ಣುಭಕ್ತನಾದ ಅಂಬರೀಷನ ರಕ್ಷಣೆಗೆ ಚಕ್ರಾಯುಧ ಧಾವಿಸಿ ಬಂತು. ಕೊನೆಗೆ ಮುನಿ ಅಂಬರೀಷನನ್ನೇ ಮರೆಹೊಕ್ಕು ಪಾರಾಗಬೇಕಾಯಿತು.

**ನಕ್ರಬಂಧನ (ನು ೨):** ಗಜೇಂದ್ರಮೋಕ್ಷ ನೋಡಿ ಕೀ-೫ ರ ನು-೨ ರ ಟಿಪ್ಪಣಿ

**ನಾಗ ಸ್ತ್ರೀರಕ್ಷಕ (ನು ೨):** ಕಾಲಿಯ ಎಂಬ ಸರ್ಪವು ಕಾಳಿಂದಿ ಮಡುವನ್ನು ಹೊಕ್ಕು ನೀರೆಲ್ಲವು ವಿಷಮಯವಾಗಿ, ನೀರು ಕುಡಿದ ಪ್ರಾಣಿಗಳು ಸಾಯುತ್ತಿದ್ದವು. ಈ ವಿಷಯ ತಿಳಿದ ಕೃಷ್ಣ ಅಲ್ಲಿಗೆ ಬಂದು ಕಾಳಿಂದಿ ಮಡುವಿನಲ್ಲಿ ಧುಮುಕಿ ಕಾಲಿಯನ ಹೆಡೆಯನ್ನು ಮೆಟ್ಟಿ ತುಳಿಯ ತೊಡಗಿದ. ಆಗ ಕಾಲಿಯನ ಪತ್ನಿಯರಾದ ನಾಗಕನ್ಯೆಯರು ಬಂದು ಕೃಷ್ಣನ ಮೊರೆಹೊಕ್ಕು ಪತಿ ಭಿಕ್ಷೆ ಬೇಡಿದರು. ಕೃಷ್ಣ ಅವರಿಗೆ ಅಭಯವಿತ್ತು ಕಾಲಿಯನನ್ನು ಆ ಮಡು ಬಿಟ್ಟು ಹೋಗುವಂತೆ ಆದೇಶಿಸಿದ.

## ಕೀರ್ತನೆ ೨೩

ಹೆಳವನಕಟ್ಟೆಯ ರಂಗನಾಥದೇವರ ಉತ್ಸವ ಕಾಲದಲ್ಲಿ ಅರ್ಚಕರು ದೇವರಿಗೆ ಅಲಂಕಾರ ಮಾಡಿ, ಕೈಯಲ್ಲಿ ರತ್ನದುಂಗುರವಿಟ್ಟು ಬೀಗ ಹಾಕಿ ಹೋಗಿದ್ದರು. ಬೆಳಿಗ್ಗೆ ಬಂದು ನೋಡಿದಾಗ ಉಂಗುರವಿರಲಿಲ್ಲ. ಅರ್ಚಕರಿಗೆ ಕಳವಿನ ಆರೋಪ ತನ್ನ ಮೇಲೆ ಬಂದರೆ ಎಂಬ ಭಯ. ಅಷ್ಟರಲ್ಲಿ ಅಲ್ಲಿಗೆ ಬಂದ ಗಿರಿಯಮ್ಮ ವಿಷಯ ತಿಳಿದು ಈ ಹಾಡನ್ನು ಹಾಡಿದಳೆಂದು, ಆಗ ಗುಬ್ಬಿಯೊಂದು ಬಾಯಲ್ಲಿ ಉಂಗುರ ಕಚ್ಚಿ ತಂದು ಅಲ್ಲಿ ಹಾಕಿ ಹೋಯಿತೆಂದು ಗಿರಿಯಮ್ಮನ ಮಹಿಮೆಯನ್ನು ಹೇಳುತ್ತಾರೆ. ದಶಾವತಾರದ ವರ್ಣನೆ ಈ ಕೀರ್ತನೆಯಲ್ಲಿದೆ.

## ಕೀರ್ತನೆ ೨೬

**ಕೋಟಿಲಿಂಗವನ್ನು ರೋಮರೋಮದಿ ಧರಿಸಿದವನು : (ಕೀರ್ತನೆ ೨೬ ಅ.ಪ)**

ರಾಜಸೂಯಯಾಗದ ಸಂದರ್ಭದಲ್ಲಿ ಕೃಷ್ಣನು ಧರ್ಮರಾಯನಿಗೆ ಉಚ್ಛಿಷ್ಟ ಶುದ್ಧಿಗಾಗಿ ಪುರುಷಾಮೃಗವನ್ನು ತರಲು ಹೇಳುತ್ತಾನೆ. ಆಗ ಅಣ್ಣನ ಅಪ್ಪಣೆಯಂತೆ ಭೀಮನು ಆ

ಮೃಗವನ್ನು ತರಲು ಹೋಗುತ್ತಾನೆ. ದಾರಿಯಲ್ಲಿ ಭೇಟಿಯಾದ ಹನುಮಂತನು ಪುರುಷಾಮೃಗದ ಉಗ್ರಶೈವಭಕ್ತಿಯನ್ನು ಭೀಮಸೇನನಿಗೆ ವಿವರಿಸಿ, ಅದನ್ನು ಹಸ್ತಿನಾವತಿಯವರೆಗೆ ಕರೆತರಲು ಉಪಾಯವೆಂದು ತನ್ನ ರೋಮಗಳನ್ನು ಕೊಡುವನು. ಆ ರೋಮಗಳನ್ನು ನೆಲಕ್ಕೆ ಹಾಕಿದಾಗ ಕೋಟಿಲಿಂಗಗಳು ಉದ್ಭವಿಸುತ್ತಿದ್ದವು. ಪುರುಷಾಮೃಗದಿಂದ ಈ ಲಿಂಗಗಳ ಪೂಜೆ ಮಾಡಿಸುತ್ತ ಭೀಮ ಅದನ್ನು ಹಸ್ತಿನಾವತಿಗೆ ಕರೆತರವನು.

ಪುಟ್ಟಿದಾಗಲೆ ಗಗನಮಂಡಲವನ್ನು ಮುಟ್ಟಿ (ನು ೧) ವಾಯುದೇವ ಮತ್ತು ಅಂಜನೆಯರಿಗೆ ಮಗನಾಗಿ ಹುಟ್ಟಿದ ಹನುಮಂತ, ಹುಟ್ಟಿದ ಕೂಡಲೇ ಆಗತಾನೆ ಉದಯಿಸುತ್ತಿದ್ದ ಸೂರ್ಯಬಿಂಬವನ್ನು ಕಂಡು, ಹಣ್ಣೆಂದು ಭ್ರಮಿಸಿ ಅಂತರಿಕ್ಷಕ್ಕೆ ನೆಗೆದು ಸೂರ್ಯನನ್ನು ಪೀಡಿಸಿದ. ಆಗ ಇಂದ್ರ ವಜ್ರಾಯುಧದಿಂದ ಹೊಡೆಯಲು ಕೆನ್ನೆಗೆ ಪೆಟ್ಟಾಗಿ ಅದು ಸೊಟ್ಟಗಾಯಿತು.

**ಸೀತಾದೇವಿಗುಂಗುರವಿತ್ತು : (ನು-೨):** ಹನುಮಂತ ಸೀತೆಯನ್ನು ಹುಡುಕುತ್ತಾ ಲಂಕೆಗೆ ಹೋಗಿ, ಅಲ್ಲಿ ಸೀತೆಯನ್ನು ಕಂಡು ರಾಮನಿಂದ ಪಡೆದ ಮುದ್ರೆಯುಂಗುರವನ್ನು ಆಕೆಗೆ ಕೊಟ್ಟು ರಾಮನ ಬರುವಿಕೆಯ ಬಗ್ಗೆ ಭರವಸೆ ನೀಡುತ್ತಾನೆ.

**ಮಿಂಚುಳ್ಳವನವ ಕಿತ್ತನು : (ನು-೨):** ಲಂಕೆಯ ಅಶೋಕವನವನ್ನೆಲ್ಲಾ ಕಿತ್ತು ಹಾಳುಗೆಡುವುತ್ತಾನೆ .

**ಲಂಕಿಣಿಯನೆ ತುಡುಕಿ----ಗೆಲಿದ (ನು-೩):** ಲಂಕೆಯ ಅಭಿಮಾನದೇವತೆ ಲಂಕಿಣಿ ಲಂಕಾನಗರವನ್ನು ಕಾವಲು ಕಾಯುತ್ತಿದ್ದಾಗ ಹನುಮಂತ ಅವಳೊಡನೆ ಕಾದಿ, ಅವಳನ್ನು ನಿಗ್ರಹಿಸುತ್ತಾನೆ.

**ಸಂಜೀವನವ ತಂದು ಲಕ್ಷ್ಮಣನ ಅಂತಕವಳಿದ (ನು-೪):** ರಾಮರಾವಣರಿಗೆ ಯುದ್ಧ ನಡೆದಾಗ ರಾವಣನ ಮಗ ಇಂದ್ರಜಿತುವಿನಿಂದ ಅನೇಕ ವಾನರರು ಸತ್ತು ರಾಮಲಕ್ಷ್ಮಣರು ಮೂರ್ಛೆ ಹೋಗುತ್ತಾರೆ. ಆಗ ಜಾಂಬವನ ಮಾತಿನಂತೆ ಗಿಡಮೂಲಿಕೆ ತರಲು ಹೋದ ಹನುಮಂತ ಓಷಧಿ ಪರ್ವತವನ್ನೇ ಹೊತ್ತು ತರುತ್ತಾನೆ. ಅದರಲ್ಲಿದ್ದ ಸಂಜೀವಿನಿಯ ಪ್ರಭಾವದಿಂದ ಸತ್ತಿದ್ದ ವಾನರರೂ ಮತ್ತೆ ಬದುಕುತ್ತಾರೆ.

## ಕೀರ್ತನೆ ೨೭

**ಜಾನಕಿಗೆ ಮುದ್ರೆಯನಿತ್ತ (ನು-೧):** ನೋಡಿ ಕೀ ೨೬ ನು- ೨ರ ಟಿಪ್ಪಣಿ

**ಸಂಜೀವನವತಂದುಳುಹಿದೆ (ನು-೩)**ನೋಡಿ ಕೀ ೨೬ರ ನು ೪ರ ಟಿಪ್ಪಣಿ

## ಕೀರ್ತನೆ ೨೯

**ನೀಲಕಂಠ (ನು–೨):** ದೇವಾಸುರರು ಸಮುದ್ರಮಥನ ಮಾಡಿದ ಸಮಯದಲ್ಲಿ ಹುಟ್ಟಿ ಬಂದ ಕಾಲಕೂಟ ವಿಷವನ್ನು ಶಿವ ನುಂಗಿದುದರಿಂದ ಅವನ ಕತ್ತಿನಲ್ಲಿ ಕಪ್ಪುಕಲೆಯಾಗಿ ಅವನು ನೀಲಕಂಠನೆನಿಸಿದನು.

## ಕೀರ್ತನೆ ೩೦

**ಶಿವನವಲ್ಲಭೆ ತ್ರಾಸಿನಲಿ ತೂಗುವಳು (ನು–೧):** ಗೋಕರ್ಣ ಕ್ಷೇತ್ರ ಹಾಗೂ ಗೋಕರ್ಣೇಶ್ವರನ ಸ್ತುತಿ. ಭಾರತದ ಪ್ರಸಿದ್ಧ ಭಾಸ್ಕರ ಕ್ಷೇತ್ರಗಳಲ್ಲಿ, ದಕ್ಷಿಣಕಾಶಿ ಎಂಬ ಗೌರವಕ್ಕೆ ಪಾತ್ರವಾದ ಪುಣ್ಯಕ್ಷೇತ್ರ ಗೋಕರ್ಣ. ಇಲ್ಲಿಯ ಮಹಾಬಲೇಶ್ವರ ಲಿಂಗ ಆಕಳ ಕಿವಿಯ ಆಕಾರದಲ್ಲಿರುವುದರಿಂದ ಈ ಕ್ಷೇತ್ರಕ್ಕೆ ಗೋಕರ್ಣವೆಂಬ ಹೆಸರು ಬಂದಿದೆ. ಇಲ್ಲಿ ಅನೇಕ ಗುಡಿಗಳು, ಲಿಂಗಗಳು, ತೀರ್ಥಗಳು ಇವೆ. ಮಹಾಬಲೇಶ್ವರ ದೇವಾಲಯದ ಸಮೀಪದಲ್ಲಿರುವ ತಾಮ್ರಗೌರಿ ಗುಡಿಯ ಗೌರಿಯ ಕೈಯಲ್ಲಿ ತಕ್ಕಡಿ ಇದ್ದು ಗೋಕರ್ಣಹೆಚ್ಚೊ ಕಾಶಿಹೆಚ್ಚೊ ಎಂದು ಆಕೆ ತೂಗುತ್ತಿದ್ದಾಳಂತೆ. ಗೋಕರ್ಣವೆ ಒಂದು ತೂಕ ಹೆಚ್ಚು ಎಂಬ ನಂಬಿಕೆ ಇದೆ.

**ಚಂದ್ರಜೂಟಿಸಖಸಂಪ್ರಿಗೆ ಪಾರ್ಥನು ಈ ಬಯಲಾದನು (ನು–೨):** ಅರ್ಥ ಅಸ್ಪಷ್ಟವಾಗಿದೆ. ದ್ರೌಪದಿ ಮತ್ತು ಧರ್ಮರಾಯ ಏಕಾಂತದಲ್ಲಿದ್ದುದನ್ನು ನೋಡಿದ್ದಕ್ಕಾಗಿ ಅರ್ಜುನ ತೀರ್ಥಯಾತ್ರೆಗೆ ಹೊರಟು ಈ ಕ್ಷೇತ್ರವನ್ನು ಸಂದರ್ಶಿಸಿದನೆಂದು ಹೇಳುತ್ತಾರೆ. ಪ್ರಾಯಶಃ ಅದರ ಸೂಚನೆ ಇರಬಹುದು.

**ಕೋಟಿ ತೀರ್ಥ (ನು–೨):** ಗೋಕರ್ಣದ ಮಹಾಬಲೇಶ್ವರ ದೇವಾಲಯದಾಗ್ನೇಯ ಭಾಗದಲ್ಲಿ ಕೋಟಿ ತೀರ್ಥವೆಂಬ ಸರೋವರವಿದೆ.

**ಬಲಿದ ದನುಜನ ಭಾವಕೆ ಮೆಚ್ಚಿ (ನು–೪):** ತಾಯಿ ಕೈಕಸಿಯ ಪೂಜೆಗಾಗಿ ಶಿವನ ಆತ್ಮಲಿಂಗವನ್ನೇ ತರುತ್ತೇನೆಂದು ಹೊರಟ ರಾವಣ ಕಠಿಣವಾದ ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ, ಆತ್ಮಲಿಂಗವನ್ನು ಪಡೆದುಕೊಂಡು ಶಿವನ ಮಾತಿನಂತೆ ಪಾದಚಾರಿಯಾಗಿ ಹೊರಡುತ್ತಾನೆ. ಶಿವನ ಮತ್ತೊಂದು ಶರತ್ತೆಂದರೆ ಅದನ್ನು ಎಲ್ಲಿಯೂ ನೆಲದ ಮೇಲೆ ಇಡಬಾರದು. ರಾವಣನ ಉದ್ದೇಶವನ್ನು ಭಂಗಗೊಳಿಸಲು ದೇವತೆಗಳು ಗಣಪತಿಯನ್ನು ವಟುವೇಷದಲ್ಲಿ ಕಳಿಸುತ್ತಾರೆ. ಸಂಧ್ಯಾವಂದನೆ ಮಾಡುವುದಕ್ಕಾಗಿ ರಾವಣ ಆತ್ಮಲಿಂಗವನ್ನು ಗಣಪತಿಯ ಕೈಯಲ್ಲಿ ಕೊಡುತ್ತಾನೆ. ರಾವಣ ಹಿಂತಿರುಗುವುದು ತಡವಾಯಿತೆಂದು ಗಣಪತಿ ಲಿಂಗವನ್ನು ಕೆಳಗಿಟ್ಟುಬಿಡುತ್ತಾನೆ. ಲಿಂಗ ಅಲ್ಲಿಯೇ ನೆಲೆಯೂರುತ್ತದೆ. ಮಹಾಬಲಶಾಲಿಯಾದ ರಾವಣ ಅದನ್ನು ಅಲ್ಲಿಂದ ಕದಲಿಸಲಾರದೆ ಸೋತದ್ದರಿಂದ ಆ ಲಿಂಗಕ್ಕೆ ಮಹಾಬಲೇಶ್ವರ ಎಂಬ ಹೆಸರಾಯಿತು.

**ಅನ್ನದಾ ಶತಶೃಂಗ --- ಪಾತಾಳಗಂಗೆ ಸಹಿತಲಿ (ನು-೫):** ಗೋಕರ್ಣದ ಉತ್ತರ, ದಕ್ಷಿಣ ಮತ್ತು ಪೂರ್ವ ದಿಕ್ಕುಗಳಲ್ಲಿ ಶತ ಶೃಂಗಪರ್ವತದ ಚಿಕ್ಕ ಚಿಕ್ಕ ಗುಡ್ಡಗಳಿವೆ. ಉತ್ತರಕ್ಕೆ ಶಾಲ್ಮಲಿನದಿ, ದಕ್ಷಿಣಕ್ಕೆ ಅಘನಾಶಿನಿ ನದಿ, ಪೂರ್ವಕ್ಕೆ ಸಿದ್ಧೇಶ್ವರ, ಪಶ್ಚಿಮಕ್ಕೆ ಸಮುದ್ರಗಳಿವೆ

## ಕೀರ್ತನೆ ೩೧

**ಚಂಡಿ ಚಾಮುಂಡಿ : (ನು-೩):** ಚಂಡಿ, ಚಾಮುಂಡಿ, ಕಾಳಿ, ಭಗವತಿ, ದುರ್ಗಿ, ರೇಣುಕೆ ಮೊದಲಾದವುಗಳನ್ನು ಆದಿಶಕ್ತಿಯ ಬೇರೆ ಬೇರೆ ರೂಪಗಳೆಂದು ಭಾವಿಸಿ ಆರಾಧಿಸುತ್ತಾರೆ. ಚಂಡ ಮತ್ತು ಮುಂಡ ಎಂಬ ರಾಕ್ಷಸರನ್ನು ಸಂಹರಿಸಿದ್ದರಿಂದ ದೇವಿಗೆ ಚಾಮುಂಡಿ ಎಂಬ ಹೆಸರು ಬಂತು.

**ಮಲೆತ ಮಹಿಷಾಸುರನಕೊಂದೆ (ನು ೫):** ಬ್ರಹ್ಮನ ಅನುಗ್ರಹದಿಂದ ದಿತಿಯ ಮಗನಾಗಿ ಜನಿಸಿದ ಮಹಿಷಾಸುರ,ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ತನಗೆ ಮರಣವಿಲ್ಲದಂತೆ ಅನುಗ್ರಹಿಸಲು ಬೇಡಿಕೊಳ್ಳುತ್ತಾನೆ. ಅದು ಸಾಧ್ಯವಿಲ್ಲವೆಂದಾಗ ತನಗೆ ಹೆಣ್ಣಿನಿಂದ ಮರಣವಾಗಲಿ ಎಂದು ಕೇಳಿಕೊಳ್ಳುತ್ತಾನೆ. ಮಹಿಷನ ಉಪಟಳ ಮಿತಿಮೀರಿದಾಗ ದೇವತೆಗಳೆಲ್ಲಾ ತಮ್ಮ ತೇಜಸ್ಸಿನ ಒಂದೊಂದು ಭಾಗವನ್ನು ಒಟ್ಟುಗೂಡಿಸಿ ಸೃಷ್ಟಿಸಿದ ತ್ರಿಪುರಸುಂದರಿ ಮಹಿಷಾಸುರನನ್ನು ಕೊಲ್ಲುತ್ತಾಳೆ.

**ಪರಶುರಾಮನ ಮಾತೆ (ನುಡಿ ೫):** ಪರಶುರಾಮನ ತಾಯಿ ರೇಣುಕೆ 'ನವಶಕ್ತಿ' ಯರಲ್ಲಿ ಆದಿಶಕ್ತಿ ಎಂಬ ನಂಬಿಕೆ ಇದೆ. ರೇಣುಕೆ ಶಿವಭಕ್ತರಿಗೆ ಪಾರ್ವತಿ, ವಿಷ್ಣುಭಕ್ತರಿಗೆ ಲಕ್ಷ್ಮಿ, ಉಳಿದವರಿಗೆ ದುರ್ಗೆಯಾಗಿ ಆರಾಧನೆ ಪಡೆಯುತ್ತಾಳೆ.

## ಕೀರ್ತನೆ ೩೩

**ಗಂಗಾಜನಕ : (ನು ೧):** ವಿಷ್ಣು ವಾಮನ ಅವತಾರದಿಂದ ಭೂಮಿ ಆಕಾಶಗಳನ್ನು ಅಳೆಯಲು, ಅವನ ಪಾದ ಆಕಾಶವನ್ನು ಸ್ಪರ್ಶಿಸಿ ಬ್ರಹ್ಮಾಂಡಕಟಹವನ್ನು ಸೀಳಿ ಸತ್ಯಲೋಕದಲ್ಲಿ ಅದರ ಉಗುರಿನ ಕಾಂತಿ ತೋರಿಬರಲು ಬ್ರಹ್ಮನು ಅದಕ್ಕೆ ನೀರಿನಿಂದ ಅಭಿಷೇಕ ಮಾಡಿದನು. ಆ ನೀರು ಗಂಗೆಯಾಗಿ ಹರಿಯಿತು.

## ಕೀರ್ತನೆ ೩೫

**ಅಜಾಮಿಳನ ಉದ್ಧರಿಸಿದೆ (ನು-೧):** ಅಜಾಮಿಳನು ಬ್ರಾಹ್ಮಣ ಕುಲದಲ್ಲಿ ಹುಟ್ಟಿದವನಾಗಿದ್ದರೂ ಧರ್ಮಪತ್ನಿಯನ್ನೂ ತಂದೆ ತಾಯಿಯರನ್ನೂ ತ್ಯಜಿಸಿ, ಒಬ್ಬ ಶೂದ್ರ ಸ್ತ್ರೀಯಲ್ಲಿ ವ್ಯಾಮೋಹಗೊಂಡು ದುರಾಚಾರ ಮಗ್ನನಾಗಿದ್ದನು. ಈತ ತನ್ನ ಕೊನೆಗಾಲದಲ್ಲಿ ತನ್ನಮಗ ನಾರಾಯಣನನ್ನು ನಾರಗ ಎಂದು ಕರೆಯಲು ಆ ಕೂಗಿಗೆ ಶ್ರೀ ಹರಿ ಒಲಿದು ಅವನಿಗೆ ಸದ್ಗತಿಯಿತ್ತನು.

## ಕೀರ್ತನೆ ೩೬

**ತರುಳ ಕರಿಯಲು---ವರವಿತ್ತೆ (ನುಡಿ ೨):** ನರಸಿಂಹ ಅವತಾರದ ಕಥೆ. ನೋಡಿ ಕೀ ೧ರ ಟಿಪ್ಪಣಿ

**ಜಲದೊಳು--- ಕರಿರಾಜಗೊಲಿದು ರಕ್ಷಿಸಿದೆ (ನು-೩):** ಗಜೇಂದ್ರಮೋಕ್ಷದ ಕಥೆ. ನೋಡಿ ಕೀ ೫ರ ನುಡಿ ೨ರ ಟಿಪ್ಪಣಿ

**ದುರುಳದುಶ್ಯಾಸ----ಅಭಿಮಾನವನು ಕಾಯ್ದೊ (ನು-೪)**

ಮಹಾಭಾರತದ ವಿರಾಟಪರ್ವದಲ್ಲಿ ಬರುವ, ದ್ರೌಪದೀ ವಸ್ತ್ರಾಪಹರಣದ ಸಮಯದಲ್ಲಿ ಕೃಷ್ಣ ದ್ರೌಪದಿಗೆ 'ಉಟ್ಟ ವಸ್ತ್ರಅಕ್ಷಯವಾಗಲಿ' ಎಂದು ಅನುಗ್ರಹಿಸಿದ ಪ್ರಸಂಗ

## ಕೀರ್ತನೆ ೩೭

**ಮುರಹರ (ನು-೨):** ಮುರ ಒಬ್ಬ ರಾಕ್ಷಸ. ನರಕಾಸುರನ ಸೇನಾಪತಿಗಳಲ್ಲಿ ಒಬ್ಬ. ಇವನು ಕೃಷ್ಣನಿಂದ ಹತನಾದ. ಆದ್ದರಿಂದ ಕೃಷ್ಣನಿಗೆ ಮುರಾಂತಕ ಎಂದು ಹೆಸರು.

## ಕೀರ್ತನೆ ೩೯

**ಸುರಪತಿಯು ---- ಕಾಯ್ದೆ (ನು-೧):** ಒಮ್ಮೆ ನಂದಗೋಕುಲದ ಗೊಲ್ಲರೆಲ್ಲರೂ ಇಂದ್ರಯಾಗವನ್ನು ಮಾಡಬೇಕೆಂದಿದ್ದಾಗ ಕೃಷ್ಣ ಆ ಯಾಗವನ್ನು ನಿಲ್ಲಿಸಿ ಗೋವರ್ಧನ ಗಿರಿಯನ್ನು ಪೂಜೆ ಮಾಡುವಂತೆ ಹೇಳಲಾಗಿ ಗೊಲ್ಲರೆಲ್ಲ ಹಾಗೆಯೇ ಮಾಡುತ್ತಾರೆ. ಇದರಿಂದ ಕೋಪಗೊಂಡ ಇಂದ್ರ ಏಳು ದಿನಗಳ ಕಾಲ ಚಂಡವೃಷ್ಟಿಯನ್ನು ಸುರಿಸುತ್ತಾನೆ. ಆಗ ಗೊಲ್ಲರ ಗೋಳನ್ನು ಕೇಳಿದ ಕೃಷ್ಣ ಗೋವರ್ಧನ ಗಿರಿಯನ್ನು ಮೇಲಕ್ಕೆತ್ತಿ ಹಿಡಿದು ಅದರ ಕೆಳಗೆ ಗೊಲ್ಲರನ್ನೂ ದನಗಳನ್ನು ರಕ್ಷಿಸುತ್ತಾನೆ.

**ಮಡುವಿನೊಳಗೆ --- ಸಲಹಿದೆ (ನು ೨):** ಗಜೇಂದ್ರಮೋಕ್ಷ ನೋಡಿ ಕೀ ೫ರ ನು- ೨ರ ಟಿಪ್ಪಣಿ

**ಕುದುರೆ ಕ್ರೂರದಂತದಿ ಕತ್ತರಿಸುವ ಸಮಯದಲ್ಲಿ (ನು-೩) :** ಸಂದರ್ಭ ಸ್ಪಷ್ಟವಾಗುವದಿಲ್ಲ. ಕಲಮದಾನಿ ಗುರುರಾಯರ 'ಹರಿದಾಸರ ಕಥೆಗಳು' ಕೃತಿಯಲ್ಲಿ ಈ ಕೀರ್ತನೆಯ ಸಂದರ್ಭವನ್ನು ಹೀಗೆ ಕೊಟ್ಟಿದ್ದಾರೆ. ಒಮ್ಮೆ ಗಿರಿಯಮ್ಮ ಗುಡಿಗೆ ನೈವೇದ್ಯವನ್ನು ಒಯ್ಯುತ್ತಿದ್ದಾಗ ಬಾಗಿಲಲ್ಲಿ ಕಟ್ಟಿದ ಕುದುರೆಯು ಆಕೆಯ ಸ್ತನವನ್ನೇ ತನ್ನ ಕ್ರೂರವಾದ ಹಲ್ಲುಗಳಿಂದ ಹಿಡಿದು ಬಿಟ್ಟಿತು. ಆಕೆ ಚೀರಿದಾಗ ಜನರೆಲ್ಲಾ ಸೇರಿದರೂ ಯಾರೂ ಕುದುರೆಯ

ಬಾಯಿಂದ ಆಕೆಯನ್ನು ಬಿಡಿಸಲಾಗಲಿಲ್ಲ. ಆಗ ಗಿರಿಯಮ್ಮ ಈ ಕೀರ್ತನೆಯನ್ನು ಹಾಡಿದಾಗ ಕುದುರೆ ತಾನಾಗಿ ಆಕೆಯನ್ನು ಬಿಟ್ಟಿತು.

## ಕೀರ್ತನೆ ೪೦

ಹೆಳವನಕಟ್ಟೆ ರಂಗನ ಜಾತ್ರೆಗೆ ಬಂದಿದ್ದ ಮಗುವೊಂದು ಮೃತವಾಗಲು ಗಿರಿಯಮ್ಮ ಅದನ್ನು ಬದುಕಿಸಿದಳೆಂದೂ ಆ ಸಂದರ್ಭದಲ್ಲಿ ಹಾಡಿದ ಕೀರ್ತನೆ ಇದು ಎಂದು ಪ್ರತೀತಿ ಇದೆ.

**ಸಾಂದೀಪನಿಗೊಲಿದೆ (ನು–೩):** ಬಲರಾಮ ಕೃಷ್ಣರ ಗುರು ಸಾಂದೀಪನಿ. ಗುರುದಕ್ಷಿಣೆ ಕೊಡಲು ಬಯಸಿದಾಗ ಸಾಂದೀಪನಿ ಸತ್ತ ತನ್ನ ಮಗನನ್ನು ತಂದು ಕೊಡಿ ಎಂದು ಕೇಳುತ್ತಾನೆ. ಆಗ ಬಲರಾಮ ಕೃಷ್ಣ ಪಂಚಜನನೆಂಬ ರಾಕ್ಷಸನನ್ನು ಕೊಂದು, ಪಾಂಚಜನ್ಯವೆಂಬ ಶಂಖವನ್ನು ತೆಗೆದುಕೊಂಡು ಯಮಲೋಕಕ್ಕೆ ಹೋಗಿ, ಗುರುಪುತ್ರನನ್ನು ಕರೆತಂದು ಸಾಂದೀಪನಿಗೆ ಒಪ್ಪಿಸುತ್ತಾರೆ.

## ಕೀರ್ತನೆ ೪೧

ಇದೊಂದು ಉಗಾಭೋಗ ಶರಣರ ವಚನಗಳನ್ನು ಹೋಲುವ ರಚನೆ ಉದ್ಗಾಹ, ಮೇಲಾಪ, ಧ್ರುವಾ, ಅಂತರ, ಆಭೋಗ ಈ ಪಂಚಧಾತುಗಳ ಆದ್ಯಂತ ಪದಗಳನ್ನು ಸೇರಿಸಿ 'ಉದ್ಗಾಹಾಭೋಗ' ಎಂದು ಆದ ಸಂಸ್ಕೃತದರೂಪ. ಕನ್ನಡದಲ್ಲಿ 'ಉಗಾಭೋಗ' ಎಂದಾಗಿರಬಹುದು.

## ಕೀರ್ತನೆ ೪೨

ಗಿರಿಯಮ್ಮ ಯಾವುದೋ ಕಷ್ಟಕಾಲದಲ್ಲಿ ಈ ಕೀರ್ತನೆಯನ್ನು ಹಾಡಿರಬೇಕು

**ಮತ್ತುಗಜ---- ಏಳದಂತಾಗಿದೆ (ನು– ೧)**

**ನಾಲ್ಕು ದಿಕ್ಕಿಗೆ----ಎದೆಗುಂದಿರೆ (ನು–೪):** ಇವುಗಳ ಸಂದರ್ಭ ತಿಳಿಯುವುದಿಲ್ಲ ಪ್ರಾಯಶಃ ತನ್ನ ಬಗ್ಗೆಯೇ ಹೇಳಿಕೊಂಡಿರಬೇಕು.

## ಕೀರ್ತನೆ ೪೪

**ತರುಣಿಕುಲರಾಮನೊಳು----ದೇವ (ನು ೧):** ರಾವಣನ ತಮ್ಮನಾದ ವಿಭೀಷಣನು ಸೀತೆಯನ್ನು ರಾಮನಿಗೆ ಒಪ್ಪಿಸುವಂತೆ ರಾವಣನಿಗೆ ಬುದ್ಧಿವಾದ ಹೇಳಲು, ರಾವಣ ಅದನ್ನು

ತಿರಸ್ಕರಿಸಿದ. ಆಗ ವಿಭೀಷಣ ಲಂಕೆಯಿಂದ ಹೊರಟು ರಾಮನನ್ನುಮೊರೆ ಹೊಕ್ಕ. ರಾವಣನ ವಧೆಯಾದ ಮೇಲೆ ರಾಮ ವಿಭೀಷಣನಿಗೆ ಪಟ್ಟಕಟ್ಟಿದ.

**ಒದೆದೆಳೆದು ಪತಿಗಳೈವರ---- ಶ್ರೀಕಾಂತ (ನು ೨):** ಮಹಾಭಾರತದ ಸಭಾಪರ್ವದಲ್ಲಿ ಬರುವ, ದ್ರೌಪದೀ ವಸ್ತ್ರಾಪಹರಣದ ಸಮಯದಲ್ಲಿ ಕೃಷ್ಣ, ದ್ರೌಪದಿಗೆ ಉಟ್ಟವಸ್ತ್ರಅಕ್ಷಯವಾಗಲಿ ಎಂದು ಅನುಗ್ರಹಿಸಿದ ಪ್ರಸಂಗ.

**ಉತ್ತಾನಪಾದರಾಜ----ಧ್ರುವಗೆ ಪದವಿಯನಿತ್ತೆ (ನು ೩) :** ಧ್ರುವ ಉತ್ತಾನಪಾದನ ಹಿರಿಯ ಹೆಂಡತಿಯಾದ ಸುನೀತಿಯ ಮಗ. ಒಮ್ಮೆ ಉತ್ತಾನಪಾದ ಕಿರಿಯ ಹೆಂಡತಿ ಸುರುಚಿಯ ಮಗ ಉತ್ತಮನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡಿರಲು ಧ್ರುವನು ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಲು ಆಸೆಪಟ್ಟ. ಆಗ ಸುರುಚಿ 'ರಾಜಸಿಂಹಾಸನ'ವನ್ನು ಏರುವ ಭಾಗ್ಯ ಬೇಕಿದ್ದರೆ, ಕಾಡಿನಲ್ಲಿ ತಪಸ್ಸು ಮಾಡಿ ನನ್ನ ಹೊಟ್ಟೆಯಲ್ಲಿ ಹುಟ್ಟಬೇಕು ಎಂದು ಗದರಿಸಿದಳು. ಧ್ರುವ ತಾಯಿಯ ಒಪ್ಪಿಗೆ ಪಡೆದು ಕಾಡಿನಲ್ಲಿ ಘೋರತಪವನ್ನಾಚರಿಸಿ, ಹರಿಯನ್ನು ಪ್ರತ್ಯಕ್ಷ ಮಾಡಿಕೊಂಡು ಅವನಿಂದ ವರಪಡೆದು ಧ್ರುವಮಂಡಲವೆಂಬ ಶಾಶ್ವತ ಸ್ಥಾನವನ್ನು ಸಂಪಾದಿಸಿದ.

## ಕೀರ್ತನೆ ೪೬

**ನಕ್ರನ ಬಾಧೆಯೊಳಗೆ----ಸಲಹಿದೆ (ನು ೨):** ಗಜೇಂದ್ರ ಮೋಕ್ಷ ನೋಡಿ ಕೀ ೫ ರ ನು ೨ರ ಟಿಪ್ಪಣಿ

**ತರಳ ಧ್ರುವನು----ಪದವಿಯನಿತ್ತೆ (ನು ೩):** ನೋಡಿ ಕೀ ೪೪ರ ನು ೩ರ ಟಿಪ್ಪಣಿ

## ಕೀರ್ತನೆ ೪೭

**ಪೊಡವಿಭಾರವ ಪೊತ್ತು--- ಫಣಿಪ (ನು ೧):** ಕಶ್ಯಪನಿಂದ ಕದ್ರುವಿನಲ್ಲಿ ಜನಿಸಿದವ ಆದಿಶೇಷ. ಈತ ಬ್ರಹ್ಮನನ್ನು ಮೆಚ್ಚಿಸಿ ವರವನ್ನು ಪಡೆದು ಭೂಮಿಯನ್ನು ಹೊತ್ತಿರುವನು. ಹೆಡೆಯಲ್ಲಿ ಮಾಣಿಕ್ಯವಿದೆ. ಶಿವ ಆಭರಣವಾಗಿ ಧರಿಸಿದ್ದಾನೆ. ಶೇಷ ಒಂದು ಅಂಶದಿಂದ ಪಾತಾಳದಲ್ಲಿದ್ದು ಇನ್ನೊಂದು ಅಂಶದಿಂದ ವಿಷ್ಣುವಿನ ಹಾಸಿಗೆಯಾಗಿದ್ದಾನೆ.

**ಸುರಪತಿಯಗೆದ್ದು----ಮರದಮೇಲೆ (ನು ೨):** ಗರುಡನ ಕಥೆ. ನೋಡಿ ಕೀ ೫ರ ನು ೨ರ ಟಿಪ್ಪಣಿ

**ರೋಮರೋಮಕೆ ಕೋಟಿಲಿಂಗ ಧರಿಸಿದ** (ನು ೩):ನೋಡಿ ಕೀ ೨೬ ರ ಅನುಪಲ್ಲವಿಯ ಟಿಪ್ಪಣಿ

## ಕೀರ್ತನೆ ೫೦

**ಸಾಯುಜ್ಯ ಪದವಿ (ನು ೧೫):** ಮಾಧ್ವ ಸಂಪ್ರದಾಯದ ಪ್ರಕಾರ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯ ಎಂಬವು ಮುಕ್ತಿಯ ನಾಲ್ಕು ಬಗೆಗಳು. ಪರಮಾತ್ಮನಲ್ಲಿ ಐಕ್ಯವನ್ನು ಹೊಂದುವುದು ಸಾಯುಜ್ಯ.

## ಕೀರ್ತನೆ ೫೧

ಹರಿಹರರಿಬ್ಬರನ್ನು ಸಮಭಾವದಿಂದ ಸ್ತುತಿಸಿದ ಕೀರ್ತನೆ.

**ಗಿರಿಯ ಬೆನ್ನಲಿ ತಾಳಿದನೀತ (ನು ೧):** ಕೂರ್ಮಾವತಾರದ ಕತೆ ನೋಡಿ ಕೀ ೧ರ ಟಿಪ್ಪಣಿ

**ಸ್ಮರನ ಮಡುಹಿದಾತನಾತ (ನು ೧):** ಸತಿಯು ಮರಣಾನಂತರ ಶಿವ ಸಮಾಧಿನಿಷ್ಠನಾಗಿದ್ದಾಗ ದೇವತೆಗಳೆಲ್ಲರೂ ಶಿವ ಪಾರ್ವತಿಯರ ವಿವಾಹ ಮಾಡಿಸಬೇಕೆಂದು ಮನ್ಮಥನನ್ನು ಕರೆದು, ಶಿವನ ತಪಸ್ಸನ್ನು ಭಂಗಗೊಳಿಸಲು ಕಳುಹಿಸುತ್ತಾರೆ. ಶಿವ ಕೋಪದಿಂದ ಹಣೆಗಣ್ಣನ್ನು ತೆರೆದು ಮನ್ಮಥನನ್ನು ಸುಟ್ಟು ಬೂದಿ ಮಾಡುತ್ತಾನೆ

**ಸ್ಮರನ ಜನಕನಾದ ನೀತ (ನು ೧):** ಮನ್ಮಥನ ಅವತಾರನಾದ ಪ್ರದ್ಯುಮ್ನ, ಶ್ರೀಕೃಷ್ಣನಿಂದ ರುಕ್ಮಿಣಿಯಲ್ಲಿ ಜನಿಸುತ್ತಾನೆ.

## ಕೀರ್ತನೆ ೫೨

**ವ್ಯಾಧನಾಗಿ ಒಲಿದ ನೀತ (ನು ೨):** ಪಾಶುಪತಾಸ್ತ್ರವನ್ನು ಪಡೆಯಲು ತಪಸ್ವಿಯಾದ ಅರ್ಜುನನಿಗೆ ಶಿವನು ಕಿರಾತರೂಪದಿಂದ ಪ್ರತ್ಯಕ್ಷನಾಗಿ ಆತನ ಪರಾಕ್ರಮವನ್ನು ಮೆಚ್ಚಿ ಪಾಶುಪತಾಸ್ತ್ರವನ್ನಿತ್ತನು.

**ಮಧುಸೂದನ (ನು ೨):** ಕಲ್ಪಾದಿಯಲ್ಲಿ ವಿಷ್ಣುವಟಪತ್ರಶಾಯಿಯಾಗಿ ಮಲಗಿದ್ದಾಗ ಆತನ ಕಿವಿಯ ಮಲದಿಂದ ಮಧು ಮತ್ತು ಕೈಟಭರೆಂಬ ರಾಕ್ಷಸರು ಜನಿಸಿ, ನಾಭಿಕಮಲದಲ್ಲಿದ್ದ ಬ್ರಹ್ಮನನ್ನು ಪೀಡಿಸತೊಡಗುತ್ತಾರೆ. ಆಗ ಬ್ರಹ್ಮ, ವಿಷ್ಣುವಿಗೆ ಹೇಳಲಾಗಿ ವಿಷ್ಣು ಉಪಾಯದಿಂದ ಅವರನ್ನು ಕೊಲ್ಲುತ್ತಾನೆ.

**ಗಂಗೆಯ ಪೊತ್ತವ (ನು ೩):** ಸಗರನ ಅರುವತ್ತು ಸಾವಿರ ಮಂದಿ ಮಕ್ಕಳೂ ಕಪಿಲ ಮುನಿಯ ಕೋಪಾಗ್ನಿಯಿಂದ ಬೂದಿಯಾದಾಗ, ಅವರ ಮರಿಮಗನಾದ ಭಗೀರಥನು ತನ್ನ ಮುತ್ತಜ್ಜಂದಿರಿಗೆ ಸದ್ಗತಿಯನ್ನುಂಟುಮಾಡುವುದಕ್ಕಾಗಿ ಗಂಗೆಯನ್ನು ಭೂಲೋಕಕ್ಕೆ ತರುವ ಉದ್ದೇಶದಿಂದ ಗಂಗೆಯನ್ನು ಕುರಿತು ತಪಸ್ಸು ಮಾಡುತ್ತಾನೆ. ಒಲಿದ ಗಂಗೆ ತನ್ನ ವೇಗವನ್ನು ತಡೆಯುವವರಾರು ಎಂದು ಕೇಳಿದಾಗ ಭಗೀರಥ ಶಿವನನ್ನು ಮೆಚ್ಚಿಸಿ ಒಪ್ಪಿಸುತ್ತಾನೆ. ಗಂಗೆ ಶಿವನ ಮಸ್ತಕದ ಮೇಲೆ ಬಿದ್ದು ಕೆಳಕ್ಕೆ ಹರಿಯುತ್ತಾಳೆ.

**ಗಂಗೆ ಪದದಿ ಪಡೆದ (ನು ೩):** ನೋಡಿ ಕೀ ೩೩ ನು ೧ರ ಟಿಪ್ಪಣಿ

## ಕೀರ್ತನೆ ೫೩

ಒಮ್ಮೆ ಮಳೆಯಿಲ್ಲದೆ ಜನ ಕಂಗೆಟ್ಟಾಗ, ರಂಗನಾಥನನ್ನು ಪ್ರಾರ್ಥಿಸಿ ಗಿರಿಯಮ್ಮ ಮಳೆತರಿಸಿದಳೆಂದು ಪ್ರತೀತಿಯಿದೆ. ಆ ಸಂದರ್ಭದಲ್ಲಿ ಹಾಡಿದ ಕೀರ್ತನೆ ಇದೆಂದು ಹೇಳುತ್ತಾರೆ.

## ಭಾಗ – ೨

### ೧. ಉದ್ದಾಳಿಕನ ಕಥೆ

**ಜಾತಕರ್ಮ (ಉಕ, ನು ೭):** ಷೋಡಶ ಸಂಸ್ಕಾರಗಳಲ್ಲಿ ಒಂದು. ಮೊದಲ ಸಂಸ್ಕಾರ ಹೊಕ್ಕಳುಬಳ್ಳಿಯನ್ನು ಕತ್ತರಿಸಿ, ತಾಯಿ ಮಗುವನ್ನು ಬೇರ್ಪಡಿಸುವುದಕ್ಕಿಂತ ಮೊದಲೇ ಈ ಸಂಸ್ಕಾರವನ್ನೆಸಗ ಬೇಕೆಂದು ಶಾಸ್ತ್ರದಲ್ಲಿ ಹೇಳಿದೆಯಂತೆ. ಈ ಸಂಸ್ಕಾರದಿಂದ ಗರ್ಭಸ್ಥ ದೋಷ ಪರಿಹಾರವಾಗುವುದೆಂಬ ನಂಬಿಗೆ ಇದೆ. ಮಗುವಿನ ತಂದೆ ಮಗುವಿನ ಮೇಲೆ ಜೀವಶಕ್ತಿಯಾದ ಗಾಳಿಯನ್ನು ಮೂರು ಬಾರಿ ಊದಿ ದೀರ್ಘಾಯುಷ್ಯ ಪಡೆಯುವಂತೆ ಹರಸುತ್ತಾನೆ. ವಾಸ್ತವವಾಗಿ ನಾಮಕರಣದಂದೇ ಈ ಸಂಸ್ಕಾರವನ್ನೆಸಗುತ್ತಾರೆ.

**ನಾಮಕರಣ (ಉಕ,ನು ೭):** ಸಾಮಾನ್ಯವಾಗಿ ಶಿಶು ಜನಿಸಿದ ಹನ್ನೊಂದನೆಯ ದಿನ ನಾಮಕರಣ ಮಡುತ್ತಾರೆ. ಮಗುವಿನ ತಂದೆ ಮಿಂದು ಮಡಿಯುಟ್ಟು ಹೋಮ ಮಾಡಿ, ಮಗುವನ್ನು ತೊಡೆಯ ಮೇಲೆ ಕೂರಿಸಿಕೊಂಡು ತನ್ನ ಮುಂದೆ ತಟ್ಟೆಯೊಂದರಲ್ಲಿ ಹರವಿರುವ ಅಕ್ಕಿಯಲ್ಲಿ, ತೋರು ಬೆರಳಿನಿಂದ ಮಗುವಿನ ಜನ್ಮ ನಕ್ಷತ್ರ, ಜನ್ಮದಿನ ಹಾಗೂ ಹೆಸರನ್ನು ಬರೆಯುತ್ತಾನೆ. ಮಗುವಿನ ಕಿವಿಯಲ್ಲಿ ಅದರ ಹೆಸರನ್ನು ಮೂರು ಬಾರಿ ಹೇಳುತ್ತಾನೆ.

**ಅನ್ನಪ್ರಾಶನ (ಉಕ. ನು ೮):** ಮಗುವಿಗೆ ಮೊದಲಬಾರಿ ಅನ್ನತಿನ್ನಿಸುವ ಸಮಾರಂಭ ಒಳ್ಳೆಯದಿನ ಒಳ್ಳೆಯ ಮುಹೂರ್ತದಲ್ಲಿ ಮಗುವಿನ ತಂದೆ ಹೋಮ ಮಾಡಿ ಅನ್ನಕ್ಕೆ ತುಪ್ಪ, ಹಾಲು, ಜೇನು, ಮೊಸರು ಸೇರಿಸಿ ಮಗುವಿಗೆ ತಿನ್ನಿಸುತ್ತಾನೆ.

**ಚೌಲಕರ್ಮ (ಉಕ ನು ೮)**: ಮೊದಲ ಬಾರಿ ಮಗುವಿನ ಕೂದಲು ಕತ್ತರಿಸುವ ಕಾರ್ಯಕ್ರಮ. ಇದನ್ನು ಜುಟ್ಟು ಬಿಡಿಸುವುದು ಎಂದೂ ಕರೆಯುತ್ತಾರೆ.

**ಮುಂಜಿ (ಮೌಂಜಿಯ ಕಟ್ಟಿ) (ನು ೮)**: ಉಪನಯನ ಎನ್ನುವ ಈ ಸಂಸ್ಕಾರ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಈ ಮೂರು ವರ್ಗದವರಿಗೆ ಇದೆ. ಗಾಯತ್ರಿ ಮಂತ್ರೋಪದೇಶ ಮತ್ತು ಬ್ರಹ್ಮಚರ್ಯವ್ರತದೀಕ್ಷೆ ಇದರಲ್ಲಿ ಮುಖ್ಯವಾದದ್ದು. ಈ ಸಂಸ್ಕಾರದಲ್ಲಿ ವಟುವಿಗೆ ಯಜ್ಞೋಪವೀತಧಾರಣೆ ಮಾಡಲಾಗುತ್ತದೆ. ಅನಂತರ ಆತ ಬ್ರಹ್ಮಚಾರಿಯಾಗಿ ಧರ್ಮವನ್ನು ಪಾಲಿಸಬೇಕು.

**ನಾಲ್ಕು ಆಶ್ರಮ (ನು ೩೮)**: ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ

**ಮ(ಮೊ)ರದ ಬಾಗಿನ (ಉಕ ನು ೯೮)**: ಗೌರಿಪೂಜೆಯ ಸಂದರ್ಭದಲ್ಲಿ,ಮದುವೆಯಲ್ಲಿ ಮುತ್ತೈದೆಯರಿಗೆ ಮೊರದ ಬಾಗಿನ ಕೊಡುತ್ತಾರೆ. ಹೊಸ ಮೊರವೊಂದರಲ್ಲಿ ದಿನನಿತ್ಯ ಅಡಿಗೆಗೆ ಬಳಸುವ ಅಕ್ಕಿ, ಗೋಧಿ, ಬೇಳೆ, ಉಪ್ಪು ಹುಣಸೇಹಣ್ಣು ಇತ್ಯಾದಿ ಸಾಮಗ್ರಿಗಳು, ಮಂಗಳ ದ್ರವ್ಯಗಳಾದ ಅರಿಷಿಣ, ಕುಂಕುಮ, ಬಳೆ, ಬಿಚ್ಚೋಲೆಗಳನ್ನು, ತಾಂಬೂಲ, ಬೆಲ್ಲ, ರವಿಕೆಕಣ, ದಕ್ಷಿಣೆ, ಕನ್ನಡಿ, ಹಣಿಗೆಗಳನ್ನಿಟ್ಟು ಅದರ ಮೇಲೆ ಮತ್ತೊಂದು ಮೊರವನ್ನು ಮುಚ್ಚಿ ಅದನ್ನು ಮುತ್ತೈದೆಯರಿಗೆ ನೀಡುವುದೇ ಮೊರದ ಬಾಗಿನ

**ಮುನಿಸತಿಯೆನದೆ----ತಾಳಿದನು (ನು ೧೫೮)**: ಅಹಲ್ಯೆಯ ಕತೆ. ನೋಡಿ ಕೀ ೧ರ ನು ೧ರ ಟಿಪ್ಪಣಿ

**ಗುರುಸತಿಯುನದೆ---- ತಾರಾದೇವಿಯುನು (ನು ೧೫೯)**: ಚಂದ್ರನು ಬೃಹಸ್ಪತ್ಯಾಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ, ಗುರುಪತ್ನಿಯಾದ ತಾರೆಗೂ ಈತನಿಗೂ ಮೋಹ ಉಂಟಾಗಿ, ತಾರೆಯನ್ನು ಗುರುಗಳಿಲ್ಲದ ಸಮಯದಲ್ಲಿ ಅಪಹರಿಸಿಕೊಂಡು ಹೋಗುತ್ತಾನೆ. ಬೃಹಸ್ಪತಿ ಬ್ರಹ್ಮನಲ್ಲಿ ಮೊರೆಯಿಟ್ಟಾಗ, ಬ್ರಹ್ಮನು ತಾರೆಯನ್ನು ಬೃಹಸ್ಪತಿಗೆ ಒಪ್ಪಿಸುವಂತೆ ಚಂದ್ರನಿಗೆ ಹೇಳಿ ಒಪ್ಪಿಸುತ್ತಾನೆ. ಇಲ್ಲಿ ಚಂದ್ರನನ್ನು ಅಂಬುಜಮಿತ್ರ ಎಂದು ತಪ್ಪಾಗಿ ಹೇಳಲಾಗಿದೆ.

**ಜಲವಪೊಕ್ಕು-ಧಮಬೀಜವನು (ನು ೧೯೯-೨೦೩)**: ದಶಾವತಾರದ ಪ್ರಸ್ತಾಪ.

**ಕಾಲೆಯಮದೂತರ---- ವಾಕ್ಯಗಳ (ನು ೨೦೪)**: ಅಜಾಮಿಳನ ಕತೆ ನೋಡಿ ಹಾಡು ೩೫ರ ನು ೧ರ ಟಿಪ್ಪಣಿ

**ಷೋಡಶೋಪಚಾರ : (ನು ೩೩೧)**: ದೇವರು ಅಥವಾ ಅತಿಥಿಗಳಿಗೆ ಮಾಡುವ ಹದಿನಾರು ಬಗೆಯ ಉಪಚಾರ. ಆಸನ, ಸ್ವಾಗತ, ಅರ್ಘ್ಯ, ಪಾದ್ಯ, ಅಚಮನೀಯ, ಮಧುಪರ್ಕ, ಆಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ವಂದನೆ.

**ಬಿಡದಿಯ ಮನೆ (ನು ೪೦೫)**: ಗಂಡಿನ ಕಡೆಯವರನ್ನು ಇಳಿಸುವ ಮನೆ.

**ಮಧುಪರ್ಕ (ನು ೪೨೨)**: ಮದುವೆಯ ಸಂದರ್ಭದಲ್ಲಿ ವರನಿಗೆ ವಧುವಿನ ತಂದೆ ಜೇನುತುಪ್ಪ, ತುಪ್ಪ, ಮೊಸರು, ನೀರು ಮತ್ತು ಸಕ್ಕರೆ ಇವುಗಳಿಂದಾದ ಮಿಶ್ರಣವನ್ನು ತಿನ್ನಲು ಕೊಡುತ್ತಾನೆ. ಈ ಮಿಶ್ರಣವನ್ನು ಮಧುಪರ್ಕ ಎನ್ನುತ್ತಾರೆ

**ಕಂಕಣದಾರ (ನು ೪೨೮)**: ಮದುವೆಯ ಸಂದರ್ಭದಲ್ಲಿ ವಧೂವರರು ಮುಂಗೈಗೆ ಕಟ್ಟಿಕೊಳ್ಳುವ ಅರಿಸಿನದ ದಾರ

**ಅಷ್ಟಪ್ರತಿಕೆ (ನು ೪೨೯)**: ಮದುವೆ ಮುಂಜಿ ಮುಂತಾದ ಶುಭ ಸಂದರ್ಭಗಳಲ್ಲಿ ಹೇಳುವ ಆಶೀರ್ವಾದ ರೂಪವಾದ ಎಂಟು ಶ್ಲೋಕಗಳು. ಇದನ್ನು ಮಂಗಳಾಷ್ಟಕ ಎಂದೂ ಹೇಳುತ್ತಾರೆ.

**ಲಾಜಹವನ (ನು ೪೩೨)**: ವಿವಾಹದಲ್ಲಿ ಮುಖ್ಯವಾದದ್ದು ಇದನ್ನು ಲಾಜಾಹೋಮ ಎಂದೂ ಕರೆಯುತ್ತಾರೆ. ಮದುಮಕ್ಕಳು ಬತ್ತದರಳನ್ನು ಅಗ್ನಿಗೆ ಅರ್ಪಿಸಿ ಮಾಡುವ ಹೋಮ

**ಅರಿಸಿನೆಣ್ಣೆ (ನು ೪೩೪)**: ಮದುವೆಯಲ್ಲಿ ಮಾಡುವ ನಾಗವಲ್ಲಿಶಾಸ್ತ್ರದ ಒಂದು ಅಂಗ. ವಧುವರರು ಎಣ್ಣೆಯಲ್ಲಿ ಕಲೆಸಿದ ಅರಿಸಿನವನ್ನು ಕೆನ್ನೆ, ಹಸ್ತ ಮತ್ತು ಪಾದಗಳಿಗೆ ಪರಸ್ಪರ ಬಳಿಯುತ್ತಾರೆ.

**ಭೂಮ (ನು ೪೩೫)**: ಮದುವೆಯ ದಿನ ಮಾಂಗಲ್ಯಧಾರಣೆಯಾದ ಮೇಲೆ ದಂಪತಿಗಳಿಗೆ ಐದು ಕುಡಿಬಾಳೆ ಎಲೆಗಳನ್ನು ಹಾಕಿ ಅದರಲ್ಲಿ ಒಟ್ಟಿಗೇ ಭೋಜನ ಮಾಡುತ್ತಾರೆ. ಇದನ್ನು ಭೂಮದೂಟ ಎನ್ನುತ್ತಾರೆ.

**ನಾಗವೋಲೆ (ನಾಗೋಲೆ) ನು ೪೩೯)**: ಮದುವೆಯ ಮುಕ್ತಾಯದ ಹಂತದಲ್ಲಿ ನಡೆಯುವ ನಾಗವಲ್ಲಿ ಅಥವಾ ನಾಗೋಲಿ ಶಾಸ್ತ್ರ. ವಧೂವರರಿಗೆ ವಧುವಿನ ಸೋದರ ವೀಳ್ಯೆದೆಲೆಯನ್ನು ಮಡಿಸಿ ಕೊಡುತ್ತಾನೆ. ಅವರು ಅವನಿಗೆ ಉಡುಗೊರೆ ಕೊಡುತ್ತಾರೆ. ಇದೇ ಸಂದರ್ಭದಲ್ಲಿ ಉಳಿದ ಹೋಮ ನಡೆದು, ಅವಾಹನೆ ಮಾಡಿದ್ದ ದೇವರು ಪಿತೃಗಳನ್ನು ವಿಸರ್ಜಿಸಲಾಗುತ್ತದೆ.

**ಅಕ್ಕಿಯಾನೆ ಉಪ್ಪಿನಾನೆ (ನು ೪೪೦):** ಮದುವೆಯಲ್ಲಿ ನಡೆಸುವ ಒಂದು ಸಂಪ್ರದಾಯ. ಅಕ್ಕಿಯಿಂದ ಮತ್ತು ಉಪ್ಪಿನಿಂದ ಎರಡು ಆನೆಯ ಚಿತ್ರಗಳನ್ನು ರಚಿಸಿ ವಧುವರರು ಒಬ್ಬೊಬ್ಬರು ಒಂದೊಂದರ ಮೇಲೆ ಕಾಲಿಟ್ಟು ನನ್ನ ಅಕ್ಕಿ ಆನೆ ಕೊಡುತ್ತೇನೆ ನಿನ್ನ ಉಪ್ಪಿನ ಆನೆ ಕೊಡುತ್ತೀಯಾ? ಎಂದು ಮುಂತಾಗಿ ಕೇಳುತ್ತಾರೆ.

## ಸೀತಾ ಕಲ್ಯಾಣ

**ಅರಷಿನೆಣ್ಣೆ (ನು ೧):** ನೋಡಿ ಉಕ ನು ೪೩೪ರ ಟಿಪ್ಪಣಿ.

**ಮುಕ್ಕಣ್ಣನ ರಿಪುಬಲವ ಸಂಹರಿಸಿದ (ನು ೧೫):** ಶಿವನ ವರದಿಂದ ಭಸ್ಮಾಸುರನು ಯಾರ ತಲೆಯ ಮೇಲೆ ಕೈಇಟ್ಟರೂ ಅವರು ಸುಟ್ಟು ಭಸ್ಮವಾಗುತ್ತಿದ್ದರು. ಹೀಗೆ ಶಿವನಿಂದ ವರಪಡೆದ ಭಸ್ಮಾಸುರ ಅದನ್ನು ಶಿವನ ಮೇಲೆ ಪ್ರಯೋಗಿಸಿ ನೋಡಲು ಮುಂದಾಗುತ್ತಾನೆ. ಆಗ ಹರ ಹರಿಯನ್ನು ಪ್ರಾರ್ಥಿಸಲು ಹರಿ ಮೋಹಿನಿಯ ರೂಪತಾಳಿ, ಭಸ್ಮಾಸುರನ ಮನಸೆಳೆದು ಅವನು ತನ್ನ ಕೈಯನ್ನು ತನ್ನತಲೆಯ ಮೇಲೇ ಇಟ್ಟುಕೊಂಡು ಭಸ್ಮವಾಗುವಂತೆ ಮಾಡುತ್ತಾನೆ.

**ಪುರಂದರ ವರದ (ನು ೨೫):** ೧೪ ಮಂದಿ ಇಂದ್ರರಲ್ಲಿ ಏಳನೆಯವನು ಪುರಂದರ. ವಿಶ್ವಜಿತ್ತೆಂಬ ಯಾಗವನ್ನು ಮಾಡಿ ಅಗ್ನಿದೇವನ ಮೂಲಕ ರಥಾಶ್ವಗಳನ್ನು, ತನ್ನ ಪಿತಾಮಹನಾದ ಪ್ರಹ್ಲಾದನಿಂದ ದಿವ್ಯಧನಸ್ಸನ್ನೂ ಪಡೆದು ಇಂದ್ರನನ್ನು ಸೋಲಿಸಿ ಸ್ವರ್ಗರಾಜ್ಯವನ್ನು ಪಡೆದುಕೊಂಡು, ನಂತರ ನರ್ಮದಾತೀರದಲ್ಲಿ ಅಶ್ವಮೇಧ ಯಜ್ಞ ಮಾಡತೊಡಗಿದ. ಆಗ ವಿಷ್ಣು ಬ್ರಹ್ಮಾದಿಗಳ ಮೊರೆ ಕೇಳಿ ವಾಮನನಾಗಿ ಅವತರಿಸಿ, ಬಲಿಯಿಂದ ದಾನ ಬೇಡಿ ಅವನನ್ನು ಪಾತಾಳಕ್ಕೆ ಮೆಟ್ಟಿ ಪುರಂದರನ ಇಂದ್ರತ್ವವನ್ನು ಉಳಿಸುತ್ತಾನೆ.

**ದೂಷಕ(ಣ)ಹರಣ (ನು ೨೮):** ಖರ, ದೂಷಣ, ಶೂರ್ಪನಖಿಯರು ರಾವಣನ ಬಲತಾಯಿಯ ಮಕ್ಕಳು. ರಾಮ ಪಂಚವಟಿಯಲ್ಲಿ ಸೀತೆ, ಲಕ್ಷ್ಮಣರೊಂದಿಗೆ ವಾಸಿಸುತ್ತಿದ್ದಾಗ, ಶೂರ್ಪನಖಿ ರಾಮನನ್ನು ಮೋಹಿಸಿ, ಲಕ್ಷ್ಮಣನಿಂದ ಕಿವಿ ಮೂಗುಗಳನ್ನು ಕೊಯ್ಯಿಸಿಕೊಂಡು ಖರನಲ್ಲಿಗೆ ಹೋಗಿ ಮೊರೆಯಿಡುತ್ತಾಳೆ. ಆಗ ಖರ ದೂಷಣರು ಸೇನೆಯೊಂದಿಗೆ ರಾಮನನ್ನು ಇದಿರಿಸಿ ಸೇನಾಸಮೇತರಾಗಿ ಹತರಾಗುತ್ತಾರೆ.

**ತಾಟಕಪ್ರಾಣಾ ಪಹಾರ (ನು ೨೯):** ಸುಕೇತುವೆಂಬ ಯಕ್ಷನ ಮಗಳಾದ ತಾಟಕೆ, ಅಗಸ್ತ್ಯ ಮುನಿಯ ಶಾಪದಿಂದ ರಾಕ್ಷಸಿಯಾಗಿ ತನ್ನ ಮಕ್ಕಳೊಂದಿಗೆ ಋಷಿಗಳನ್ನು ಪೀಡಿಸುತ್ತಿರುತ್ತಾಳೆ. ವಿಶ್ವಾಮಿತ್ರ ಅಯೋಧ್ಯೆಯಿಂದ ರಾಮಲಕ್ಷ್ಮಣರನ್ನು ಕರೆದುಕೊಂಡು

ಸಿದ್ಧಾಶ್ರಮಕ್ಕೆ ಬರುವಾಗ ದಾರಿಯಲ್ಲಿ ತಾಟಕಿಯ ವೃತ್ತಾಂತವನ್ನು ಹೇಳಿ, ಶ್ರೀರಾಮನ ಮೂಲಕ ಅವಳನ್ನು ಕೊಲ್ಲಿಸುತ್ತಾನೆ.

**ಜಟಾಯು ಮುಕ್ತಿ ಕಾರಣ (ನು ೨೯)**: ಜಟಾಯು ಪಕ್ಷಿರಾಜ. ದಶರಥನ ಬಾಲ್ಯ ಸ್ನೇಹಿತ. ರಾವಣ ಸೀತೆಯನ್ನು ಅಪಹರಿಸಿಕೊಂಡು ಹೋಗುವಾಗ ಸೀತೆಯ ಆಕ್ರಂದನವನ್ನು ಕೇಳಿದ ಜಟಾಯು ರಾವಣನನ್ನು ಎದುರಿಸಿ ಹೋರಾಡುತ್ತಾನೆ. ರಾವಣ ಅವನ ರೆಕ್ಕೆಗಳನ್ನು ಕತ್ತರಿಸಿದ್ದರಿಂದ ಕೆಳಗೆ ಬಿದ್ದ ಜಟಾಯು ಸೀತೆಯನ್ನು ಹುಡುಕುತ್ತ ಬಂದ ರಾಮನಿಗೆ ವಿಷಯ ತಿಳಿಸಿ ಪ್ರಾಣ ಬಿಡುತ್ತಾನೆ. ಆಗ ರಾಮ ಜಟಾಯುವಿಗೆ ಅಗ್ನಿಸಂಸ್ಕಾರ ಮಾಡಿ ಆತನ ಮುಕ್ತಿಗೆ ಕಾರಣನಾಗುತ್ತಾನೆ.

**ಮಾರೀಚ ಮರ್ದನ (ನು ೩೦)**: ತಾಟಕಿಯ ಮಗ ಮಾರೀಚ. ರಾವಣ ಈತನಲ್ಲಿಗೆ ಹೋಗಿ ಸೀತೆಯನ್ನು ಅಪಹರಿಸಲು ತನಗೆ ಸಹಾಯ ಮಾಡಬೇಕೆಂದು ಕೇಳಿಕೊಂಡಾಗ, ಈತ ಮಾಯಾ ಮೃಗದ ರೂಪಧರಿಸಿ, ಸೀತೆಯನ್ನು ಮರುಳು ಮಾಡುತ್ತಾನೆ. ಬಳಿಕ ರಾಮನಿಂದ ಹತನಾಗುತ್ತಾನೆ.

**ತಮನೆಂಬ ದೈತ್ಯನ ಗೆಲಿದ (ನು ೪೫)**: ಕಶ್ಯಪಮುನಿಯಿಂದ ದನುವೆಂಬ ಹೆಂಡತಿಯಲ್ಲಿ ಜನಿಸಿದವ ಅಂಧಕ. ಮಹಿಷಾಸುರನ ಸೇನೆಯಲ್ಲಿದ್ದ. ಶಿವನೊಂದಿಗೆ ಒಮ್ಮೆ ಯುದ್ಧ ಮಾಡುತ್ತಿದ್ದಾಗ ಇವನ ಒಂದೊಂದು ಹನಿ ರಕ್ತವೂ ಒಬ್ಬೊಬ್ಬ ರಾಕ್ಷಸನಾಗುತ್ತಿರಲು, ಇದನ್ನು ಕಂಡ ವಿಷ್ಣು ಶುಷ್ಕರೇವತಿಯೆಂಬ ರಕ್ಕಸಿಯನ್ನು ಸೃಷ್ಟಿಮಾಡಿದ. ಅವಳು ಇವನ ರಕ್ತವನ್ನು ಶೋಷಿಸಿ ನಿರ್ವೀರ್ಯನಾಗುವಂತೆ ಮಾಡಿದಳು.

**ಮತ್ಸ್ಯರೂಪದ ಮುಖ----ಮೂಲೋಕದೊಡೆಯ (ನು ೪೫ ರಿಂದ ೫೪)**

**ದಶಾವತಾರ ಸ್ತುತಿ**

**ಕಲ್ಲೊಳು ಕಾಂತೆಯ ಮಾಡಿದ (ನು ೫೭)**: ನೋಡಿ ಕೀ ೯ರ ನುಡಿ ೧ರ ಟಿಪ್ಪಣಿ

**ಹಾವಿನ ಹೆಡೆಯಲಾಡುವ ಚರಣ (ನು ೫೪)**: ನೋಡಿ ಕೀ ೨೨ರ ನುಡಿ ೨ರ ಟಿಪ್ಪಣಿ.

**ಶಕಟನ ಮರ್ದಿಸಿದ (ನು ೫೯)**: ಕಂಸ ಕೃಷ್ಣನನ್ನು ಕೊಲ್ಲಲೆಂದು ಕಳುಹಿಸಿದ ಶಕಟಾಸುರ ಬಂಡಿಯ ರೂಪದಿಂದ ಬರಲು, ಮಗುವಾಗಿದ್ದ ಕೃಷ್ಣ ಅವನನ್ನು ಒದೆಯುತ್ತಾನೆ. ಬಂಡಿ ಪುಡಿಪುಡಿಯಾಗಿ ಶಕಟಾಸುರ ಸಾಯುತ್ತಾನೆ.

**ಉರಟಣೆ (ನು ೮೭):** ಮದುವೆ ಸಮಾರಂಭದಲ್ಲಿ ಹಸೆಯ ಮೇಲೆ ವಧೂವರರು ಪರಸ್ಪರ ಅರಿಸಿನ, ಕುಂಕುಮ, ಗಂಧಗಳನ್ನು ಅನುಲೇಪನ ಮಾಡುವ; ತಾಂಬೂಲ ನೀಡುವ ಪದ್ಧತಿ.

## ಚಂದ್ರಹಾಸನಕಥೆ

**ವ್ಯಾಸ (ಸಂಧಿ ೧, ನು ೧೭):** ಇದೊಂದು ಪದವಿ. ಕ್ರಮವಾಗಿ ಒಂದೊಂದು ಕಲ್ಪದಲ್ಲಿ ಒಬ್ಬೊಬ್ಬ ವ್ಯಾಸನಾಗಿ ಪ್ರತಿಯೊಂದು ದ್ವಾಪರಯುಗದಲ್ಲಿಯೂ ಅವತರಿಸುತ್ತಾನೆ. ಈಗ ವ್ಯಾಸಪಟ್ಟದಲ್ಲಿರುವ ಕೃಷ್ಣದ್ವೈಪಾಯನ ವೇದವನ್ನು ವಿಭಾಗಿಸಿ, ಶಿಷ್ಯರ ಮೂಲಕ ಲೋಕದಲ್ಲಿ ಪ್ರಚಾರಕ್ಕೆ ತಂದ. ಮಹಾಭಾರತವನ್ನು ಬರೆದವನು ಈತ.

ಅಂಬರೀಷ (ಸಂಧಿ ೧ ನು ೧೭)
ನೋಡಿ ಕೀ ೨೨ ನು ೨ರ ಟಿಪ್ಪಣಿ
ವಿಭೀಷಣ (ಸಂಧಿ ೧, ನು ೧೭)
ನೋಡಿ ಕೀ ೪೪ರ ನು ೧ರ ಟಿಪ್ಪಣಿ
ಅಕ್ರೂರ (ಸಂಧಿ ೧ ನು ೧೭)
ನೋಡಿ ಕೀ ೨೨ರ ನು ೨ರ ಟಿಪ್ಪಣಿ
ಪರಾಶರ (ಸಂಧಿ ೧ ನು ೧೭)
ವಸಿಷ್ಠ ಪುತ್ರನಾದ ಶಕ್ತಿ ಮಹರ್ಷಿ ಹಾಗೂ ಅದೃಶ್ಯಂತಿಯರ ಪುತ್ರ. ಈತ ಬೆಸ್ತ ಕನ್ಯೆ ಮತ್ಸ್ಯಗಂಧಿಯನ್ನು ಮೋಹಿಸಿ ಕೂಡಿದ್ದರ ಫಲವಾಗಿ ವ್ಯಾಸ ಹುಟ್ಟುತ್ತಾನೆ.

ಧ್ರುವ (ಸಂಧಿ ೧ ನು ೧೭)
ನೋಡಿ ಕೀ ೪೭ರ ನು ೩ರ ಟಿಪ್ಪಣಿ
ಪ್ರಹ್ಲಾದ (ಸಂಧಿ ೧ ನು ೧೭)
ನರಸಿಂಹ ಅವತಾರದ ಕತೆ ನೋಡಿ ಕೀ ೧ರ ಟಿಪ್ಪಣಿ
ಅಜಾಮಿಳ (ಸಂಧಿ ೨ ನು ೪೭)
ನೋಡಿ ಕೀ ೫೫ರ ನು ೧ರ ಟಿಪ್ಪಣಿ
ಮುಂಜಿ (ಸಂಧಿ ೨ ನು ೮)
ನೋಡಿ ಉದ್ದಾಳಿಕನ ಕಥೆ ನು ೮ರ ಟಿಪ್ಪಣಿ

# ಬ್ರಹ್ಮ ಕೊರವಂಜಿ

**ಕುರುಪತಿಯ ಗರ್ವವನು ಪರಿಹರಿಸುವ ಪಾದ (ನು ೧):** ಸಂಧಿ ಏರ್ಪಡಿಸುವುದಕ್ಕಾಗಿ ಕೃಷ್ಣ ದುರ್ಯೋಧನನ ಆಸ್ಥಾನಕ್ಕೆ ಬಂದಾಗ ಗರ್ವದಿಂದ ಕೃಷ್ಣನಿಗೆ ವಂದಿಸದೆ ಸಿಂಹಾಸನದಲ್ಲಿ ಕುಳಿತಿದ್ದ ಕೌರವ ತನ್ನ ಪಾದದ ಮೇಲೆ ಬೀಳುವಂತೆ ಕೃಷ್ಣ ಮಾಡುತ್ತಾನೆ

**ದೇವಕಿ (ನು ೬):** ಕಂಸನ ತಂದೆ ಉಗ್ರಸೇನನ ಒಡಹುಟ್ಟಿದವನಾದ ದೇವಕನ ಮಗಳು. ವಸುದೇವನ ಹೆಂಡತಿ. ಇವಳ ಗರ್ಭದಲ್ಲಿ ಜನಿಸುವ ಎಂಟನೇ ಶಿಶುವಿನಿಂದ ತನಗೆ ಮರಣವೆಂದು ತಿಳಿದ ಕಂಸ ದೇವಕಿ ವಸುದೇವರನ್ನು ಸೆರೆಯಲ್ಲಿಟ್ಟ. ಕೃಷ್ಣ ಈಕೆಯ ಗರ್ಭದಲ್ಲಿ ಜನಿಸಿದ.

**ಕೊಬ್ಬಿದ ಕಂಸನ ಹಮ್ಮು ಮುರಿದು (ನು ೨೦):** ಭಾಗವತ ದಶಮಸ್ಕಂಧದಲ್ಲಿ ಬ್ರಹ್ಮ, ಶಿವ ಮೊದಲಾದ ದೇವತೆಗಳೆಲ್ಲಾ ಸೆರೆಮನೆಗೆ ಬಂದು ದೇವಕಿಗೆ ಅಭಯ ಕೊಡುವ ವಿಚಾರ ಬರುತ್ತದೆ. ಆದರೆ ಇಲ್ಲಿ ಬ್ರಹ್ಮನೊಬ್ಬನೇ ಕೊರವಂಜಿಯ ವೇಷದಲ್ಲಿ ಬಂದು ದೇವಕಿಗೆ ಮಗ ಹುಟ್ಟಿ ಕಂಸನ ಹಮ್ಮು ಮುರಿಯುವ ಭವಿಷ್ಯ ತಿಳಿಸುತ್ತಾನೆ.

**ವಸುದೇವರು ಗೋಕುಲಕೆ ಒಯ್ಯಲು (ನು ೩೦ರ ಅನಂತರದ ವಚನ) :** ಕೃಷ್ಣಜನಿಸಿದಾಗ ವಸುದೇವ ಆ ಮಗುವನ್ನು ಗೋಕುಲಕ್ಕೆ ತೆಗೆದುಕೊಂಡು ಹೋಗಿ ಯಶೋದೆಯ ಬಳಿ ಮಲಗಿಸಿ, ಆಕೆ ಹೆತ್ತಿದ್ದ ಹೆಣ್ಣು ಮಗುವನ್ನು ತಂದು ದೇವಕಿಗೆ ಕೊಡುತ್ತಾನೆ.

**ದುರ್ಗೆ (ನು ೩೧):** ಹರಿಯ ಪ್ರೇರಣೆಯಿಂದ ದುರ್ಗೆಯು ನಂದಯಶೋದೆಯರ ಮಗಳಾಗಿ ಹುಟ್ಟುತ್ತಾಳೆ. ವಸುದೇವ ಕೃಷ್ಣನನ್ನು ಯಶೋದೆಯ ಬಳಿ ಬಿಟ್ಟು ದುರ್ಗೆಯನ್ನು ಕಾರಾಗೃಹಕ್ಕೆ ತರುತ್ತಾನೆ. ಮಗು ಹುಟ್ಟಿದ ಸುದ್ದಿಕೇಳಿ ಬಂದ ಕಂಸ ಆ ಹೆಣ್ಣು ಶಿಶುವನ್ನು ಕೊಲಲೆತ್ನಿಸಿದಾಗ ಮಾಯೆ ಆಕಾಶಕ್ಕೆ ಹಾರಿ, ಕಂಸನ ವೈರಿ ಬೇರೆಡೆ ಬೆಳೆಯುತ್ತಿದ್ದಾನೆಂದು ಹೇಳಿ ಅಲ್ಲಿಂದ ಮಾಯವಾಗುತ್ತಾಳೆ.

**ಪೂತನೆ (ನು ೩೫):** ಕಂಸನ ಪರಿವಾರದ ಒಬ್ಬ ರಾಕ್ಷಸಿ. ಕಂಸನ ಆಜ್ಞೆಯಂತೆ ಸುಂದರ ಸ್ತ್ರೀವೇಷ ಧರಿಸಿ ಬಂದು ಕೃಷ್ಣನಿಗೆ ವಿಷದ ಮೊಲೆಹಾಲು ಉಣಿಸುವ ನೆಪದಲ್ಲಿ ಕೊಲ್ಲಲೆತ್ನಿಸಿದಾಗ, ಕೃಷ್ಣ ಆಕೆಯ ಪ್ರಾಣವನ್ನೆ ಹೀರುತ್ತಾನೆ.

**ಶಕಟ (ನು ೩೫):** ನೋಡಿ ಸೀತಾಕಲ್ಯಾಣದ ನು ೫೯ರ ಟಿಪ್ಪಣಿ

**ವತ್ಸನೆಂಬಸುರ (ನು ೩೬):** ಒಮ್ಮೆ ಕೃಷ್ಣ ಮತ್ತು ಬಲರಾಮ ತಮ್ಮ ಸಂಗಡಿಗರೊಂದಿಗೆ

ಯಮುನಾತೀರದಲ್ಲಿ ದನಕಾಯುತ್ತಿದ್ದಾಗ ದೈತ್ಯನೊಬ್ಬ ಇವರನ್ನು ಕೊಲ್ಲುವುದಕ್ಕಾಗಿ ಕರುವಿನ ಆಕಾರ ತಾಳಿ ಅಲ್ಲಿದ್ದ ಕರುಗಳ ಹಿಂಡನ್ನು ಸೇರುತ್ತಾನೆ. ಕೃಷ್ಣ ಅವನನ್ನು ಗುರುತಿಸಿ ಕೊಲ್ಲುತ್ತಾನೆ. ಅವನೇ ವತ್ಸಾಸುರ

**ಬ್ರಹ್ಮಾಂಡವ ಕುಕ್ಷಿಯೊಳಗೆ ತೋರುವ (ನು ೩೬)**:ಒಮ್ಮೆ ಬಲರಾಮ ಮತ್ತು ಗೋಪಾಲಕರು ಕೃಷ್ಣ ಮಣ್ಣು ತಿಂದನೆಂದು ಯಶೋದೆಯಲ್ಲಿ ದೂರುತ್ತಾರೆ. ಯಶೋದೆ ಕೇಳಿದಾಗ ಅವರೆಲ್ಲಾ ಸುಳ್ಳು ಹೇಳುತ್ತಿದ್ದಾರೆ, ಬೇಕಿದ್ದರೆ ನೀನೆ ನೋಡು ಎಂದು ಬಾಯಿ ತೆರೆದು ತೋರಿಸಿದಾಗ ಯಶೋದೆಗೆ ಅಲ್ಲಿ ಸಮಸ್ತ ಬ್ರಹ್ಮಾಂಡವೇ ಕಾಣುತ್ತದೆ.

**ಕಿಚ್ಚ ನುಂಗುವ ದೈತ್ಯ ಕುಠಾರಿ (ನು ೩೬ರ ನಂತರದ ವಚನ ಭಾಗ)** : ಒಂದು ಸಲ ಕಾಡಿನಲ್ಲಿ ಗೋಪಾಲಕರು ಗೋವುಗಳನ್ನು ಮೇಯಿಸುತ್ತಿದ್ದಾಗ ಕಾಡ್ಗಿಚ್ಚು ಎಲ್ಲ ದಿಕ್ಕಿನಿಂದಲೂ ಆವರಿಸುತ್ತದೆ. ಆಗ ಅವರೆಲ್ಲಾ ಕೃಷ್ಣನಿಗೆ ಮೊರೆ ಹೋಗುತ್ತಾರೆ ಕೃಷ್ಣ. ಯೋಗಶಕ್ತಿಯಿಂದ ಕಾಡ್ಗಿಚ್ಚನ್ನು ನುಂಗಿ ಎಲ್ಲರನ್ನೂ ರಕ್ಷಿಸುತ್ತಾನೆ.

**ಮುಕ್ತಿಕೊಟ್ಟು ಯಮಳಾರ್ಜುನರಿಗೆ (ನು ೩೭)**: ಕುಬೇರನ ಮಕ್ಕಳಾದ ನಳಕೂಬರ ಮತ್ತು ಮಣಿಗ್ರೀವರು ಅಹಂಕಾರದಿಂದ ನಾರದರ ಶಾಪಕ್ಕೆ ಗುರಿಯಾಗಿ, ಗೋಕುಲದಲ್ಲಿ ಅವಳಿ ಮತ್ತಿ ಮರಗಳಾಗಿ ಹುಟ್ಟಿದರು. ಕೃಷ್ಣನ ತುಂಟಾಟ ತಡೆಯಲಾರದೆ ಯಶೋದೆ ಒಮ್ಮೆ ಅವನನ್ನು ಒರಳಿಗೆ ಕಟ್ಟಿಹಾಕಿದಳು. ಕೃಷ್ಣ ಒರಳಿನ ಸಮೇತ ಆ ಅವಳಿ ಮರಗಳ ಮಧ್ಯೆ ನುಸುಳಿದ.ಆಗ ಆ ಮರಗಳು ಕಡಿದು ಬಿದ್ದು ಕುಬೇರನ ಮಕ್ಕಳಿಗೆ ಶಾಪವಿಮೋಚನೆಯಾಯಿತು.

**ಗೋವರ್ಧನಗಿರಿಯ ಕಿರಿಬೆಟ್ಟಲಿ ನೆಗಹುವನು (ನು ೩೭)**: ಕೃಷ್ಣನ ಮಾತಿನಂತೆ ಯಾದವರೆಲ್ಲ ದೇವೇಂದ್ರನಿಗೆ ಪೂಜೆ ಸಲ್ಲಿಸುವ ಬದಲು ಗೋವರ್ಧನ ಪರ್ವತಕ್ಕೂ ಗೋಬ್ರಾಹ್ಮಣರಿಗೂ ಪೂಜೆ ಸಲ್ಲಿಸಲು, ಕೋಪಗೊಂಡ ದೇವೇಂದ್ರ ಸಿಡಿಲು ಗುಡುಗುಗಳಿಂದ ಕೂಡಿದ ಭಯಂಕರ ಮಳೆಯನ್ನು ಸುರಿಸಿದನು. ಆಗ ಕೃಷ್ಣ ಗೋವರ್ಧನ ಗಿರಿಯನ್ನೇ ಎತ್ತಿ ಕೊಡೆಯಂತೆ ಹಿಡಿದು ಎಲ್ಲರನ್ನು ರಕ್ಷಿಸಿದ.

**ಮಡದಿಯರ ವಸ್ತ್ರಗಳ ಸೆಳೆದುಕೊಂಡು (ನು ೩೮)**: ಭಾಗವತದಲ್ಲಿ ಬರುವ ಗೋಪಿಯರ ಜಲಕ್ರೀಡೆಯ ಸಂದರ್ಭದಲ್ಲಿ ಕೃಷ್ಣ ಅವರ ಸೀರೆಗಳನ್ನು ಕದ್ದು ಕಡಹಾಲದ ಮರವನ್ನೇರುತ್ತಾನೆ. ಅವರೆಲ್ಲಾ ಭಕ್ತಿಯಿಂದ ಪ್ರಾರ್ಥಿಸಿದಾಗ ವಸ್ತ್ರಗಳನ್ನು ಹಿಂದಕ್ಕೆ ನೀಡುತ್ತಾನೆ.

**ಕಾಳಿಂಗನ ಹೆಡೆಯ ತುಳಿದು (ನು ೩೮)**:ನೋಡಿ ಕೀ ೨೨ರ ನು ೨ರ ಟಿಪ್ಪಣಿ

**ತನ್ನ ನಿಜವ ಅಕ್ರೂರಂಗೆ ---- ತೋರುವ (ನು ೪೭)**: ಕಂಸನ ಅಷ್ಟಮಂತ್ರಿಗಳಲ್ಲಿ ಒಬ್ಬನಾದ ಅಕ್ರೂರ ಕಂಸನ ಆಜ್ಞೆಯಂತೆ ಕೃಷ್ಣಬಲರಾಮರನ್ನು ಮಧುರೆಗೆ ಕರೆತರುವಾಗ, ಯಮುನಾನದಿಯಲ್ಲಿ ಸ್ನಾನ ಮಾಡುತ್ತಿದ್ದ ಅಕ್ರೂರನಿಗೆ ಕೃಷ್ಣ ತನ್ನ ದಿವ್ಯರೂಪವನ್ನು ತೋರಿದನು.

**ರಜಕನ ಕೊಂದು (ನು ೪೮)**: ಮಧುರೆಗೆ ಬಂದ ಬಲರಾಮ ಕೃಷ್ಣರು ಪಟ್ಟಣದ ಬೀದಿಯಲ್ಲಿ ಬರುತ್ತಿರುವಾಗ ಕಂಸನ ಅಗಸ ಎದುರಿಗೆ ಬರುತ್ತಾನೆ. ಕೃಷ್ಣನು ತಮ್ಮಿಬ್ಬರಿಗೂ ಒಳ್ಳೆಯ ವಸ್ತ್ರಗಳನ್ನು ಕೊಡು ಎಂದು ಅವನನ್ನು ಕೇಳುತ್ತಾನೆ. ಅಗಸ ನಿರಾಕರಿಸಿದ್ದಲ್ಲದೆ, ಅಹಂಕಾರದಿಂದ ಮಾತನಾಡಿದಾಗ ಕೃಷ್ಣ ಅವನನ್ನು ಅಲ್ಲಿಯೇ ಹೊಡೆದು ಕೊಲ್ಲುತ್ತಾನೆ.

**ಮಾಲೆಗಾರಗೊಲಿವ (ನು ೪೮)**: ಮಧುರೆಯಲ್ಲಿ ರಜಕನನ್ನು ಕೊಂದ ಮೇಲೆ ಹೂವಾಡಿಗನಾದ ಸುಧಾಮನೆಂಬುವನ ಮನೆಗೆ ಹೋಗುತ್ತಾರೆ. ಆತನು ಅವರಿಬ್ಬರನ್ನೂ ಸತ್ಕರಿಸಿ, ಪರಿಮಳಭರಿತ ಹೂಮಾಲೆಗಳನ್ನು ಅರ್ಪಿಸುತ್ತಾನೆ. ಸಂತುಷ್ಟನಾದ ಕೃಷ್ಣ ಅವನಿಗೆ ಅನೇಕ ವರಗಳನ್ನು ಕೊಡುತ್ತಾನೆ.

**ಕುಬ್ಜೆಯ ಊನವತಿದ್ದಿ (ನು ೪೯)**: ನೋಡಿ ಕೀ ೯ರ ನುಡಿ ೨ರ ಟಿಪ್ಪಣಿ

**ಚಾಣೂರ ಮಲ್ಲ (ನು ೪೯)**: ಕಂಸನ ಆಸ್ಥಾನದ ಜಟ್ಟಿಗಳಲ್ಲಿ ಚಾಣೂರ ಒಬ್ಬ. ಬಲರಾಮ ಕೃಷ್ಣರು ಬಿಲ್ಲಹಬ್ಬಕ್ಕಾಗಿ ಕಂಸನ ಅಪ್ಪಣೆಯಂತೆ ಮಧುರೆಗೆ ಹೋಗಿದ್ದಾಗ, ಜಟ್ಟಿಗಳಾದ ಚಾಣೂರ ಹಾಗೂ ಮುಷ್ಟಕರು ಕಂಸನ ಪ್ರೇರಣೆಯಿಂದ ಬಲರಾಮಕೃಷ್ಣರನ್ನು ಕೊಲ್ಲಹೋಗಿ ಮುಷ್ಟಿಯುದ್ಧದಲ್ಲಿ ಹತರಾಗುತ್ತಾರೆ.

**ಮದ್ದಾನೆಯ ಕೊಂದು (ನು ೪೯)**: ಕಂಸನ ಬಳಿಯಿದ್ದ ಕುವಲಯಾಪೀಡವೆಂಬ ಆನೆ, ಸಾವಿರ ಆನೆಗಳ ಬಲವುಳ್ಳದ್ದಾಗಿತ್ತು. ಬಲರಾಮಕೃಷ್ಣರನ್ನು ಹೇಗಾದರೂ ಕೊಲ್ಲಿಸಬೇಕೆಂದು ಕಂಸ ಅವರನ್ನು ಮಧುರೆಗೆ ಕರೆಸಿಕೊಂಡು, ಆನೆಯನ್ನು ಹೆಬ್ಬಾಗಿಲಲ್ಲಿ ನಿಲ್ಲಿಸುತ್ತಾನೆ. ಬಲರಾಮಕೃಷ್ಣರ ಮೇಲೆ ಆ ಆನೆಯನ್ನು ಬಿಡಬೇಕೆಂದಿರುವಷ್ಟರಲ್ಲಿ ಕೃಷ್ಣನೇ ಆ ಆನೆಯನ್ನು ಕೊಲ್ಲುತ್ತಾನೆ.

**ಬಿಲ್ಲಮುರಿವ (ನು ೫೦)**: ಮಧುರೆಗೆ ಬಂದ ಕೃಷ್ಣ ಧನುರ್ಯಾಗದ ಬಿಲ್ಲನ್ನಿಟ್ಟಿದ್ದ ಸ್ಥಳಕ್ಕೆ ಹೋಗಿ, ಕಾವಲುಗಾರರನ್ನು ಅಲಕ್ಷಿಸಿ ಆ ಮಹಾಧನುಸ್ಸನ್ನು ಎಡಗೈಯಿಂದಲೇ ಎತ್ತಿ ಮುರಿದು ಹಾಕುತ್ತಾನೆ. ಕುಪಿತರಾದ ಕಾವಲುಗಾರರನ್ನು ಕೊಲ್ಲುತ್ತಾನೆ.

# ಲವಕುಶರ ಕಾಳಗ

ನು ೪೮–೫೨ರ ವರೆಗೆ ದಶಾವತಾರ ವರ್ಣನೆ

ನೋಡಿ ಕೀ ೧ರ ಟಿಪ್ಪಣಿ

**ಶ್ರೀಮಂತ > ಸೀಮಂತ (ನು ೧೨೨):** ಚೊಚ್ಚಲ ಗರ್ಭಿಣಿಯರಿಗೆ ಮಾಡುವ ಒಂದು ಸಂಸ್ಕಾರ. ಹೂಮುಡಿಸುವುದು ಎಂದು ಇದನ್ನು ಕರೆಯುತ್ತಾರೆ.

**ಜಾತಕರ್ಮ (ನು ೧೪೯):** ನೋಡಿ ಉದ್ದಾಳಿಕನ ಕಥೆ ನುಡಿ ೭ ಟಿಪ್ಪಣಿ

**ಕುಯಿಲು (ನು ೧೫೨):** ಮಗು ಹುಟ್ಟಿದ ಹನ್ನೊಂದನೆಯ ದಿನ 'ಕುಯಿಲು ಹೋಗುವ ಶಾಸ್ತ್ರ' ನಡೆಯುತ್ತದೆ. ಹೆತ್ತದಿನದಿಂದ ಹತ್ತುದಿನದವರೆಗೆ ಬಾಣಂತಿ ಮೈಲಿಗೆಯವಳೆನಿಸುತ್ತಾಳೆ. ಹನ್ನೊಂದನೆಯ ದಿನ ಮಗು, ಬಾಣಂತಿಗೆ ಸ್ನಾನಮಾಡಿಸಿ ಶುದ್ಧೀಕರಿಸುತ್ತಾರೆ. ಇದಕ್ಕಾಗಿ ಮನೆಯ ಹಿತ್ತಲಿನಲ್ಲಿ ಒಂದು ಗುಂಡಿಯನ್ನು ತೆಗೆದು ಅದರಲ್ಲಿ ಬೇವಿನ ಸೊಪ್ಪು ಹಾಕುತ್ತಾರೆ. ಇದೇ ಕುಯಿಲು ಗುಂಡಿ. ಇದರ ಮೇಲೆ ಮಣೆಹಾಕಿ, ಬಾಣಂತಿಯನ್ನು ಕೂಡಿಸಿ ಸ್ನಾನ ಮಾಡಿಸುತ್ತಾರೆ. ಇದೇ ಕುಯಿಲು ಹೋಗುವ ಶಾಸ್ತ್ರ.

**ಈರ್ಲ್ಲ (ನು ೧೫೨):** ಮುಟ್ಟು ಮೈಲಿಗೆಯಿಂದ ಮಕ್ಕಳಿಗೆ ಬರುವ ಶೀತ ಭೇದಿ

**ಪುಣ್ಯಾವರ್ಚನೆ (ನು ೧೫೮):** ಮೂಲ ರೂಪ 'ಪುಣ್ಯಾಹವಾಚನ' ಮಂತ್ರೋದಕದಿಂದ ಶುದ್ಧೀಕರಿಸುವ ಕಾರ್ಯ. ತಂಬಿಗೆಯಲ್ಲಿ ನೀರನ್ನಿರಿಸಿ ಅದಕ್ಕೆ ಸ್ವಲ್ಪ ಅರಸಿನ ಬೆರಸುತ್ತಾರೆ. ಕಲಶದ ಬಾಯಿಗೆ ಮಾವಿನೆಲೆ ಸಿಕ್ಕಿಸುತ್ತಾರೆ. ವೇದಮಂತ್ರ ಪಠಿಸಿ ಕಲಶದ ನೀರನ್ನು ಪವಿತ್ರಗೊಳಿಸಿ, ಮನೆಗೆ, ಮನೆಮಂದಿಗೆ ಪ್ರೋಕ್ಷಿಸುವುದರ ಮೂಲಕ ಅವರನ್ನು ಶುದ್ಧಿಗೊಳಿಸುತ್ತಾರೆ.

**ಮುಂಜಿ (ನು ೧೬೬)**ನೋಡಿ ಉದ್ದಾಳಿಕನ ಕಥೆ ನು ೮ರ ಟಿಪ್ಪಣಿ

**ಹೋಮ (ನು ೧೭೮):** ದೇವತೆಗಳ ಪ್ರೀತ್ಯರ್ಥವಾಗಿ ತುಪ್ಪ, ಸಮಿತ್ತು ಅನ್ನ ಮುಂತಾದುವನ್ನು ಅಗ್ನಿಯ ಮೂಲಕ ವಿದ್ಯುಕ್ತವಾಗಿ ದೇವತೆಗಳಿಗೆ ಅರ್ಪಿಸುವ ಕ್ರಿಯೆ

# ಅನುಬಂಧ – ೩

## ಅಂಕಿತನಾಮ

ಅಂಗಜನಯ್ಯ
ಅಂಜನಾದೇವಿ
ಅಂಜನಿ
ಅಂಬರೀಷ
ಅರ್ಕ
ಅರ್ಜುನ
ಅಕ್ರೂರ
ಅಗಸ್ತ್ಯ
ಅಚ್ಯುತ
ಅಜ
ಅಜಭೂಪ
ಅಜಮಿಳ
ಅತ್ರಿ
ಅನಂತ
ಅನಂದ್ಯತಿ>ಅರುಂಧತಿ
ಅನಸೂಯ
ಅಯೋಧ್ಯ
ಅಹಲ್ಯಾ
ಆಂಗೀರಸ
ಇಂದುಧರ
ಇಂದ್ರ
ಇಂದ್ರಲೋಕ
ಉಗ್ರಸೇನ
ಉತ್ತಾನಪಾದ
ಉದ್ದಾಳಿಕ
ಉಮ್ಮಿ > ಉಮಾ
ಏಕನಾಥೆ
ಕಂದರ್ಪ
ಕಂಸ
ಕದ್ರಿ
ಕರ್ನಾಟಕದೇಶ
ಕರಿಮುಖ
ಕಲ್ಕಿ
ಕಶ್ಯಪ
ಕಳಿಂಗ
ಕಾಡುಗಲ್ಲು
ಕಾತ್ಯಾಯಿನಿ
ಕಾಮ
ಕಾಳಿಂಗ
ಕಾಳಿ
ಕಾಳಿಕದೇವಿ
ಕಾಶ್ಮೀರ
ಕುಂತಳಪುರ
ಕುಂತಿ

| | |
|---|---|
| ಕುಬ್ಜೆ | ಗೋವಿಂದ |
| ಕುಶ | ಗೌತಮ |
| ಕೂರ್ಮ | ಗೌರಿ |
| ಕೃಷ್ಣಯ್ಯ | ಚಂಡಿ |
| ಕೃಷ್ಣವೇಣಿ | ಚಂದನಾವತಿ |
| ಕೇರಳದೇಶ | ಚಂದ್ರಹಾಸ |
| ಕೈಕೆ | ಚಂದ್ರಾವತಿ |
| ಕೈಲಾಸ | ಚಂಪಕಮಾಲಿನಿ |
| ಕೊಂಕಣದೇಶ | ಚಾಣೂರ |
| ಕೊಕ್ಕನೂರು | ಚಾಮುಂಡಿ |
| ಕೌಶಿಕ | ಜಟಾಯು |
| ಕೌಸಲ್ಯದೇವಿ | ಜನಕ |
| ಕೌಸಲ್ಯದೇಶ | ಜಾಂಬವಂತ |
| ಗಂಗಾ | ಜಾನಕಿ |
| ಗಣಪ | ಜಾಲಿಹಾಳ |
| ಗಣೇಶ | ತಮ |
| ಗಯ | ತಾರಾದೇವಿ |
| ಗರುಡ | ತಾಟಕಾ |
| ಗಾಯಿತ್ರಿ | ತಿಮ್ಮಪ್ಪ |
| ಗಾಲ್ವ | ತಿರುಪತಿ |
| ಗಿರಿಜಾ | ತಿಲುಗದೇಶ |
| ಗಿರಿಧರ | ತ್ರಿವಿಕ್ರಮ |
| ಗೀರ್ವಾಣಿ | ತುಲಸಿ |
| ಗುಜ್ಜರದೇಶ | ತುಳುವ |
| ಗೋಕರ್ಣ | ದಶರಥ |
| ಗೋಕುಲ | ದಾಗಿನಕಟ್ಟೆ |
| ಗೋಪಾಲ | ದಿನಕರ |
| ಗೋಪಿ | ದುರ್ಗೆ |
| ಗೋವರ್ಧನ | ದುಶ್ಶಾಸನ |

ದುಷ್ಟಬುದ್ಧಿ
ದೂಷಣ
ದೇವಕಿ
ದ್ವಾರಾವತಿ
ದ್ರೌಪದಿ
ಧ್ರುವ
ಧೂರ್ಜಟಿ
ನಂದ
ನಂದಗೋಪ
ನರಸಿಂಹದೇವ
ನರಹರಿ
ನಲ್ಲಾವತಿ
ನಾರದ
ನಾರಸಿಂಹ
ನಾರಾಯಣ
ನಾಶಿಕೇತು
ನೀಲಗಿರಿ
ಪದುಮನಾಭ
ಪದ್ಮಾಕ್ಷ
ಪರಶುರಾಮ
ಪರಾಶರ
ಪಾಂಡವ
ಪಾರ್ಥ
ಪಿಳ್ಳಂಗಿರಿ
ಪುರಂದರ
ಪೂತನಿ
ಪ್ರಹ್ಲಾದ
ಫಲಗುಣ > ಫಲ್ಗುಣ
ಬಲರಾಮ
ಬಲಿ
ಬೌದ್ಧ
ಬ್ರಹ್ಮ
ಬ್ರಹ್ಮದೇವ
ಭರತ
ಭರ್ಗ
ಭಾಗೀರಥಿ
ಭವಾನಿ
ಭಾರತೀದೇವಿ
ಭಾರದ್ವಾಜ
ಭಾರ್ಗವ
ಭಾಸ್ಕರ
ಭೀಮ
ಭೀಮರಾಯ
ಮಂತುಣಿ > ಮಂಥರೆ
ಮಕರಧ್ವಜ
ಮದನ
ಮಧು
ಮಧುರಾಪುರ
ಮಧ್ವರಾಯ
ಮಲಾಪಹಾರಿ
ಮಲೆಬೆನ್ನೂರು
ಮಲೆಯಾಳ
ಮಹಾಬಲಲಿಂಗ
ಮಹಾರಾಷ್ಟ
ಮಹಿಷಾಸುರ
ಮಾಧವ
ಮಾರ
ಮಾರಿ

# ಅನುಬಂಧ –೪

## ವಿಶೇಷ ಪದಸೂಚಿ

**೧. ಉಡುಗೆ ತೊಡುಗೆಗಳು**

ಅಂಗಿ
ಅಂದುಗೆ
ಅಡ್ಡಿಕೆ
ಅಲಗೊತ್ತು
ಅಸಲಿ
ಇಂದ್ರಮಾಣಿಕದೋಲೆ
ಇಂದ್ರಮಾಣಿಕ ನವರತ್ನದ ತೊಡಿಗೆ
ಉಡಿದಾರ
ಎಡೆಪಣೆ ಚಿಂತಾಕ
ಏಕಾವಳಿ
ಐದುಕಡಗ
ಒಡ್ಯಾಣ
ಕಂಕಣ
ಕಂಚುಕ
ಕಂಚುಳಿಕೆ
ಕಂಠಮಾಲೆ
ಕಂಠೀಸರ
ಕಡಗ
ಕದಂಬದ ಕಡಗ
ಕಾಜಿನ ಬಳೆ
ಕಾಲಂದಿಗೆ
ಕಾಲುಂಗುರ
ಕಿರೀಟ
ಕಿರುಗೆಜ್ಜೆ
ಕುಂಡಲ
ಕುಂದಣ ರನ್ನದಡ್ಡಿಕೆ
ಕೈಪ
ಕೊಪ್ಪು
ಕೌಸ್ತುಭಹಾರ
ಗಟ್ಟಿಕಂಕಣ
ಗುಂಜಿಯ ದಂಡೆ
ಗುಂಡಿನ ಸರ
ಚಂದ್ರಗಾವಿ
ಚಳಕ
ಚಳತಿಗೆ
ಚಿಂತಾಕು
ಚೀನಾಂಬರ
ಚೂಡಾರತ್ನ
ಚೊಗೆ
ಚೌಕುಳಿ
ಟೊಪ್ಪಿಗೆ
ತೊಂಡಲ್
ತೋಳಚಳರಕ್ಷೆ

ತೋಳಬಾಪುರಿ
ದೇವಾಂಗ
ಧೋತುರ
ನವರತ್ನಖಚಿತ ಒಡ್ಯಾಣ
ಪಂಜಿನೋಲೆ
ಪಚ್ಚೆಸರ
ಪಟ್ಟುಪಟ್ಟಾವಳಿ
ಪದಕ
ಪಾಯವಟ್ಟಿ
ಪಾವುಡೆ
ಪೀತಾಂಬರ
ಪೆಂಡೆಯ
ಬಿಂದುಲಿ
ಬಿಲ್ಲೆಸರ
ಬಾಜುಬಂದು
ಬಾಪುರಿ
ಬಾವುಲಿ
ಬೆರಳ ಮುದ್ರಿಕೆ
ಭುಜಕೀರ್ತಿ
ಮಂಜಾಡಿಯ ಸರ
ಮಕರ ಕುಂಡಲ
ಮಣಿಹಾರ
ಮಾಂಗಲ್ಯ ಸೂತ್ರ
ಮಾಗಾಯಿ
ಮಾಣಿಕದ ಹರಳುಂಗುರ
ಮಾಣಿಕ್ಯದ ಹಾವಿಗೆ
ಮಾಣಿಕ್ಯ ಮೌಕ್ತಿಕ ಹಾರ
ಮುಂಗಯ್ಯ ಸರಿಗೆ
ಮುರಿಗೆ
ಮುತ್ತು ತಾಯಿತ
ಮುತ್ತಿನ ಬಟ್ಟು
ಮುತ್ತಿನ ಹತ್ತೆ ಕಡಗ
ಮುದ್ರಿಕೆ
ಮುರ
ಮೂಗುತಿ
ಮೆಂಟಿಕೆ ಪಿಲ್ಲಿ
ಮೇಲುದ
ರನ್ನ ಕಾಂಚಿಯದಾಮ
ವಜ್ರದ ಕೊಪ್ಪು
ವಜ್ರದಡ್ಡಿಕೆ
ವಜ್ರಮಾಣಿಕದೋಲೆ
ವಾಲಿ > ವಾಲೆ
ವೀರ ಮುದ್ರೆ
ಸರ
ಸರಪಣಿ
ಸರಿಗೆ
ಸಲಿಗೆ
ಸಾಲುಗಂಟೆ ಗೆಜ್ಜೆ
ಸುಪ್ಪಾಣಿ ಮುತ್ತು
ಸೂಕ್ಷ್ಮದೊಸ್ತ್ರ
ಸೂಸಕ
ಸೊನ್ನೆದಾಮ
ಹತ್ತೆಸರ
ಹರಳೋಲೆ
ಹವಳಸರ
ಹಸುರ ಕುಪ್ಪಸ
ಹಿಡಿವಾಳ ಕಡಗ
ಹೆಡೆಯ ಮಣಿ

ಹೊಂಬಟ್ಟೆ
ಹೊಂಬಾಳೆ ಸರ
ಹೊನ್ನ ಸೂಡಗ
ಹೊನ್ನುಂಗುರ
ಹೊನ್ನೂವು

**೨.ಅಡಿಗೆ,ತಿಂಡಿ, ಪರಿಕರಗಳು**

ಅಂಬಲಿ
ಅಕ್ಕಿ
ಅಜಿ ಭಕ್ಷ್ಯ
ಅಣ್ಣೆವಾಲು
ಅತಿರಸ
ಅನ್ನ
ಅಪ್ಪಲು
ಅವರಿಸಾರು
ಉಪ್ಪು
ಉಪ್ಪಿನಕಾಯಿ
ಉಪ್ಪಿನೆಸರು
ಎಣ್ಣೊರಿಗೆ
ಎರೆಯಪ್ಪ
ಎಳನೀರು
ಎಳ್ಳುಮಂಡಿಗೆ
ಓಗರ
ಕಂದಮೂಲ
ಕಡಲೆ
ಕಡಲೆ ಬೇಳೆ ತವ್ವಿ
ಕಣಿಕ
ಖಂಡಸಕ್ಕರೆ
ಖಾರ ಚರ್ವಣೆ
ಘೃತ
ಚಿಗುಳಿ
ಚಿತ್ರಾನ್ನ
ಜೇನುತುಪ್ಪ
ಜೋಳದ ಅನ್ನ
ತುಪ್ಪ
ತುಪ್ಪಕಜ್ಜಾಯ
ತುರಿಗಾಯಿ ಕಡಬು
ತೆಂಗಿನಕಾಯಿ
ದಧ್ಯನ್ನ
ನೊರೆಹಾಲು
ಪಡವಳ ಕುಂಬಳಕಾಯಿ ಸಾರು
ಪರಮಾನ್ನ
ಪಳದ್ಯ
ಪಾನಕ
ಪಾಯಸ
ಪುಷ್ಪಮಂಜರದ ಅಕ್ಕಿಅನ್ನ
ಪೇಣಿ
ಬಾಳಕ
ಬೆಣ್ಣೆ
ಬೆಣ್ಣೆಚಕ್ಕುಲಿ
ಬೆಲ್ಲ
ಬೇಳೆ
ಮಂಡಿಗೆ
ಮೇಲೋಗರ
ಮೊಸರು
ಮೋದಕ
ಯಾಲಕ್ಕಿ
ಶಾಲ್ಯನ್ನ
ಶುಂಠಿ

# ಅನುಬಂಧ –೫

## ಅಪೂರ್ಣ ಕೃತಿ

### ಕೃಷ್ಣ ಕೊರವಂಜಿ

ಶುಕ್ಲಾಂಬರವನುಟ್ಟ ಚಕ್ರಧರಗೆ ನಮಿಸಿ
ವಕ್ರಬುದ್ಧಿಯ ತಿದ್ದಿಕೊಂಬೆ ನಾನು
ಆದಿಗಣನಾಯಕ ಮೋದಕ ಕೊಡವೆನು
ಸಾಧಿಸಿಕೊಡು ಎನಗೆ ಕವಿತಾವ
ವಾಯುಕುಮಾರಗೆ ವಿನಯದಲೊಂದಿಸಿ
ಕಾಯೊ ಕರುಣದಿ ನಮೋ ಎಂಬೆ
ಭಾರತೀದೇವಿ ನೀ ಸಾರಥಿಯಾಗಮ್ಮ
ಸೇರುವೆ ಚರಣಕಮಲ ನಿಮ್ಮ
ನಂದಿವಾಹನ ದೇವ ವಂದಿಸುವೆನು ನಿಮಗೆ
ಮುಂದಿನ ನುಡಿಯ ಹೇಳು

ಕೊರವಿ ಹುಬ್ಬಿನ ಕೂಟ ಧರೆಗೆ ಚಾಪದ ನೋಟ
ಗುಲಗಂಜಿ ಸರಗಳು ಎದೆಯಲಿ ಅಲೆಯುತ
ಮಲಗಂಟ ಬಿಗಿದಾಳ ಮಲುಹಾಕಿ
ಹೆಬ್ಬಾಗಿಲದೊಳ್ ಹುಬ್ಬುಗಳ ಕುಣಿಸುತ
ಅಬ್ಬರದಿಂದ ಸ್ವರಗೈದಾಳು
ಏಯವ್ವಾ ಏಯಕ್ಕಾ ಏಯಮ್ಮಾ ಬಾರೆಂದು
ಸಾರುತ ನಡೆದಾಳ ಕೊರವಂಜಿ
ಹೇಳುತ ಕೇಳುತ ಕರತಳನಿಕ್ಕುತ
ಏಳು ಉಪ್ಪರಿಗೆ ಕಂಡಳು ಬ್ಯಾಗ

ಅಂಗವಂಗವು ಕಾಳಿಂಗ ಕಾಶ್ಮೀರ ದೇಶ
ಹಿಂಗದೆ ತಿರುಗಿ ಬಂದೆನೆ ದುಂಡಿ
ಅಂಜದಿರು ಅಂಜದಿರು ಕಂಜಲೋಚನಿ ಮಂಜು ತಿಳಿದಂತೆ ನಿ
ನ್ನಂಜಿಕೆ ಪರಿಹಾರ ಸಂಜೀವಿನೀ ಮಾತು ಒಂದು ಮನಸು ಮಾಡ.

## ಗಿರಿಯಮ್ಮನ್ನು ಕುರಿತ ಕೀರ್ತನೆ

## (ಸೋಸಲೆ ವೆಂಕಟದಾಸ ಕೃತ)

ಕಾಯೊಯನ್ನಾ ಸ್ವಾಮಿ ಶ್ರೀರಂಗಾ ಕಾಯೊಯನ್ನ ಪ

ಕಾಯಜಪಿತ ನಿನ್ನ ಮಾಯಕೆ ಸಿಲುಕಿ
ಹೇಯ ಬುದ್ಧಿಯ ನೀಗಿ ತೋಯಜಾಕ್ಷನೆ ದೇವಾ ಅ.ಪ

ದ್ವಿತಿಯುಗದಲಿ ವೇದಾವತಿಗಿತ್ತ ವಚನವಾ
ಪ್ರತಿಕರಿಸಲು ಕಲಿಯುಗದಿ
ಪತತ ಮಾಧವ ಪುತ್ರಿ ಪ್ರತಿ ಗ್ರಹಕೆ ಸುರ
ತತಿಗಳನೆಲ್ಲನೆರಹಿದೆಯೊ ಕಾಯೊಯನ್ನಾ ೧

ಪರಮ ಸಂಭ್ರಮದಿಂದಾ ತರುಣಿ ಪದ್ಮಾವತಿ
ಪರಿಣಯ ಮುಗಿಸಿ ನೀ ಹರುಷದಿಂದ
ಅರುಣಾವೈನತೇಯ ವರಹನುಮನ ಕೂಡಿ
ಕರುಣಾದಿ ಆಜ್ಞೆಯನಿತ್ಯೊ ದಯಾಳು ನೀ ಕಾಯೊಯನ್ನಾ ೨

ತರಣಿದೂತನ ವರ ಕರುಣೀಸಲೊಸುಗ
ಮರಡೀಯ ವಲ್ಮಿಕಕ್ಕೆ ಬರಲು ನೀನು
ತುರುಗಳಾ ಕಾವುತ ಪರಮಾ ಹರುಷದಿಂದ
ತೆರಳೆ ಹೆಳವತಾನೂ ಹರಿಯೆ ನಿನ್ನನು ಕಂಡ ೩

ವರ ಅಂಗನಾಮಣಿ ಗಿರಿಯಮ್ಮ ದೇವಿಯು
ಅರುಣೋದಯದಿ ದಧಿಮಥಿಸುತಿರೆ
ತರಳಾನಂದದಿ ಬಂದು ಸೆರಗಾ ಪಿಡಿದು
ಪರಿಪರಿ ನರ್ತಿಸಿ ಬೆಣ್ಣೆ ತ್ವರಿತಾದಿ ಮೆದ್ದಿಯೊ ೪

ಪುಂಗರಾಜಲ ಮೇಲಾ ಮಂಗಾಪತಿ ನಿನ್ನಾ ಭು–
ಜಂಗ ಗಿರಿಗೆ ಬಂದು ತ್ವರಿತಾದಿಂದಾ
ಹಿಂಗಿದ ನಯನವಾ ಕಂದಾಗೆ ಕೊಡುಯೆಂದು
ಮಂಗಳಾಂಗನೆ ದೇವಯೆಂದು ಪ್ರಾರ್ಥಿಸುತಿರಲು ೫

ಸಂದರಾಜನೆ ಮಂದ ಬುದ್ಧಿಯ ಬಿಟ್ಟು
ಛಂದದಿ ಭಾಂಡದೊಳ್ ಘೃತದೀಪದಿ
ಮಂದಗಮನೆಯುತಾ ಪ್ರೀತಿಯಾಗುಜ್ವಲ
ನಂದಾದೀಪ ಲೇಪನದಿಂದಾ ಪೊಂದುವಿಯೆಂದೆ ೬

ಭೂಪತಿ ಹರುಷದಿ ತಾ ಪುಡುಕುತಬರೆ
ತಾಪತಿ ಗೃಹದಲ್ಲೆ ಪ್ರಾಪುತಾದವನಾ
ತಾಪ್ರೀತಿಯಿಂದಲಿ ವ್ಯಾಪಕ ನೀನೆನ್ನ
ಶ್ರೀ ಪತಿ ಪೊರದೆ ನೀಪಾಪಹರಣ ದೇವ ೭

ಸಡಗರದಿಂದಲಿ ಮಡವುಗುಡಿ ಕಟ್ಟಿಸಿ
ವಡನೆ ಪಟ್ಟಣಕೆ ತಾ ಗಿರಿಯಮ್ಮ ನಾ
ಕಡುದಯಾಸಾಗರನೆಂದು ಕೂಗಲು ಬೇಗ
ಜಡಜಾಕ್ಷಿ ಕೃಷ್ಣೆ ಮಾರ್ಗವನಿತ್ತಳು ೮

ಕರ್ಮನಾಶಕ ಹೆಳವನಕಟ್ಟೆ ರಂಗನಾ
ಮೊಮ್ಮನಸಹಿತ ಶಂಕರನೊಡಗೂಡಿ
ದುರ್ಮತಾಹರನಲ್ಲಿ ಅಂತರ್ಗತನಾದ
ಬೊಮ್ಮನ ಪಿತನಾದ ವೆಂಕಟ ವಿಠಲನೆ ೯

# ಅನುಬಂಧ–೬

## ಕೀರ್ತನೆಗಳ ಆಕಾರಾದಿ

| ಕ್ರಮ. ಸಂಖ್ಯೆ. | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| **ಭಾಗ– ೧** | | |
| ೧. | ಆಡುತ್ತಾ ಬಾರಂಮಾ ನಲಿದಾಡುತ್ತಾ ಬಾರಂಮಾ | ೨೫ |
| ೨. | ಆರಿಗಾದರು ಪೂರ್ವದ ಕಟ್ಟಳಿಯು ತಪ್ಪದು | ೪೭ |
| ೩. | ಇಂಥಾವಗ್ಯಾಂಗೆ ಮನಸೋತೆ ಬಲು | ೦೧ |
| ೪. | ಇಂದು ನೀ ಕರದು ತಾರೆ ಬೇಗನೆ | ೦೨ |
| ೫. | ಈತ ಅಂಜನೆ ಸುತನು ಭೀಮರಾಯನು | ೨೬ |
| ೬. | ಈತ ರಂಗನಾದ ಹರಿಯು | ೫೧ |
| ೭. | ಈತ ಲಿಂಗದೇವ ಶಿವನು | ೫೨ |
| ೮. | ಎಂದು ಕಾಹುವೆ ಎನ್ನ ಮನೋಹರ | ೩೩ |
| ೯. | ಏನ ಹೇಳಲಿ ಈತನಿರವ ಭಕ್ತರ ಮನ | ೦೩ |
| ೧೦. | ಏನಾಹೇಳಲಿ ಕೃಷ್ಣನ ಗುಣವಾ | ೦೪ |
| ೧೧. | ಏನಿದು ಬಯಲಪಾಶ ನೋಡಿದರಿಲ್ಲಿ | ೩೪ |
| ೧೨. | ಕಂಡೆನೀಗ ರಂಗನಾಥನ ಕಾರುಣ್ಯ ನಿಧಿಯ | ೦೫ |
| ೧೩. | ಕಡೆಗಣ್ಣಲಿ ನೀ ನೋಡದಿರೆನ್ನಯ್ಯ | ೩೫ |
| ೧೪. | ಕರೆದಳು ತನ್ನ ಮಗನ ಯಶೋದೆ | ೦೬ |
| ೧೫. | ಕಾಯೋ ಕರುಣಾಕರನೆ ನೀಯನ್ನಾ | ೩೬ |
| ೧೬. | ತಾರಮ್ಮ ಶ್ರೀರಂಗಧಾಮನ ತಂದು | ೦೭ |
| ೧೭. | ತಿಳಿಯದೋ ನಿನ್ನಾಟ ತಿರುಪತಿ ವೆಂಕಟ | ೦೮ |
| ೧೮. | ತೋರಬಾರದೆ ನಿಮ್ಮ ಚರಿತೆಯನು | ೦೯ |
| ೧೯. | ದಯಾಪೂರ್ಣ ಗುಣನಿಧಿಯೆ | ೩೭ |
| ೨೦. | ದ್ವಾರಾವತಿಯಲಿ ದನುಜದಲ್ಲಣ | ೪೯ |

## ಭಾಗ – ೨

## ದೀರ್ಘ ಕೃತಿಗಳು

# ಸಹಾಯಕ ಸಾಹಿತ್ಯ


೧. ಕರ್ನಾಟಕ ಕವಯಿತ್ರಿಯರು – ಡಾ ಸರೋಜಿನಿ ಮಹಿಷಿ

೨. ಗೋಕರ್ಣ – ಗೌರೀಶಕಾಯ್ಕಿಣಿ

೩. ದಾಸ ಸಾಹಿತ್ಯ ದರ್ಶನ – ಸಂ.ಎಚ್ಚೆಸ್ಕೆ

೪. ಪುರಾಣನಾಮಚೂಡಾಮಣಿ – ಸಂ.ಬೆನಗಲ್ ರಾಮರಾವ್ ಪಾನ್ಯಂ ಸುಂದರ ಶಾಸ್ತ್ರೀ

೫. ಪುರಾಣ ಭಾರತ ಕೋಶ – ಯಜ್ಞನಾರಾಯಣ ಉಡುಪ

೬. ಕರ್ನಾಟಕ ಭಕ್ತ ವಿಜಯ – ಬೇಲೂರು ಕೇಶವ ದಾಸರು

೭. ಶ್ರೀ ವತ್ಸನಿಘಂಟು – ಡಾ ಟಿ.ವಿ.ವೆಂಕಟಾಚಲ ಶಾಸ್ತ್ರೀ

೮. ಸಂಪ್ರದಾಯದ ಹಾಡುಗಳು – ಸಂ.ಬಿ.ಎಸ್.ಸರೋಜ

೯. ಹರಪನಹಳ್ಳಿ ಭೀಮವ್ವನ ಹಾಡುಗಳು – ಸಂ.ಡಾ ಟಿ.ಎನ್.ನಾಗರತ್ನ

೧೦. ಹೆಳವನಕಟ್ಟೆ ಗಿರಿಯಮ್ಮ – ಕಮಲಾ ಹಂಪನಾ

೧೧. ಹೆಳವನಕಟ್ಟೆ ಗಿರಿಯಮ್ಮ ಹಾಡುಗಳು – ಸಂ.ಕಾವ್ಯಪ್ರೇಮಿ

೧೨. ಹೆಳವನಕಟ್ಟೆ ಗಿರಿಯಮ್ಮ – ಜಯಸಿಂಹ

೧೩. ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು – ಸಂ.ಟಿ.ಕೆ.ಇಂದುಬಾಯಿ

೧೪. ಹೆಳವನಕಟ್ಟೆ ಗಿರಿಯಮ್ಮ – ಬಿ.ವಿ.ವೀರಭದ್ರಪ್ಪ

೧೫. ದಾಸಸಾಹಿತ್ಯದ ಕೆಲವು ನೋಟಗಳು – ಲೀಲಾವತಿ ಎಸ್.ರಾವ್

೧೬. ಹೆಳವನಕಟ್ಟೆ ಗಿರಿಯಮ್ಮ – ಕಾಕೋಳು ಸರೋಜಾ ರಾವ್

೧೭. ಹೆಳವನಕಟ್ಟೆ ಗಿರಿಯಮ್ಮ – ಮೈ.ಸು.ಶೇ.

೧೮. ಲವಕುಶರಕಾಳಗ – ಕೈಬರಹದ ಕಾಗದದ ಪ್ರತಿ

೧೯. ಗಿರಿಯಮ್ಮನವರ ಚರಿತ್ರೆ – ಕೈಬರಹದ ಕಾಗದದ ಪ್ರತಿ

೨೦. ಗಿರಿಯಮ್ಮನ ಕೃತಿಗಳು – ವೇದ ಮೂರ್ತಿ ಅರ್ಚಕ ಸುಬ್ಬಣ್ಣಾಚಾರ್

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು